

ಚರಿತ್ರ ವಿಭಾಗ ಮಾಲೆ-೫

# ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು

ಏಕೀಕರಣೋತ್ತರ ಕರ್ನಾಟಕ ಚಳವಳಿ ಸಂಪುಟ-೫

ಪ್ರೊ. ಲಕ್ಷ್ಮಣ್ ತೆಲಗಾವಿ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಚರಿತ್ರೆ ವಿಭಾಗ ಮಾಲೆ - ೫

# ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು

ಏಕೀಕರಣೋತ್ತರ ಕರ್ನಾಟಕ ಚಳವಳಿ ಸಂಪುಟ - ೫

ಪ್ರೊ. ಲಕ್ಷ್ಮಣ್ ತೆಲಗಾವಿ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**HINDULIDA VARGAGALA MATTU**
**DALITA CHALAVALIGALU**
A Study of Backward Classes and Dalit Movements
by Prof. Laxman Telagavi
Head, Department of History
Kannada University, Hampi

(Post Unification Karnataka Movements Series- Vol. 5)

*Published by*
Prof. A. V. Navada
Director, Prasaranga
Kannada University, Hampi
Vidyaranya - 583 276

Pages : xvi+176

First Edition 1999

Price : Rs. 80/-



ಪ್ರಕಾಶಕರು
ಪ್ರೊ. ಎ. ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಬೆಲೆ : ರೂ. ೮೦/-

ಮುಖಪುಟ : ಕೆ. ಕೆ. ಮಕಾಳಿ

ಮುದ್ರಣ
ಲಕ್ಷ್ಮಿಮುದ್ರಣಾಲಯ
೧೧೭/೨, ೫ನೇ ಮುಖ್ಯರಸ್ತೆ
ಚಾಮರಾಜಪೇಟೆ, ಬೆಂಗಳೂರು - ೧೮
✆ ೬೬೧೫೧೨೫, ೬೬೧೮೭೫೨

*

# ದೇಸಿಯೊಳ್ ಪುಗುವುದು

ಡಾ. ಎಂ.ಎಂ.ಕಲಬುರ್ಗಿ
ಕುಲಪತಿಗಳು

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ. ಆದಿಕವಿ ಪಂಪ, ಸಾಹಿತ್ಯಕ್ಕೆ ಅನ್ವಯಿಸಿ ಹೇಳಿರುವ 'ದೇಶಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು' ಎಂಬ ಮಾತು ಪರ್ಯಾಯವಾಗಿ ಇದನ್ನೇ ಧ್ವನಿಸುತ್ತದೆ.

ಸಂಸ್ಕೃತಿ ಎನ್ನುವುದು ಸಮೂಹಸಮ್ಮತ ಜೀವನಪದ್ಧತಿಯಾಗಿದೆ. ಕನ್ನಡಿಗರ ಇಂಥ ಜೀವನಪದ್ಧತಿಗೆ ಸಾವಿರ ಸಾವಿರ ವರ್ಷಗಳ ಇತಿಹಾಸವಿದೆ. ತನ್ನ ಆಯುರ್ಮಾನದಲ್ಲಿ ಆರ್ಯ-ಆಂಗ್ಲ ಸಂಸ್ಕೃತಿಗಳನ್ನು ಜೀರ್ಣಿಸಿಕೊಳ್ಳುತ್ತ ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕುಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನ ಶೈಲಿ ನಮ್ಮ ಜೀವನಾಡಿಗಳನ್ನು ದಿನೇ ದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶಿ ಚಳವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ ಕನ್ನಡ ವಿಶ್ವವಿದ್ಯಾಲಯ ಮೊದಲು ಮಾಡಬೇಕಾದ ಕೆಲಸವೆಂದರೆ ವಿಸ್ಮೃತಿಯ ಸಾಗರದಲ್ಲಿ ಮುಳುಗಿಹೋಗಿರುವ ನಮ್ಮ ಪಾರಂಪರಿಕ ಕ್ರಿಯೆ, ಪ್ರಕ್ರಿಯೆ ರೂಪದ 'ಸ್ವದೇಶೀ ಸತ್ಯ'ಗಳನ್ನು ಶೋಧಿಸುವುದು; ಬಳಿಕ ಅಲ್ಲಿ ಸೇರಿಕೊಂಡಿರುವ ದೋಷಗಳನ್ನು ದೂರ ಸರಿಸಿ ಗುಣಾಂಶಗಳನ್ನು ಗುರುತಿಸುವುದು; ಜೊತೆಗೆ ಪೂರ್ಣ ಬದುಕಿಗೆ ಅವಶ್ಯವಿರುವ ಕೊರತೆಗಳನ್ನು ಅನ್ಯಸಂಸ್ಕೃತಿಯಿಂದ ಎಚ್ಚರವಹಿಸಿ ತುಂಬಿಕೊಳ್ಳುವುದು. ಒಟ್ಟಾರೆ ಅನ್ಯಸಂಸ್ಕೃತಿಗಳ ಸಹಯೋಗದಲ್ಲಿಯೂ 'ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಬದುಕಿಸಬೇಕಾಗಿದೆ, ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು ನಾಶಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ: ಜಾಗತಿಕವಾಗುವುದೆಂದರೆ ಸ್ಥಾನಿಕದ ನಿರಾಕರಣೆಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, 'ಎಲ್ಲ ರಸ್ತೆಗಳು ರೋಮ್‌ದ ಕಡೆಗೆ' ಎಂಬಂತೆ ಕನ್ನಡದ ಎಲ್ಲ ಹಾದಿಗಳು ಹಂಪಿಯ ಕಡೆಗೆ

ಕೇಂದ್ರೀಕರಣಗೊಳ್ಳುವ ಮತ್ತು ಇಲ್ಲಿಂದಲೇ ಜಗತ್ತಿನ ಅಂಚಿನತ್ತ ವಿಕೇಂದ್ರೀಕರಣಗೊಳ್ಳುವ ವಾತಾವರಣವನ್ನು ನಿರ್ಮಾಣ ಮಾಡಬೇಕಾಗಿದೆ. ಈ ರೀತಿ ಐತಿಹಾಸಿಕ ಪರಂಪರೆಯ ಮತ್ತು ಭೌಗೋಳಿಕ ಪರಿಸರಗಳಲ್ಲಿ ಶ್ರಮಿಸಬೇಕಾಗಿರುವ ಕನ್ನಡ ವಿಶ್ವವಿದ್ಯಾಲಯ 'ಎಂದೆಂದಿಗೂ ನೀ ಕನ್ನಡವಾಗಿರು' ಎಂಬ ಪ್ರಜ್ಞೆ ಕನ್ನಡಿಗರಲ್ಲಿ ಜಾಗೃತವಾಗಿರುವಂತೆಯೂ ನೋಡಿಕೊಳ್ಳಬೇಕಾಗಿದೆ.

ಈ ಎಲ್ಲ ನೆಲೆಗಳಲ್ಲಿ ಸೃಷ್ಟಿಯಾಗುವ ತನ್ನ ಶೋಧನೆ-ಚಿಂತನೆಗಳನ್ನು ದಾಖಲಿಸಬೇಕೆಂಬ ಮತ್ತು ಸಂವಹನಗೊಳಿಸಬೇಕೆಂಬ ತೀವ್ರ ಹಂಬಲದಿಂದ ಈ ವಿಶ್ವವಿದ್ಯಾಲಯ 'ಪ್ರಸಾರಾಂಗ' ಹೆಸರಿನ ಪ್ರಸಾರಮಾಧ್ಯಮ ಸಂಸ್ಥೆಯನ್ನು ಅಸ್ತಿತ್ವಕ್ಕೆ ತಂದಿದೆ. ಶ್ರವ್ಯ, ದೃಶ್ಯ, ವಾಚನ ಸಾಮಗ್ರಿಗಳ ಉತ್ಪಾದನೆ-ವಿತರಣೆ ಇತ್ಯಾದಿ ಕಾರ್ಯಗಳನ್ನು ಕೈಗೆತ್ತಿಕೊಂಡಿರುವ ಇದು, ವಾಚನ ಸಾಮಗ್ರಿಯಾಗಿರುವ ಪುಸ್ತಕಗಳ ಉತ್ಪಾದನೆಗೆ ವಿಶೇಷ ಕಾಳಜಿ ವಹಿಸಿದೆ. ಆಂತರಿಕ ಸತ್ವ, ಬಾಹ್ಯ ಸೌಂದರ್ಯಗಳಿಂದ ಕೂಡಿರುವ ವಿಶಿಷ್ಟ 'ಪುಸ್ತಕ ಸಂಸ್ಕೃತಿ'ಯನ್ನು ಅಸ್ತಿತ್ವಕ್ಕೆ ತರುತ್ತಲಿರುವ ಈ ಪ್ರಸಾರಾಂಗದ ಇತ್ತೀಚಿನ ಪ್ರಕಟಣೆಯಾಗಿದೆ 'ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು'.

ಅನ್ಯಾಯವನ್ನು ಸಹಿಸಿಕೊಂಡು ಹೋಗುತ್ತಲಿರುವ ಸ್ವಭಾವದ ಭಾರತೀಯರು ಇತ್ತೀಚೆ ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುವ ಮನೋಧರ್ಮವನ್ನು ರೂಢಿಸಿಕೊಂಡಿರುವ ಫಲ 'ಚಳವಳಿ'. ಏಕೀಕರಣೋತ್ತರ ಕರ್ನಾಟಕದಲ್ಲಿ ತಲೆದೋರಿದ ಇಂಥ ಆರು ಮುಖ್ಯ ಚಳವಳಿಗಳನ್ನು ಕುರಿತು ಚರಿತ್ರೆ ವಿಭಾಗವು ಯೋಜನೆಯೊಂದನ್ನು ಕೈಗೆತ್ತಿಕೊಂಡಿದೆ. ಇದರ ಅಂಗವಾಗಿ ಪ್ರಕಟವಾಗುತ್ತಲಿರುವ ಆರು ಕೃತಿಗಳಲ್ಲಿ 'ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು' ಒಂದು. ಇದನ್ನು ರಚಿಸಿದ ಪ್ರೊ. ಲಕ್ಷ್ಮಣ್ ತೆಲಗಾವಿ ಅವರಿಗೆ ನಮ್ಮ ಧನ್ಯವಾದಗಳು ಸಲ್ಲುತ್ತವೆ.

❑❑

# ಲೇಖಕರ ಮಾತು

ಭಾರತೀಯ ಸಾಮಾಜಿಕ ವ್ಯವಸ್ಥೆಯ ವೈಶಿಷ್ಟ್ಯವೆಂದರೆ ಜಾತೀಯತೆ. ಮೇಲ್ನೋಟಕ್ಕೆ ಒಂದೇ ಜನಸಮುದಾಯದಿಂದ ಕೂಡಿದುದೆಂದು ಕಂಡುಬಂದರೂ ಲೆಕ್ಕವಿಲ್ಲದಷ್ಟು ಜಾತಿ-ಉಪಜಾತಿ, ಪಂಗಡ-ಉಪಪಂಗಡ, ಮತ-ಪಂಥಗಳಿಂದ ತುಂಬಿಹೋಗಿದೆ ಈ ಸಮಾಜ. ವೈವಿಧ್ಯತೆ ಈ ಸಮಾಜದ ವಿಶೇಷ ಲಕ್ಷಣವೆಂದರೂ, ಚಾರಿತ್ರಿಕ ನೆಲೆಯಲ್ಲಿ ಸಾಮಾಜಿಕ ಶ್ರೇಣೀಕರಣದ ಪರಿಣಾಮವನ್ನು ಗಮನಿಸುವುದಾದರೆ, ತಾರತಮ್ಯ ಇದರ ಮೂಲಗುಣವೆಂಬುದು ಸ್ಪಷ್ಟಪಡುತ್ತದೆ. ಸಹಸ್ರಾರು ವರ್ಷಗಳಿಂದಲೂ ಭಾರತೀಯ ಜನಸಮುದಾಯಗಳು ಒಂದೇ ನೆಲದ ಮೇಲೆ ವಾಸಿಸಿದ್ದರೂ ಪರಸ್ಪರ ಸಂಬಂಧ ಹೊಂದದಿರುವಷ್ಟರ ಮಟ್ಟಿಗೆ-ಪ್ರತ್ಯೇಕ ದ್ವೀಪಗಳಂತೆ ಉಳಿದುಕೊಂಡು ಬಂದಿವೆ. ಇದು ಈ ದೇಶದ ಚರಿತ್ರೆ ಶ್ರುತಪಡಿಸುವ ಕಟು ವಾಸ್ತವ ಸಂಗತಿ. ಆದರೂ ಇಂಥಾ ವಿವಿಧತೆಯಲ್ಲಿ ಏಕತೆಯನ್ನು ಸಾಧಿಸುವ ನಿಟ್ಟಿನಲ್ಲಿ ಪ್ರಯತ್ನಗಳು ನಡೆಯುತ್ತಲೇ ಬಂದಿದ್ದರೂ, ಕೆಲವು ವಿಷಮ ಪರಿಸ್ಥಿತಿಗಳಲ್ಲಿ ಈ ಗುಂಪುಗಳು ಎಂದಿನಂತೆಯೇ ಪ್ರತ್ಯೇಕವಾಗಿ ನಿಲ್ಲಬಯಸುವುದನ್ನು ನೋಡಬಹುದು.

ಪ್ರಸ್ತುತ ಅಧ್ಯಯನ ಮನದಟ್ಟು ಮಾಡಿಕೊಡಲೆತ್ನಿಸುವುದು ಇದನ್ನೇ. ಚಾರಿತ್ರಿಕ ಯುಗದಿಂದ ಇಂದಿನವರೆಗೆ ಭಾರತೀಯ ಸಮಾಜ ಇಂಥಾ ಜಾತಿಪಿಡುಗುಗಳಿಂದ ನಲುಗಿ ಹೋಗಿದೆ. ಈ ದೇಶದ ಪ್ರಗತಿಗೆ ಇದು ದೊಡ್ಡ ಅಡ್ಡಿಯಾಗಿ ಪರಿಣಮಿಸಿರುವುದು ನಿಜ. ಹರಿದು ಹಂಚಿಹೋಗಿರುವ ಜಾತಿಗಳ ನಡುವೆ ಸಮಾನತೆ - ಸಹಬಾಳ್ವೆಗಳು ಸಾಧ್ಯವಾಗುವುದಾದರೆ ಶಾಂತಿ-ನೆಮ್ಮದಿಗಳು ನೆಲಸುತ್ತವೆನ್ನುವುದುಂಟು; ಜಾತಿವ್ಯವಸ್ಥೆ ಕಾಲಕ್ರಮೇಣ ಮಾಯವಾಗಿ ಜಾತಿರಹಿತ ಹೊಸ ಸಮಾಜ ನಿರ್ಮಾಣಗೊಳ್ಳುತ್ತದೆಂದು ಪರಿಭಾವಿಸುವುದುಂಟು. ಇದು ಕೇವಲ ನಿರೀಕ್ಷೆಯೇ ವಿನಾ ವಾಸ್ತವವಲ್ಲವೆಂಬುದು ಈಗಾಗಲೇ ತಿಳಿದು ಹೋಗಿದೆ. ವ್ಯಕ್ತಿ ಮತ್ತು ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ವಾಸ್ತವತೆಯ ನೆಲೆಯಲ್ಲಿ ನಿರ್ದಿಷ್ಟ ಯೋಜನೆಗಳನ್ನು ಪರಿಣಾಮಕಾರಿಯಾಗಿ ಕಾರ್ಯರೂಪಕ್ಕೆ ತರುವುದರ ವಿನಾ ಈ ಸಮಸ್ಯೆಗೆ ಪರಿಹಾರವಿಲ್ಲ; ಬೇಡಿಕೆಗಳನ್ನು ಈಡೇರಿಸುವುದರ ವಿನಾ ಸುಧಾರಣೆಯಿಲ್ಲವೆಂಬುದು ಮನದಟ್ಟಾಗಿದೆ. ಹಾಗೆಯೇ ಬೇಡಿಕೆಯಿಲ್ಲದೆ ಪೂರೈಕೆಯಿಲ್ಲವೆಂಬಂತೆ, ಹೋರಾಟ-ಸಂಘರ್ಷಗಳಿಲ್ಲದೆ ಬದಲಾವಣೆಯೂ ಇಲ್ಲವೆಂಬುದು ಭಾರತೀಯ ಸಮಾಜದ ಮಟ್ಟಿಗೆ ನಿಜವೆನ್ನಬೇಕು. ಚಲನರಹಿತ ವ್ಯವಸ್ಥೆಗೆ ಪರ್ಯಾಯವೆಂದರೆ ಹೊಸ ಚಿಂತನೆಯ ನೆಲೆಯಲ್ಲಿ ಆಮೂಲಾಗ್ರ ಬದಲಾವಣೆ. ಸಾಮಾಜಿಕ-ಆರ್ಥಿಕ-ಶೈಕ್ಷಣಿಕ ಕ್ಷೇತ್ರಗಳಲ್ಲಿ ಕ್ರಾಂತಿಕಾರಿ ಸುಧಾರಣೆಗಳಾಗದೆ, ರಾಜಕೀಯವಾಗಿ ಅಧಿಕಾರ ಹಸ್ತಾಂತರಗೊಳ್ಳದೆ ಪಟ್ಟಭದ್ರರ, ಬಲಾಢ್ಯರ ಅಟ್ಟಹಾಸ ಅಡಗುವುದಿಲ್ಲ; ಇಂಥವರ

ಕೈಯಲ್ಲಿ ಶೋಷಿತವರ್ಗಗಳು ಸತತವಾಗಿ ಅನುಭವಿಸುತ್ತಿರುವ ತಾರತಮ್ಯವಾಗಲಿ, ದೌರ್ಜನ್ಯವಾಗಲಿ ಕೊನೆಗೊಳ್ಳುವುದಿಲ್ಲ.

ಶತಮಾನಗಳಿಂದ ಭಾರತಾದ್ಯಂತ ನಡೆದಿರುವ ತಳವರ್ಗದವರ, ಹಿಂದುಳಿದ ವರ್ಗದವರ ಪ್ರತಿಭಟನೆಗಳು ಕರ್ನಾಟಕದಲ್ಲಿಯೂ ಕಂಡುಬರುತ್ತವೆ. ೨೦ನೇ ಶತಮಾನದ ಆರಂಭದಲ್ಲಿಯೇ ಇವು ತೀವ್ರಗೊಂಡು ಅಂತ್ಯದ ವೇಳೆಗೆ ಒಂದು ನಿರ್ದಿಷ್ಟ ಹಂತಕ್ಕೆ ತಲುಪುವ ಲಕ್ಷಣ ತೋರಿವೆ. ಆದರೂ ಹೊಸ ಅಡ್ಡಿ-ಆತಂಕಗಳು ಸೃಷ್ಟಿಗೊಂಡು, ಇಂಥಾ ಹೋರಾಟ ನಿರಂತರವೆಂಬ ಭಾವನೆ ಮೂಡಿಸಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಸುಧಾರಣೆಯ ನಿಟ್ಟಿನಲ್ಲಿ ಹಿಂದುಳಿದ ವರ್ಗಗಳು ಎಲ್ಲಾ ಕ್ಷೇತ್ರಗಳಲ್ಲಿಯೂ ಹೊಸ ಸಮಸ್ಯೆಗಳನ್ನು ಎದುರಿಸುವಂತಾದರೆ, ದಲಿತ ಸಮುದಾಯಗಳು ಹೊಸ ಗಂಡಾಂತರಗಳಿಗೆ ಗುರಿಯಾಗತೊಡಗಿವೆ. ಜಾತಿ-ಮತ-ಪಂಥಗಳು ತಮ್ಮ ಹಳೆಯ ಚಹರೆಯನ್ನು ಬದಲಾಯಿಸುತ್ತಲೇ ಹೊಸ ವೇಷದೊಡನೆ ಮತ್ತೆ ಕಾಣಿಸಿಕೊಳ್ಳುತ್ತಿರುವುದೇ ಇಲ್ಲಿಯ ವೈಚಿತ್ರ್ಯ. ಭಾರತೀಯ ಸಮಾಜಕ್ಕೆ ಇಂಥಾ ಪರಿಸ್ಥಿತಿಯಿಂದ ಪಾರಾಗಲು ಯಾವಾಗ ಸಾಧ್ಯವಾದೀತು ಎಂಬುದೇ ಇಲ್ಲಿಯ ಪ್ರಶ್ನೆ. ಜಾತಿವಿನಾಶವೆಂದರೆ ಭಾರತೀಯರೆಲ್ಲರ ಐಕ್ಯಮತ್ಯ ಎಂದು ಡಾ. ಬಿ. ಆರ್. ಅಂಬೇಡ್ಕರ್ ಹೇಳಿದುದು ನಿಜವೆನಿಸಿದರೂ, ಜಾತಿಗಳಿಂದ ಮುಕ್ತವಾದ ಭಾರತವನ್ನು ಕಾಣಲಾದೀತೇ ಎಂಬ ಪ್ರಶ್ನೆಗೆ ಉತ್ತರ ಬೇಕು. ಈ ನಿಟ್ಟಿನಲ್ಲಿ, ಕರ್ನಾಟಕದಲ್ಲಿ ನಡೆದಿರುವ ಹಿಂದುಳಿದ ವರ್ಗಗಳ ಮತ್ತು ದಲಿತ ಚಳಿವಳಿಗಳನ್ನು ಕುರಿತು ಈ ಕೃತಿಯಲ್ಲಿ ವಿವೇಚಿಸಲು ಪ್ರಯತ್ನಿಸಲಾಗಿದೆ.

ಪ್ರಸ್ತುತ ಯೋಜನೆಗೆ ಹಲವು ಮಿತಿಗಳಿವೆ. ಹಿಂದುಳಿದ ವರ್ಗಗಳು, ಆಯೋಗಗಳು ಹಾಗೂ ದಲಿತವರ್ಗಗಳನ್ನು ಕುರಿತು ಇಲ್ಲಿ ಸಮಗ್ರವಾಗಿ ಅಧ್ಯಯನಿಸಲಾಗಿಲ್ಲ. ಆದರೂ ಸಾಧ್ಯವಿದ್ದಷ್ಟು ಮಾಹಿತಿಯನ್ನು ಕ್ರೋಢೀಕರಿಸಿ ಇಲ್ಲಿ ಉಪಯೋಗಿಸಿಕೊಂಡಿದೆ. ಈ ಕ್ಷೇತ್ರದಲ್ಲಿ ಹೆಚ್ಚಿನ ಕೆಲಸ ಮಾಡುವವರಿಗೆ ಈ ಕೃತಿಯಿಂದ ಸ್ವಲ್ಪವಾದರೂ ಪ್ರಯೋಜನವಾಗುವುದಾದರೆ ನನ್ನ ಪ್ರಯತ್ನಕ್ಕೆ ತಕ್ಕ ಬೆಲೆ ದೊರೆತಂತಾಗುತ್ತದೆ. ಈ ಕೃತಿಯನ್ನು ಸುಧಾರಿಸಿಕೊಳ್ಳುವಲ್ಲಿ ಅಗತ್ಯ ಸಲಹೆ-ಸೂಚನೆಗಳಿಗೆ ಸ್ವಾಗತವಿದೆ.

ಇಂಥಾ ಅಧ್ಯಯನ ಕೈಗೊಳ್ಳಲು ಪ್ರೇರಣೆ ನೀಡಿದವರು ನಮ್ಮ ನೆಚ್ಚಿನ ಕುಲಪತಿ ಡಾ. ಎಂ. ಎಂ. ಕಲಬುರ್ಗಿ ಅವರು. ಅವರ ಆಸಕ್ತಿ ಮತ್ತು ಪ್ರೋತ್ಸಾಹಗಳಿಂದಾಗಿ ಚರಿತ್ರೆ ವಿಭಾಗವು ಏಕೀಕರಣೋತ್ತರ ಕರ್ನಾಟಕದ ಪ್ರಮುಖ ಚಳವಳಿಗಳನ್ನು ಕುರಿತು ಅಧ್ಯಯನ ಕೈಗೊಳ್ಳಲು ಸಾಧ್ಯವಾಯಿತು. ನಮ್ಮ ಆಲೋಚನೆಗಳನ್ನು, ಅಧ್ಯಯನದ ಅಪೇಕ್ಷೆಯನ್ನು ಅಭಿಮಾನಪೂರ್ವಕ ಈಡೇರಿಸಿದ ಮಾನ್ಯ ಕುಲಪತಿಯವರಿಗೆ ನಾನು ಆಭಾರಿಯಾಗಿದ್ದೇನೆ.

ಈ ಕೃತಿಯ ಸಿದ್ಧತೆಯಲ್ಲಿ ಆತ್ಮೀಯ ಸಹಕಾರ ನೀಡಿದವರು ನನ್ನ ಸಹೋದ್ಯೋಗಿ ಮಿತ್ರರಾದ ಡಾ. ಟಿ. ಪಿ. ವಿಜಯ್, ಡಾ. ಸಿ. ಆರ್. ಗೋವಿಂದರಾಜು, ಕೆ. ಮೋಹನ್ ಕೃಷ್ಣ ರೈ, ವಿರೂಪಾಕ್ಷಿ ಪೂಜಾರಹಳ್ಳಿ ಮತ್ತು ಎನ್. ಚಿನ್ನಸ್ವಾಮಿ ಸೋಸಲೆ ಅವರು. ಈ ಯೋಜನೆಗೆ ಅಗತ್ಯವಿದ್ದ ಕೆಲವು ದಾಖಲೆಗಳು ಹಾಗೂ ಪುಸ್ತಕಗಳನ್ನು ಒದಗಿಸುವಲ್ಲಿ

ಶ್ರಮವಹಿಸಿದವರು ನನ್ನ ಸಂಶೋಧನ ವಿದ್ಯಾರ್ಥಿ ಕೆ. ಆರ್. ಜೆ. ರಾಜ್‌ಕುಮಾರ್. ಹಾಗೆಯೇ, ಗೆಳೆಯರಾದ ಎ. ವೆಂಕಟೇಶ್, ಎಂ. ಚಿತ್ರಲಿಂಗಸ್ವಾಮಿ, ಎಸ್. ಆರ್. ಗುರುನಾಥ್, ರಮೇಶ್ ಎಫ್. ನಾಯಕ್, ಎ. ಶ್ರೀಧರ್ ಅವರು ಕೆಲವು ಉಪಯುಕ್ತ ಪುಸ್ತಕಗಳನ್ನು ಒದಗಿಸಿ ಉಪಕರಿಸಿದ್ದಾರೆ. ಹಸ್ತಪ್ರತಿಯನ್ನು ಗಮನಿಸುವುದರೊಡನೆ ನನ್ನೊಂದಿಗೆ ಮುಕ್ತವಾಗಿ ಚರ್ಚಿಸುವ ಔದಾರ್ಯ ತೋರಿದ್ದಾರೆ ಗೆಳೆಯ ಸಿ. ಕೆ. ಮಹೇಶ್. ಹಿರಿಯರಾದ ಪ್ರೊ. ಜೆ. ಆರ್. ರಾಮಮೂರ್ತಿ ಅವರು ನೀಡಿದ ಸಲಹೆಗಳು ನನ್ನ ಬರವಣಿಗೆಯನ್ನು ಪರಿಷ್ಕರಿಸಿಕೊಳ್ಳುವಲ್ಲಿ ಪ್ರಯೋಜನಕ್ಕೆ ಬಂದಿವೆ. ಒತ್ತಡದ ಸಂದರ್ಭದಲ್ಲೆಲ್ಲ ಸಹೋದರರಾದ ಪಿ. ಆನಂದ ತೆಲಗಾವಿ ಮತ್ತು ಪಿ. ಮಂಜುನಾಥ ತೆಲಗಾವಿ ಅವರು ನನ್ನ ನೆರವಿಗೆ ಬಂದಿದ್ದಾರೆ.

'ಚಳವಳಿ ಸಂಪುಟ ಮಾಲೆ'ಯಲ್ಲಿ ನನ್ನ ಕೃತಿಪುಷ್ಪವನ್ನೂ ಪೋಣಿಸಿಕೊಳ್ಳಲು ಅವಕಾಶ ಕಲ್ಪಿಸಿದ ಪ್ರಸಾರಾಂಗದ ನಿರ್ದೇಶಕ ಪ್ರೊ. ಎ. ವಿ. ನಾವಡ, ಮುದ್ರಣ ಕಾರ್ಯದಲ್ಲಿ ನೆರವಾದ ಕೆ. ಎಲ್. ರಾಜಶೇಖರ್, ಹೊರಪುಟದ ಹೊಣೆ ಹೊತ್ತ ಕೆ. ಕೆ. ಮಕಾಳಿ, ಶ್ರದ್ಧೆಯಿಂದ ಮುದ್ರಿಸಿಕೊಟ್ಟ ಲಕ್ಷ್ಮಿ ಮುದ್ರಣಾಲಯದ ಅಶೋಕ್‌ಕುಮಾರ್ ಮತ್ತು ಟಿ. ಎಲ್. ವೆಂಕಟೇಶ್ ಇವರ ಸಹಕಾರ ಮರೆಯುವಂಥದಲ್ಲ.

ಇವರೆಲ್ಲರನ್ನೂ ನಾನು ಮನಸಾರೆ ವಂದಿಸುತ್ತೇನೆ.

**ಲಕ್ಷ್ಮಣ್ ತೆಲಗಾವಿ**

# ಪರಿವಿಡಿ

# ಕೋಷ್ಟಕಗಳು

೧೪. ೧೯೬೦ ರಿಂದ ೧೯೯೨ರ ಅವಧಿಯಲ್ಲಿ ಬೇರೆ ಬೇರೆ ರಾಜ್ಯಗಳಲ್ಲಿ ಪ.ಜಾ.-ಪ.ಪಂ., ಹಿಂದುಳಿದ ವರ್ಗ ಮತ್ತು ಇತರ ಹಿಂದುಳಿದ ವರ್ಗಗಳಿಗೆ ಇದ್ದ ಮೀಸಲಾತಿ ಕೋಟಾ (ಪುಟ ೧೧೮)

೧೫. ೧೯೯೧ರ ವೇಳೆಗೆ ಕಂಡುಬಂದ ಪರಿಶಿಷ್ಟ ಜಾತಿಗಳ ಜಿಲ್ಲಾವಾರು ಸಾಕ್ಷರತಾ ಪ್ರಮಾಣ (ಪುಟ ೧೩೪ )

೧೬. ರಾಜಕೀಯವಾಗಿ ಮತ್ತು ಸರ್ಕಾರಿ ಸೇವೆಗಳಲ್ಲಿ ಮಾದಿಗರು ಪಡೆದ ಪ್ರಾತಿನಿಧ್ಯ (ಪುಟ ೧೫೦-೧೫೧)

೧೭. ಕರ್ನಾಟಕ ಲೋಕೋಪಯೋಗಿ, ನೀರಾವರಿ ಹಾಗೂ ಜಿಲ್ಲಾ ಪಂಚಾಯಿತಿಗಳಲ್ಲಿ ವಿವಿಧ ವರ್ಗಗಳವರಿಗೆ ನೀಡಲಾದ ಬಡ್ತಿ ಹುದ್ದೆಗಳು ಮತ್ತು ನೇರ ನೇಮಕಾತಿ ಹುದ್ದೆಗಳು, ಇತ್ಯಾದಿ (ಪುಟ ೧೬೫)

೧೮. ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಯಲ್ಲಿರುವ ವಿವಿಧ ಜಾತಿ ಇಂಜಿನಿಯರ್‌ಗಳ ಸಂಖ್ಯೆ (ಪುಟ ೧೬೫)

# ೧. ಹಿಂದುಳಿದವರು ಮತ್ತು ದಲಿತರು : ಅರ್ಥ, ವ್ಯಾಖ್ಯೆ

ಇಂದು ವ್ಯಾಪಕವಾಗಿ ಬಳಕೆಗೊಳ್ಳುತ್ತಿರುವ 'ಹಿಂದುಳಿದ ವರ್ಗ' ಮತ್ತು 'ದಲಿತ' ಎಂಬ ಪಾರಿಭಾಷಿಕ ಶಬ್ದಗಳು, ಸದ್ಯದ ಭಾರತದ ಎರಡು ಬೃಹತ್ ಜನಸಮುದಾಯಗಳನ್ನು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ನೆಲೆಯಲ್ಲಿ ವಿಭಜಿಸಿ ಗುರುತಿಸಿ ಕೊಡುವಲ್ಲಿ ನೆರವಾಗುವಂಥವು. ಚಾರಿತ್ರಿಕ ಕಾಲಘಟ್ಟದ ವಿಷಮ ಪರಿಸ್ಥಿತಿಗಳ ಕಾರಣವಾಗಿ ಉಂಟಾದ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಿತ್ಯಂತರಗಳು ಈ ಬಗೆಯ ಸಂಕೀರ್ಣ ವ್ಯವಸ್ಥೆಗೆ ಅನುವು ಮಾಡಿಕೊಟ್ಟವು. ಯಾವುದೇ ಸಮಸ್ಯೆಯಾದರೂ ತನ್ನದೇ ಸ್ವರೂಪ ಪಡೆದು, ಕಾಲಕಾಲಕ್ಕೆ ಹೊಸ ಅರ್ಥ-ಆಕೃತಿಗಳನ್ನು ಒಪ್ಪಿ, ಹೊಸ ಹೆಜ್ಜೆಯನ್ನಿಡುತ್ತಾ ಸಾಗಿಬಂದಿರುವುದು ಸ್ಪಷ್ಟ. ಈ ನೆಲೆಯಲ್ಲಿ 'ಹಿಂದುಳಿದವರು' ಮತ್ತು 'ದಲಿತರು' - ಈ ಎರಡು ಗುಂಪುಗಳ ವರ್ಗೀಕರಣ ಪ್ರಕ್ರಿಯೆ ಕುರಿತು, ಪ್ರಸ್ತುತ ಸ್ಥಿತಿ-ಗತಿಗಳ ಪರಿಶೀಲನೆಯೊಡನೆ ಚರ್ಚಿಸಬಹುದು.

ಹಿಂದುಳಿದ ವರ್ಗವೆಂಬುದು ಈ ಶತಮಾನದ ಪರಿಕಲ್ಪನೆಯೆಂಬುದು ನಿಜ. ಮೈಸೂರು ಸಂಸ್ಥಾನದಲ್ಲಿ, ಈ ಶತಮಾನದ ಎರಡನೇ ದಶಕದಲ್ಲಿ ಜನರಲ್ಲಿ ಉಂಟಾದ ಜಾಗೃತಿಯ ಪರಿಣಾಮವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಾಗೂ ರಾಜಕೀಯವಾಗಿ ಮುಂಚೂಣಿಯಲ್ಲಿದ್ದ ಬ್ರಾಹ್ಮಣವರ್ಗದ ವಿರುದ್ಧ ರೂಪುಗೊಂಡ ಸಂಘಟನೆಗಳು ಕ್ರಿಯಾಶೀಲವಾದವು. ಲಿಂಗಾಯಿತರು, ಒಕ್ಕಲಿಗರು ಇನ್ನಿತರ ಪ್ರಮುಖ ಜಾತಿಗಳವರು ತಮ್ಮ ತಮ್ಮ ಪ್ರಗತಿ, ಅಭಿವೃದ್ಧಿಗಳಿಗಾಗಿ ಬ್ರಾಹ್ಮಣರ ವಿರುದ್ಧ ಒಂದುಗೂಡುವುದು ಅನಿವಾರ್ಯವಾಯಿತು. ಈ ವಿರೋಧವು ರಾಜಕೀಯ ನೆಲೆಯಲ್ಲಿ 'ಚಳವಳಿ'ಯಾಗಿ ಮಾರ್ಪಟ್ಟು ವ್ಯವಸ್ಥಿತ ರೀತಿಯಲ್ಲಿ ಬೆಳವಣಿಗೆ ಕಂಡಿತು. ಆರಂಭದಲ್ಲಿ, ಬ್ರಾಹ್ಮಣ ವಿರೋಧಿಗಳನ್ನು 'ಬ್ರಾಹ್ಮಣೇತರ'ರೆಂದು ಗುರುತಿಸಲಾಯಿತು. ಇಂಥಾ ಸಂಘಟಿತ ವಿರೋಧವನ್ನು 'ಬ್ರಾಹ್ಮಣ ವಿರೋಧಿ ಚಳವಳಿ'ಯೆಂದು ಕರೆಯಲಾಯಿತು. 'ಅಬ್ರಾಹ್ಮಣ ಸಂಘಟನೆ'ಯೆಂತಲೂ, 'ಬ್ರಾಹ್ಮಣೇತರ ಹಿಂದುಳಿದ ವರ್ಗಗಳ ಚಳವಳಿ'ಯೆಂತಲೂ ಕರೆದುದುಂಟು. ಮುಖ್ಯವಾಗಿ, ಮೈಸೂರು ಸಂಸ್ಥಾನದಲ್ಲಿ ಹಿಂದುಳಿದ ವರ್ಗಗಳನ್ನು ಗುರುತಿಸಿಕೊಡುವ ಕೆಲಸಕ್ಕೆ ಮೊದಲು ಕೈ ಹಾಕಿದವರು ಸರ್ ಲೆಸ್ಲೀ ಸಿ. ಮಿಲ್ಲರ್. ೧೯೧೯ರಲ್ಲಿ ಮೈಸೂರು ಸಂಸ್ಥಾನಕ್ಕೆ ಸಲ್ಲಿಸಿದ ತಮ್ಮ ಸಮಿತಿಯ ವರದಿಯಲ್ಲಿ, ಇವರು ೧೯೧೧ರ ಜನಗಣತಿಯನ್ನು ಆಧರಿಸಿ ಮೀಸಲಾತಿ ನಿರ್ಧರಿಸಲು ಶಿಫಾರಸು ಮಾಡಿದರು. ಈ ಜನಗಣತಿ ಆಧಾರದ ಮೇರೆಗೆ, ಶೇ.೫ಕ್ಕೂ ಕಡಿಮೆ ಸಾಕ್ಷರತೆ ಹೊಂದಿದ್ದ ಎಲ್ಲಾ ಜಾತಿಗಳನ್ನು ಹಿಂದುಳಿದ ಸಮುದಾಯಗಳೆಂದು ಪರಿಗಣಿಸಿದರು. ರಾಜ್ಯದ ಒಟ್ಟು ಜನಸಂಖ್ಯೆಯನ್ನು ಬ್ರಾಹ್ಮಣರು ಮತ್ತು ಇತರರು ಎಂದು

ಮುಖ್ಯವಾಗಿ ವಿಭಾಗಿಸಿ, ಬ್ರಾಹ್ಮಣರನ್ನು ಹೊರತುಪಡಿಸಿದಂತೆ ಇತರರನ್ನು 'ಹಿಂದುಳಿದ ವರ್ಗ'ಗಳೆಂದು ಗುರುತಿಸಿದರು.*

ಹಿಂದುಳಿದ ವರ್ಗಗಳೆಂದರೆ ಏನು? ಹಿಂದುಳಿದಿರುವಿಕೆಯನ್ನು ಗುರುತಿಸುವುದು ಹೇಗೆ? ಗಮನಿಸಬೇಕಾದುದೆಂದರೆ, ಈ ಪ್ರಶ್ನೆಗಳಿಗೆ ಸಂವಿಧಾನಾತ್ಮಕ ಉತ್ತರ ದೊರೆಯುವುದಿಲ್ಲ. ಡಾ. ಅಂಬೇಡ್ಕರ್ ಹೇಳಿದಂತೆ, 'ಹಿಂದುಳಿದ ವರ್ಗಗಳೆಂದರೆ ಬೇರೆ ಏನೂ ಅಲ್ಲ, ಅವರೊಂದು ಅನೇಕ ಜಾತಿಗಳ ಸಮೂಹ.' ಇಷ್ಟಾದರೂ ಸಂವಿಧಾನವು ಹಿಂದುಳಿದ ವರ್ಗಗಳೆಂದು ನಿರ್ಧರಿಸಲು ಯಾವ ವಿಧಾನಗಳನ್ನೂ ಸೂಚಿಸುವುದಿಲ್ಲ; ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದವರು ಯಾರು ಎಂಬುದನ್ನೂ ನಿರ್ದಿಷ್ಟಪಡಿಸುವುದಿಲ್ಲ. ಇದನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ನಿರ್ಧರಿಸಬೇಕೆಂದು ಅದು ಸೂಚಿಸುತ್ತದೆ. ಈ ಕಾರ್ಯವನ್ನು ಎರಡು ವಿಧಾನಗಳಿಂದ ನೆರವೇರಿಸಬಹುದೆಂಬ ಸೂಚನೆಯಿದೆ : ೧. ಈ ಉದ್ದೇಶಕ್ಕಾಗಿ ಸಮಿತಿಗಳು, ಮಂಡಲಿಗಳನ್ನು ನೇಮಿಸುವುದು; ೨. ನ್ಯಾಯಾಲಯಗಳಿಗೆ ಹಿಂದುಳಿದ ವರ್ಗಗಳ ಅರ್ಥ ವಿವರಣೆಯನ್ನು ಮಾಡಿ ಅವುಗಳನ್ನು ಗುರುತಿಸುವ ಬಗೆಗೆ ತೀರ್ಪುಗಳನ್ನು ಕೊಟ್ಟಿರುವುದು. ಸಂವಿಧಾನದ ೩೪೦ನೇ ಅನುಚ್ಛೇದದ ಪ್ರಕಾರ, ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳ ಸ್ಥಿತಿ-ಗತಿಗಳನ್ನು ತನಿಖೆ ಮಾಡಿ, ಅವರ ಸಮಸ್ಯೆಗಳನ್ನು ಪರಿಶೀಲಿಸಲು ಆಯೋಗವನ್ನು ರಚಿಸುವ ಅಧಿಕಾರವಿರುವುದು ರಾಷ್ಟ್ರಪತಿಯವರಿಗೆ ಮಾತ್ರ. ಹಾಗೆಯೇ, ಸಂವಿಧಾನದ ೧೫(೪) ಮತ್ತು ೧೬(೪)ನೇ ಅನುಚ್ಛೇದಗಳು, ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳ ಅಭಿವೃದ್ಧಿಗಾಗಿ ವಿಶೇಷ ಅವಕಾಶ, ಸೌಲಭ್ಯಗಳನ್ನು ಕಲ್ಪಿಸಲು; ಹಾಗೂ, ಸರ್ಕಾರಿ ಸೇವೆಯಲ್ಲಿ ಹಿಂದುಳಿದ ವರ್ಗಗಳಿಗೆ ಸಾಕಷ್ಟು ಪ್ರಾತಿನಿಧ್ಯ ಸಿಗದೇ ಇದ್ದರೆ ಅಂಥಾ ಸಮಯಗಳಲ್ಲಿ ಸರ್ಕಾರಿ ಹುದ್ದೆಗಳಲ್ಲಿ ಹಿಂದುಳಿದವರಿಗೆ ಸ್ಥಾನಗಳನ್ನು ಮೀಸಲಾಗಿಡುವ ಅಧಿಕಾರವನ್ನು ರಾಜ್ಯಗಳಿಗೆ ಕೊಡಲಾಗಿದೆ. ಆದರೆ ಹಿಂದುಳಿದ ವರ್ಗಗಳನ್ನು ನಿರ್ಧರಿಸಿ ಪಟ್ಟಿ ತಯಾರಿಸುವುದು ಸಹಾ ರಾಜ್ಯ ಸರ್ಕಾರಗಳ ಜವಾಬ್ದಾರಿಯೇ. ಇದು ತೀರಾ ಜಟಿಲವಾದ ಕಾರ್ಯವೆನ್ನುವುದರಲ್ಲಿ ಸಂಶಯವಿಲ್ಲ. ಏಕೆಂದರೆ, ರಾಷ್ಟ್ರಾದ್ಯಂತ ಹಿಂದುಳಿದ ವರ್ಗಗಳು ಏಕರೀತಿಯಲ್ಲಿಲ್ಲ; ಅವುಗಳ ಸ್ವರೂಪ, ಸ್ಥಿತಿ-ಗತಿಗಳು ರಾಜ್ಯದಿಂದ ರಾಜ್ಯಕ್ಕೆ ಬೇರೆ ಬೇರೆಯಾಗಿರುತ್ತವೆ.

ನಿಜಕ್ಕೂ ಹಿಂದುಳಿದವರೆಂದರೆ ಯಾರು? - ಎಂಬ ಪ್ರಶ್ನೆ ಈಗಾಗಲೇ ದೇಶದ ವಿವಿಧ ಭಾಗಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ವಿವಾದಗಳನ್ನೂ ಚಳವಳಿಗಳನ್ನೂ ಹುಟ್ಟುಹಾಕಿರುವುದನ್ನು ನೋಡಬಹುದು. ಅಸ್ಪೃಶ್ಯರನ್ನೂ ಒಳಗೊಂಡ ದಲಿತ ವರ್ಗವನ್ನು ಹಿಂದುಳಿದ ವರ್ಗಗಳ ವ್ಯಾಪ್ತಿಗೆ ತರುವುದು ಒಂದು ಕಾರಣವಾದರೆ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಾಗೂ ಆರ್ಥಿಕವಾಗಿ ಹಿಂದುಳಿದಿರುವ ಇತರ ಎಲ್ಲಾ ಜಾತಿ-ವರ್ಗಗಳನ್ನು

---

* " As regards the definition of the term 'backward communities , the Committee said that they are the castes enumerated in the Census Report of 1911 with less than 5 per cent literates in English.. It will thus be seen that the term backward classes is recognized to include all the communities in the State other than the Brahmin"-**Backward Class Movement in Karnataka**, p 56

ಹಿಂದುಳಿದಿರುವಿಕೆಯ ಆಧಾರದ ಮೇಲೆ ಗುರುತಿಸುವುದೂ ಇನ್ನೊಂದು ಕಾರಣವೆನಿಸುತ್ತದೆ. ಮೇಲೆಯೇ ಹೇಳಿದಂತೆ, ಇಂಥಾ ವರ್ಗೀಕರಣದ ಹಿನ್ನೆಲೆಯಲ್ಲಿ ಜಾತಿ-ವರ್ಗಗಳನ್ನು ಸರಿಯಾಗಿ ಗುರುತಿಸದಿರುವುದೇ ಇಂಥಾ ಸಮಸ್ಯೆಗಳು ಹುಟ್ಟಿಕೊಳ್ಳಲು ಆಸ್ಪದವಾಗಿದೆ. ಜಾತಿಗಳ ಹಿಂದುಳಿದಿರುವಿಕೆಯನ್ನು ಗುರುತಿಸುವ ಪ್ರಶ್ನೆ ಎದುರಾಗಿರುವುದು ಸ್ವಾತಂತ್ರ್ಯಾನಂತರದಲ್ಲಿ ಎಂಬುದು ನಿಜ. ಸ್ವಾತಂತ್ರ್ಯಪೂರ್ವದಲ್ಲಿ ಶಾಸಕಾಂಗದ ಪರಿಮಿತಿಗಷ್ಟೆ ಒಳಪಟ್ಟಿದ್ದ ನಿಮ್ನವರ್ಗ ಮತ್ತು ಹಿಂದುಳಿದ ವರ್ಗಗಳನ್ನು ನಿರ್ಧರಿಸುವ ಹೊಣೆಗಾರಿಕೆ, ಆ ನಂತರದಲ್ಲಿ ನ್ಯಾಯಾಂಗದ ಪ್ರವೇಶದೊಡನೆ ಅಖಿಲ ಭಾರತ ವ್ಯಾಪ್ತಿಗೆ ವಿಸ್ತಾರಗೊಂಡಿತೆನ್ನಬಹುದು.

ಹಿಂದುಳಿದ ವರ್ಗಗಳನ್ನು ಸರಿಯಾಗಿ ನಿರ್ಧರಿಸುವಲ್ಲಿ ಇರುವ ತೊಡಕುಗಳು ಹಲವಾರು. ಇದು ಮೀಸಲಾತಿ ಪ್ರಮಾಣವನ್ನು ನಿಗದಿಪಡಿಸುವ ಸಮಸ್ಯೆಯನ್ನೊಳಗೊಳ್ಳುತ್ತದೆ. ಸರ್ಕಾರವಾಗಲಿ, ಸರ್ವೋಚ್ಚ ನ್ಯಾಯಾಲಯವಾಗಲಿ ಇಂಥಾ ಸಮಸ್ಯೆಗಳ ತೀವ್ರತೆಯನ್ನು ಸಂದರ್ಭಾನುಸಾರ ದೇಶದ ಗಮನಕ್ಕೆ ತಂದಿವೆ, ತರುತ್ತಲಿವೆ. ಆದರೆ ಇವು ಹಲವಾರು ಸಂದರ್ಭಗಳಲ್ಲಿ ಪರಸ್ಪರ ವಿರುದ್ಧವಾಗಿ ಪ್ರವರ್ತಿಸುವುದನ್ನು, ತೀರ್ಪು-ತೀರ್ಮಾನಗಳನ್ನು ಪ್ರಕಟಿಸುವುದನ್ನು ನೋಡಬಹುದು. ಹಿಂದುಳಿದ ವರ್ಗಗಳ ಒತ್ತಡಕ್ಕೆ ಸಿಲುಕುವ ಸರ್ಕಾರಗಳು ಹಿಂದುಳಿದ ಜಾತಿಗಳ ಪಟ್ಟಿಯನ್ನು ಬೆಳಸುವುದರೊಡನೆ ಅದಕ್ಕನುಸಾರ ಜಾರಿಗೆ ತರಬಯಸುವ ಮೀಸಲಾತಿ ಹೆಚ್ಚಳವನ್ನು ನ್ಯಾಯಾಲಯಗಳು ಸಹಜವಾಗಿಯೇ ತಡೆಹಿಡಿಯುತ್ತವೆ. ಸರ್ಕಾರಗಳು ರಚಿಸಿದ ಹಿಂದುಳಿದ ವರ್ಗಗಳ ಆಯೋಗಗಳು ಗುರುತಿಸಿಕೊಡುವ ಹಿಂದುಳಿದ ಜಾತಿಗಳನ್ನಾಗಲಿ, ಶಿಫಾರಸು ಮಾಡುವ ಮೀಸಲಾತಿ ಪ್ರಮಾಣವನ್ನಾಗಲಿ ನ್ಯಾಯಾಲಯಗಳು ಒಪ್ಪುವುದು ಸುಲಭವಲ್ಲ. ಆಯೋಗಗಳು ತಮ್ಮ ವರದಿಗಳಲ್ಲಿ ನಮೂದಿಸುವ ಜನಸಂಖ್ಯಾ ಮಾಹಿತಿ ಮತ್ತು ಜಾತಿಗಳ ಹಿಂದುಳಿದಿರುವಿಕೆಗೆ ನೀಡುವ ತೀರ್ಮಾನಗಳು ನಿರ್ದಿಷ್ಟವಾದುವಲ್ಲ; ಅವು ಇಚ್ಛಾನುಸಾರಿ ಮತ್ತು ನಂಬಲನರ್ಹವಾದಂಥಾ ಮಾಹಿತಿಯನ್ನು ಅವಲಂಬಿಸಿದಂಥವು ಎಂತಲೇ ನ್ಯಾಯಾಲಯಗಳು ಭಾವಿಸುತ್ತವೆ. ಇಷ್ಟಾದರೂ, ಜಸ್ಟಿಸ್ ಚಿನ್ನಪ್ಪರೆಡ್ಡಿಯವರು ವ್ಯಾಖ್ಯಾನಿಸುವಂತೆ, ಹಿಂದುಳಿದ ವರ್ಗಗಳನ್ನು ಗುರುತಿಸಿ ಕೊಡುವಲ್ಲಿ ನ್ಯಾಯಾಲಯಗಳು ಅರ್ಹವಾದುವೆಂದಾಗಲಿ, ಕೆಲವು ಸಾಮಾನ್ಯ ಸಲಹೆ-ಸೂಚನೆಗಳ ವಿನಾ ನಿರ್ದಿಷ್ಟ ಮಾರ್ಗಸೂಚಿಗಳನ್ನು ನೀಡಬಲ್ಲುವೆಂದಾಗಲಿ ಅಲ್ಲ. ಅದಕ್ಕೆಂದೇ ಅವು ಸಿದ್ಧವಾಗಿಯೂ ಇಲ್ಲ. ಸಾಮಾಜಿಕ ಹಿಂದುಳಿದಿರುವಿಕೆಯ ಪ್ರಮಾಣವನ್ನು ಅಳೆಯಲು ಅವು ಯಾವುದೇ ಕಾನೂನಿನ ಮಾನದಂಡವನ್ನೂ ಹೊಂದಿಲ್ಲ. ಆದರೆ ಹಿಂದುಳಿದ ವರ್ಗಗಳ ಮೇಲೆ ಹೇರಲಾಗಿರುವ ತಾರತಮ್ಯದ ಪದರಗಳನ್ನು ಒಂದೊಂದಾಗಿ ತೆಗೆದು ಹಾಕುವ ಕೆಲಸವನ್ನಂತೂ ಪ್ರಾಮಾಣಿಕವಾಗಿ ನಿರ್ವಹಿಸುತ್ತವೆ (ವೇಣುಗೋಪಾಲ್ : ೧೯೯೮: ೨೭-೨೮). ಆದ್ದರಿಂದ ಸರ್ಕಾರ ಮತ್ತು ನ್ಯಾಯಾಲಯಗಳೆರಡೂ ಹಿಂದುಳಿದ ವರ್ಗಗಳನ್ನು ಕುರಿತು ಆಲೋಚಿಸುವುದನ್ನು, ನೀತಿ-ನಿರ್ಧಾರ- ತೀರ್ಪುಗಳನ್ನು ಪ್ರಕಟಿಸುವುದನ್ನು ಹಾಗೂ ಕೆಲವೊಮ್ಮೆ ಅವುಗಳ ನಡುವೆ ಏರ್ಪಡುವ ಸಂಘರ್ಷಗಳನ್ನು ಒಪ್ಪುವುದನ್ನು ಸಹಜವೆನ್ನಬೇಕಾಗುತ್ತದೆ.

ಹಿಂದುಳಿದ ವರ್ಗಗಳು ಎದುರಿಸುತ್ತಿರುವ ಸಮಸ್ಯೆಗಳು ಸಾಕಷ್ಟಿದ್ದರೂ, ಮುಖ್ಯವಾಗಿ, ಸರ್ಕಾರ ಕೈಗೊಳ್ಳುವ ನಿರ್ಧಾರಗಳ ವಿರುದ್ಧ ತಡೆಯಾಜ್ಞೆ ನೀಡುವ ನ್ಯಾಯಾಲಯಗಳ ಮಧ್ಯ ಪ್ರವೇಶ; ಹಿಂದುಳಿದ ಜಾತಿಗಳ ನಿರ್ದಿಷ್ಟ ಜನಸಂಖ್ಯೆಯನ್ನು ತೋರಿಸುವಲ್ಲಿ ರಾಜ್ಯಗಳು ವಿಫಲವಾಗಿರುವುದು; ಹಿಂದುಳಿದ ವರ್ಗಗಳಲ್ಲೇ ಬಹುಸಂಖ್ಯಾತರೂ ಬಲಿಷ್ಠರೂ ಆದ ಮುಂದುವರೆದ ಜಾತಿಗಳವರು ಇತರ ಹಿಂದುಳಿದ ಜಾತಿಗಳ ಸವಲತ್ತುಗಳನ್ನು ಪೂರ್ತಿ ಕಬಳಿಸುತ್ತಿರುವುದು; ಹಿಂದುಳಿದ ವರ್ಗಗಳು ಜಾತಿ-ಉಪಜಾತಿಗಳ ಸಂಘರ್ಷ ಮಾತ್ರವಲ್ಲದೆ, 'ಪ್ರತಿಭೆ ಮತ್ತು ಮೀಸಲಾತಿ'ಗಳ ತಾರತಮ್ಯದ ಸುಳಿಯಲ್ಲಿಯೂ ಸಿಲುಕಿ ಒದ್ದಾಡುತ್ತಿರುವುದು; ಹಿಂದುಳಿದ ವರ್ಗಗಳವರು ಬಡತನದಲ್ಲಿ ನರಳಲು 'ಜಾತಿಯಾಧಾರಿತ ಸಾಮಾಜಿಕ ಹಿಂದುಳಿದಿರುವಿಕೆ'ಯೇ ಕಾರಣವೆಂದು ಸರ್ಕಾರಗಳು ಮತ್ತು ನ್ಯಾಯಾಲಯಗಳು 'ತಪ್ಪಾಗಿ' ವ್ಯಾಖ್ಯಾನಿಸುತ್ತಿರುವುದು; ಮೀಸಲಾತಿಯ ಅವಧಿಯನ್ನು ಹತ್ತು ವರ್ಷಗಳಿಗೆ ನಿಗದಿಗೊಳಿಸಿ ಉಸಿರುಗಟ್ಟಿಸುವ ವಾತಾವರಣದಲ್ಲಿ ತಳವರ್ಗದ ಜನಸಮುದಾಯಗಳು ಬದುಕು ನಡೆಸುವಂತೆ ಮಾಡಿರುವುದು - ಇವುಗಳನ್ನು ಇಲ್ಲಿ ಗಮನಿಸಬಹುದು.

ಸಂವಿಧಾನದ ೩೪೦ನೇ ಅನುಚ್ಛೇದದ ಅನುಸಾರ, ರಾಷ್ಟ್ರಪತಿಯವರು ೧೯೫೩ರಲ್ಲಿ ಭಾರತದ ಮೊತ್ತಮೊದಲ ಹಿಂದುಳಿದ ವರ್ಗಗಳ ಆಯೋಗವನ್ನು ಕಾಕಾಸಾಹೇಬ ಕಾಲೇಲ್ಕರ್ ಅವರ ಅಧ್ಯಕ್ಷತೆಯಲ್ಲಿ ರಚಿಸಿದರು. ೧೯೫೫ರಲ್ಲಿ ತನ್ನ ವರದಿ ಸಲ್ಲಿಸಿದ ಆಯೋಗ, ಜಾತಿ ಆಧಾರದ ಮೇಲೆಯೇ ಹಿಂದುಳಿದಿರುವಿಕೆಯನ್ನು ನಿರ್ಧರಿಸುವಂತೆ ಶಿಫಾರಸು ಮಾಡಿತು; ಹಿಂದುಳಿದ ವರ್ಗಗಳ ಪಟ್ಟಿಯನ್ನು ಸಿದ್ಧಪಡಿಸಿಕೊಟ್ಟಿತು. ೧೯೭೮ರಲ್ಲಿ ಬಿ.ಪಿ. ಮಂಡಲ್ ಅವರ ಅಧ್ಯಕ್ಷತೆಯಲ್ಲಿ ರಚಿಸಲಾದ ಹಿಂದುಳಿದ ವರ್ಗಗಳ ಎರಡನೇ ಆಯೋಗ, ೧೯೮೦ರಲ್ಲಿ ಸಲ್ಲಿಸಿದ ತನ್ನ ವರದಿಯಲ್ಲಿ ಹಿಂದುಳಿದಿರುವಿಕೆಯನ್ನು ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಆಧಾರಗಳ ಮೇಲೆ ನಿರ್ಧರಿಸಲು ಶಿಫಾರಸು ಮಾಡಿತು. ಕೇಂದ್ರದ ಈ ಎರಡು ಆಯೋಗಗಳೇ ಅಲ್ಲದೆ, ಕರ್ನಾಟಕ ಸರ್ಕಾರದಿಂದ ಕಾಲಕಾಲಕ್ಕೆ ನೇಮಕಗೊಂಡ ಸಮಿತಿ-ಆಯೋಗಗಳು ರಾಜ್ಯದ ಕೆಲವು ಜನಸಮುದಾಯಗಳ ಹಿಂದುಳಿದಿರುವಿಕೆಯನ್ನು ಗುರುತಿಸಿಕೊಡುವ ನಿಟ್ಟಿನಲ್ಲಿ ಅಧ್ಯಯನ ಕೈಗೊಂಡವು.

ಏಕೀಕರಣೋತ್ತರ ಕರ್ನಾಟಕದಲ್ಲಿ ರಚನೆಯಾದ ಸಮಿತಿಯೆಂದರೆ ೧೯೬೦ರಲ್ಲಿ ನೇಮಕಗೊಂಡ ಡಾ. ಆರ್. ನಾಗನಗೌಡ ಸಮಿತಿ. ೧೯೬೧ರಲ್ಲಿ ಸಲ್ಲಿಸಿದ ತನ್ನ ಅಂತಿಮ ವರದಿಯಲ್ಲಿ ಈ ಸಮಿತಿಯು, ಹಿಂದುಳಿದ ವರ್ಗಗಳಲ್ಲಿ ಕೆಲವನ್ನು 'ಹಿಂದುಳಿದ ವರ್ಗ'ಗಳೆಂದು ಹಾಗೂ ಉಳಿದುವನ್ನು 'ಅತ್ಯಂತ ಹಿಂದುಳಿದ ವರ್ಗ'ಗಳೆಂದು ವಿಂಗಡಿಸಿತು. ಹಿಂದುಳಿದಿರುವಿಕೆಯನ್ನು ಈ ಸಮಿತಿ ಗುರುತಿಸಿದುದು ಜಾತಿ ಆಧಾರದ ಮೇಲೆ. ಆ ನಂತರ ಕರ್ನಾಟಕದಲ್ಲಿ ೧೯೭೨ ರಿಂದ ೧೯೮೮ರ ವರೆಗೆ ಒಟ್ಟು ಮೂರು ಹಿಂದುಳಿದ ವರ್ಗಗಳ ಆಯೋಗಗಳು ರಚನೆಗೊಂಡವು. ಇವುಗಳಲ್ಲಿ ಮೊದಲನೆಯದು ೧೯೭೨ರಲ್ಲಿ ಅಸ್ತಿತ್ವಕ್ಕೆ ಬಂದ ಎಲ್.ಜಿ. ಹಾವನೂರು ಆಯೋಗ ಅಥವಾ ೧ನೇ ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗ. ೧೯೭೫ರಲ್ಲಿ ಈ ಆಯೋಗ ತನ್ನ ವರದಿ ಸಲ್ಲಿಸಿತು; ಹಾಗೂ ಈ ಮುಂದಿನಂತೆ ಹಿಂದುಳಿದ ವರ್ಗಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಿತು : ೧. ಹಿಂದುಳಿದ ಸಮುದಾಯಗಳು, ೨. ಹಿಂದುಳಿದ ಜಾತಿಗಳು, ಹಾಗೂ ೩. ಹಿಂದುಳಿದ

ಬುಡಕಟ್ಟುಗಳು. ಈ ಆಯೋಗ ಹೇಳಿದಂತೆ, ಕೆಲವು ವರ್ಗಗಳ ಹಿಂದುಳಿದಿರುವಿಕೆಗೆ ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಹಿಂದಿನಿಂದಲೂ ಬೆಳೆದುಬಂದ ತಾರತಮ್ಯ ದೃಷ್ಟಿಯೇ ಕಾರಣ.

೧೯೮೩ರಲ್ಲಿ ರಚನೆಯಾದ ಟಿ. ವೆಂಕಟಸ್ವಾಮಿ ಆಯೋಗ ಅಥವಾ ೨ನೇ ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗ ೧೯೮೬ರಲ್ಲಿ ತನ್ನ ವರದಿ ಸಲ್ಲಿಸಿತು. ಇದು ಸಹಾ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ನೆಲೆಯಲ್ಲಿ ಹಿಂದುಳಿದ ವರ್ಗಗಳನ್ನು ಗುರುತಿಸಿಕೊಟ್ಟಿದೆ. ಹಾಗೆಯೇ, ೧೯೮೮ರಲ್ಲಿ ರಚನೆಯಾದ ಓ. ಚಿನ್ನಪ್ಪರೆಡ್ಡಿ ಆಯೋಗ ಅಥವಾ ೩ನೇ ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗ ೧೯೯೦ರಲ್ಲಿ ಸಲ್ಲಿಸಿದ ತನ್ನ ವರದಿಯಲ್ಲಿ, ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದವರೆಂದು ಕಂಡುಬಂದಂಥ ಜಾತಿಗಳನ್ನು ಮೂರು ಪ್ರವರ್ಗಗಳಾಗಿ ವಿಂಗಡಿಸಿತು: ಪ್ರವರ್ಗ-೧ : ಪರ್ಯಾಯ ಜಾತಿಗಳ ಸಹಿತ ಒಟ್ಟು ೫೨ ಜಾತಿಗಳು; ಪ್ರವರ್ಗ-೨ : ಪರ್ಯಾಯ ಜಾತಿಗಳ ಸಹಿತ ಒಟ್ಟು ೧೪ ಜಾತಿಗಳು; ಹಾಗೂ ಪ್ರವರ್ಗ-೩: ಹೆಚ್ಚಿನ ಆದಾಯವಿಲ್ಲದ ಔದ್ಯೋಗಿಕ ಗುಂಪಿನ ಜಾತಿಯವರು. ಈ ಆಯೋಗ ತಾನು ಕೈಗೊಂಡ ಅಧ್ಯಯನ ಮತ್ತು ಪರಿಶೀಲನೆಗಳ ನೆಲೆಯಲ್ಲಿ, ಜನರ ಹಿಂದುಳಿದಿರುವಿಕೆಯನ್ನು ಗುರುತಿಸಲು ಭೂ ಒಡೆತನ, ಮನೆ ಮಾಲಿಕತ್ವ, ಆದಾಯ, ಪರಿಸರ, ಗ್ರಾಮೀಣ ಅಥವಾ ನಾಗರಿಕ ವಾತಾವರಣ ಮುಂತಾಗಿ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕವಾದ ೧೭ ಸೂಚಕಗಳನ್ನು ನಿರ್ಣಾಯಕ ಸೂತ್ರವನ್ನಾಗಿ ಇಟ್ಟುಕೊಂಡಿದ್ದಿತು. ಈ ಆಯೋಗಗಳಲ್ಲದೆ, ೧೯೩೦-೩೧ ಮತ್ತು ೧೯೭೧-೭೨ರ ಮುಂಬಯಿ ಸರ್ಕಾರ ನೇಮಿಸಿದ ಸಮಿತಿಗಳು, ೧೯೩೫ರ ಜಮ್ಮು-ಕಾಶ್ಮೀರ ಸರ್ಕಾರದ ಸಮಿತಿ, ೧೯೬೫-೬೮ರ ಕೇರಳ ಸರ್ಕಾರದ ಸಮಿತಿ ಹಾಗೂ ೧೯೭೦-೭೧ರ ಆಂಧ್ರ ಸರ್ಕಾರದ ಸಮಿತಿಗಳು ಅನುಸರಿಸಿದ ತತ್ವವೆಂದರೆ, ಅತ್ಯಂತ ಕೆಳಗಿನ ಸ್ಥಾನದಲ್ಲಿರುವ ಜಾತಿಯೇ ಸಾಮಾಜಿಕವಾಗಿ ಹಿಂದುಳಿದ ಜಾತಿ ಎಂಬುದು.

ಜಾತಿಗಳ ಹಿಂದುಳಿದಿರುವಿಕೆಗೆ ಕಾರಣಗಳನ್ನು ಹುಡುಕಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ನೇಮಿಸಿದ ಆಯೋಗಗಳು ತಮ್ಮ ಅಧ್ಯಯನಗಳ ಮಿತಿಯಲ್ಲಿ ಕೆಲವು ಶಿಫಾರಸುಗಳನ್ನು ಮಾಡಿವೆ; ಮೀಸಲಾತಿ ಪ್ರಮಾಣವನ್ನು ನಿರ್ಧರಿಸಿಕೊಟ್ಟಿವೆ. ಈ ಬಗೆಗೆ ರಾಷ್ಟ್ರವ್ಯಾಪಿ ಚರ್ಚೆಗಳೂ ನಡೆದಿವೆ; ಚಳವಳಿಗಳೂ ನಡೆದಿವೆ. ಆದರೆ ಈ ಸಮಸ್ಯೆ ಇನ್ನೂ ಬಗೆಹರಿದಿಲ್ಲದಿರುವುದು ಸ್ಪಷ್ಟ. ಜಾತಿಗಳ ಹಿಂದುಳಿದಿರುವಿಕೆ ಕುರಿತು ಈ ಆಯೋಗಗಳ ತೀರ್ಮಾನಗಳು (Findings) ಪ್ರಶ್ನಾತೀತವಾದುವೇನಲ್ಲವೆಂಬುದು ಇಲ್ಲಿ ವ್ಯಕ್ತಪಡುವ ಅಂಶ. ಆಯೋಗಗಳ ಶಿಫಾರಸುಗಳನ್ನು ಸರ್ಕಾರಗಳು ಸಾಧ್ಯವಾದ ಮಟ್ಟಿಗೆ ಕೆಲವು ಹಂತಗಳಲ್ಲಿ ಜಾರಿಗೊಳಿಸಲು ಕ್ರಮ ಕೈಗೊಂಡಿರುವುದುಂಟು. ಆದರೆ ಜನಸಂಖ್ಯಾ ಪ್ರಮಾಣವನ್ನು ಗಮನಿಸಿದರೆ, ಮೀಸಲಾತಿಯಾಗಲಿ, ಸೌಲಭ್ಯಗಳಾಗಲಿ ನಿರೀಕ್ಷಿಸಿದ ಪ್ರಮಾಣದಲ್ಲಿ ಇಲ್ಲವೆನ್ನುವುದು ಖಚಿತಪಡುತ್ತದೆ. ಈ ಆಯೋಗಗಳು ಸಿದ್ಧಪಡಿಸಿರುವ ಹಿಂದುಳಿದ ಜಾತಿಗಳ ಪಟ್ಟಿ ಅಂತಿಮವಾದುದಲ್ಲವೆಂಬುದಕ್ಕೆ ಹಾಗೂ ಅದು ದೋಷಪೂರ್ಣವಾಗಿದೆಯೆಂಬುದಕ್ಕೆ, ಸೌಲಭ್ಯವಂಚಿತ ಇತರ ಹಿಂದುಳಿದ ಜನಾಂಗಗಳು ಮೇಲಿಂದ ಮೇಲೆ ಆಕ್ಷೇಪಿಸುತ್ತಿರುವುದು ಹಾಗೂ ಪ್ರತಿಭಟಿಸುತ್ತಿರುವುದೇ ಸಾಕ್ಷಿ.

ಸೌಲಭ್ಯಗಳನ್ನು ಪಡೆದುಕೊಳ್ಳುವ ಸಲುವಾಗಿ ಹಿಂದುಳಿದ ವರ್ಗಗಳಲ್ಲಿಯ ಕೆಲವು ಜಾತಿ-ಜನಾಂಗಗಳು ಪ್ರತ್ಯೇಕ ಸಮಾವೇಶಗಳನ್ನು ನಡೆಸುತ್ತಾ ತಮ್ಮ ಸಂಖ್ಯಾಬಲವನ್ನು ಪ್ರದರ್ಶಿಸುವುದು ಕಂಡುಬರುತ್ತದೆ. ಮೀಸಲಾತಿ ಸೌಲಭ್ಯವನ್ನು ವಿಸ್ತರಿಸಲು ಹಲವಾರು ಜಾತಿ-ಜನಾಂಗಗಳವರು ಸರ್ಕಾರಕ್ಕೆ ನಿರಂತರವಾಗಿ ಮನವಿಗಳನ್ನು ಸಲ್ಲಿಸುತ್ತಲೇ ಇದ್ದಾರೆ. ಶೈಕ್ಷಣಿಕ, ಆರ್ಥಿಕ, ರಾಜಕೀಯ ಮೀಸಲಾತಿಗಳಿಗಾಗಿ ಹೆಚ್ಚುತ್ತಿರುವ ಬೇಡಿಕೆಯನ್ನು ಗಮನಿಸಿದರೆ, ಕೇಂದ್ರವಾಗಲಿ, ರಾಜ್ಯ ಸರ್ಕಾರವಾಗಲಿ ಹಿಂದುಳಿದ ವರ್ಗಗಳ ಶಾಶ್ವತ ಆಯೋಗಗಳನ್ನು ರಚಿಸಿದ್ದರೂ ಈ ಸಮಸ್ಯೆ ಅಷ್ಟು ಸುಲಭದಲ್ಲಿ ಬಗೆ ಹರಿಯಲಾರದೆಂಬ ಜಿಜ್ಞಾಸೆ ತಲೆದೋರುವುದು ಸಹಜ. ಹಿಂದುಳಿದ ವರ್ಗಗಳ ಹಿಂದುಳಿದಿರುವಿಕೆಯನ್ನು 'ವೈಜ್ಞಾನಿಕವಾಗಿ' ನಿರ್ಧರಿಸುವ ಹಾಗೂ ಮೀಸಲಾತಿ ಪ್ರಮಾಣವನ್ನು ನಿಗದಿಪಡಿಸುವ ಗುರುತರ ಹೊಣೆಗಾರಿಕೆ ಸರ್ಕಾರದ್ದೇ ಆಗಿರುತ್ತದೆ.

ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ, ಸರ್ವೋಚ್ಚ ನ್ಯಾಯಾಲಯ ೧೯೯೨ರಲ್ಲಿ ಇಂದ್ರ ಸಹಾನಿ V/S ಯೂನಿಯನ್ ಆಫ್ ಇಂಡಿಯಾ (ಮಂಡಲ್ ಮೊಕದ್ದಮೆ) ಎಂಬ ಮೊಕದ್ದಮೆಯಲ್ಲಿ ನೀಡಿರುವ ತೀರ್ಪಿನಲ್ಲಿ, ಹಿಂದುಳಿದ ವರ್ಗಗಳ ನ್ಯಾಯಯುತ ಬೇಡಿಕೆಗಳನ್ನು ಪರಿಶೀಲಿಸುವ ಸಲುವಾಗಿ ಪ್ರತಿಯೊಂದು ರಾಜ್ಯದಲ್ಲೂ ಒಂದೊಂದು ಶಾಶ್ವತ ಆಯೋಗವನ್ನು ರಚಿಸಬೇಕೆಂದು ಸೂಚಿಸಿತು. ಇದನ್ನು ಅನುಸರಿಸಿ ರಾಜ್ಯ ಸರ್ಕಾರವು ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ಕಾಯಿದೆ ೧೯೯೫ರ ಅಡಿಯಲ್ಲಿ ಹಿಂದುಳಿದ ವರ್ಗಗಳ ಶಾಶ್ವತ ಆಯೋಗವನ್ನು ಸ್ಥಾಪಿಸಿದೆ. ೧೯೯೭ ಡಿಸೆಂಬರ್‌ನಲ್ಲಿ ಕಾರ್ಯವನ್ನಾರಂಭಿಸಿದ ಈ ಆಯೋಗ, ತನ್ನ ಉದ್ದೇಶ, ಯೋಜನೆಗಳಿಗೆ ಅನುಸಾರವಾಗಿ ರಾಜ್ಯದಲ್ಲಿ ವಾಸಿಸುವ ಹಿಂದುಳಿದ ಜಾತಿ-ಉಪಜಾತಿ, ಪಂಗಡ- ಉಪಪಂಗಡಗಳ ಅಭಿವೃದ್ಧಿಗಾಗಿ ಮನೆ ಮನೆ ಸಮೀಕ್ಷೆ ನಡೆಸುತ್ತದೆ. ಎಲ್ಲಾ ಜಿಲ್ಲೆಗಳಲ್ಲೂ 'ಬಹಿರಂಗ ವಿಚಾರಣೆ' ನಡೆಸುತ್ತದೆ. ಇಂಥಾ ಸಂದರ್ಭದಲ್ಲಿ 'ಅನ್ಯಾಯಕ್ಕೊಳಗಾದ' ಹಿಂದುಳಿದ ಜಾತಿಗಳು ಸಲ್ಲಿಸುವ ಮನವಿ, ಸಲಹೆ, ದೂರು ಇತ್ಯಾದಿಗಳನ್ನು ಸ್ವೀಕರಿಸುತ್ತದೆ. ತನ್ನ ಈ ಸಮೀಕ್ಷೆಯನ್ನು ಪೂರ್ಣಗೊಳಿಸಿದ ತರುವಾಯ ಹಿಂದುಳಿದ ವರ್ಗಗಳ ಅಭಿವೃದ್ಧಿಗಾಗಿ, ಮೀಸಲಾತಿಗಾಗಿ ಕೈಗೊಳ್ಳಬಹುದಾದ ಶಿಫಾರಸುಗಳನ್ನು ಸರ್ಕಾರದ ಮುಂದೆ ಮಂಡಿಸುತ್ತದೆ.

ಹಾಗೆಯೇ, ೧೯೫೦ರಲ್ಲಿ ಅಸ್ತಿತ್ವಕ್ಕೆ ಬಂದ ಪರಿಶಿಷ್ಟ ಜಾತಿ-ಪಂಗಡಗಳ ರಾಷ್ಟ್ರೀಯ ಆಯೋಗವು ತನ್ನ ಉದ್ದೇಶಕ್ಕನುಗುಣವಾಗಿ ಪರಿಶಿಷ್ಟ ಜಾತಿ-ಪಂಗಡಗಳ ಹಿತಾಸಕ್ತಿಗಳನ್ನು ರಕ್ಷಿಸುವ ಜವಾಬ್ದಾರಿ ಹೊತ್ತಿದೆ. ಸಂವಿಧಾನಬದ್ಧ ಸವಲತ್ತುಗಳನ್ನು ಈ ವರ್ಗಗಳಿಗೆ ನೀಡಲಾಗಿದ್ದರೂ ಸಾಮಾಜಿಕ, ಆರ್ಥಿಕ ಮತ್ತು ಮೀಸಲಾತಿ ವಲಯಗಳಲ್ಲಿ ಈ ವರ್ಗಗಳಿಗೆ ನ್ಯಾಯಯುತ ಸ್ಥಾನ-ಮಾನ ಮತ್ತು ಸಮಾನ ಆದ್ಯತೆಗಳು ದೊರೆಯದಿರುವುದು ಖಚಿತಪಡುತ್ತದೆ. ಈ ನಿಟ್ಟಿನಲ್ಲಿ, ಆಯೋಗವು ಸಾಕ್ಷರತೆ, ಶಿಕ್ಷಣ, ಕಾನೂನು ನೆರವು, ಭೂಸುಧಾರಣೆ, ದೌರ್ಜನ್ಯಗಳ ತಡೆ, ಇತ್ಯಾದಿಗಳಿಗೆ ಸಂಬಂಧಿಸಿದಂತೆ ಮೇಲುಸ್ತುವಾರಿ, ಕಣ್ಗಾವಲು, ತನಿಖೆ ಮತ್ತು ವಿಚಾರಣೆಗಳ ಕಾರ್ಯವನ್ನು ನಿರ್ವಹಿಸುತ್ತದೆ. ಇದೊಂದು ಬಗೆಯಲ್ಲಿ 'ಕಾವಲು ನಾಯಿ'ಯ ಕೆಲಸವೆನ್ನಬಹುದು. ಈ ಆಯೋಗ ವಿವಿಧ ರಾಜ್ಯಗಳಲ್ಲಿ ಮತ್ತು ಕೇಂದ್ರಾಡಳಿತ ಪ್ರದೇಶಗಳಲ್ಲಿ ರಾಜ್ಯಮಟ್ಟದ ಕಚೇರಿಗಳನ್ನು ಹೊಂದಿದ್ದು, ಪರಿಶಿಷ್ಟ

ಜಾತಿ-ಜನಾಂಗಗಳವರ ಹಿತರಕ್ಷಣೆಗಾಗಿ ಅವುಗಳನ್ನು ನಿಯೋಜಿಸಿದೆ. ದೇಶಾದ್ಯಂತ ಆಯೋಗದ ಒಟ್ಟು ೧೬ ಕಚೇರಿಗಳಿದ್ದು, ಕರ್ನಾಟಕದ ಕಚೇರಿ ಬೆಂಗಳೂರಿನಲ್ಲಿದೆ.

ಹಿಂದುಳಿದಿರುವಿಕೆಯನ್ನು ವಿದ್ಯೆ ಹಾಗೂ ಸಂಪತ್ತಿನ ಅಸಮಾನ ಹಂಚಿಕೆಯ ಪರಿಣಾಮವೆಂದು ವ್ಯಾಖ್ಯಾನಿಸಲಾಗುತ್ತದೆ. ಭಾರತದ ಚರಿತ್ರೆಯಲ್ಲಿ ಇದನ್ನು ದಾಖಲಿಸಿದೆ. ಸಮಾನತಾ ತತ್ವಕ್ಕೆ ಮಾನ್ಯತೆ ಇರುವ ಎಡೆಯಲ್ಲಿ ತಾರತಮ್ಯ ಎಲ್ಲಿರುತ್ತದೆ? ಮೀಸಲಾತಿಯ ಅಗತ್ಯವಾದರೂ ಏಕೆ? ಒಡೆಯ-ಗುಲಾಮ, ಪ್ರಥಮದರ್ಜೆ ಪ್ರಜೆ-ದ್ವಿತೀಯ ದರ್ಜೆ ಪ್ರಜೆಗಳೆಂಬ ವಿಭಾಗಗಳಾದರೂ ಏಕಿರುತ್ತವೆ? ಮೂಲಭೂತ ಹಕ್ಕುಬಾಧ್ಯತೆಗಳಿಗೆ ಚ್ಯುತಿಯುಂಟಾದಾಗ ಪ್ರತಿಭಟನೆಯ ಅಲೆ ತಾನಾಗಿಯೇ ಏಳುತ್ತದೆ. ನಮ್ಮವರೆಗೆ ಹರಿದು ಬಂದಿರುವ ಚರಿತ್ರೆ ಪ್ರಧಾನವಾಗಿ ಸೂಚಿಸುವುದೂ ಇದನ್ನೇ. ದಮನಿಸುವ ಶಕ್ತಿಗಳೊಡನೆ ಶಾಮೀಲಾಗಿರುವವರು ದಮನಕ್ಕೊಳಗಾದವರು ಎಚ್ಚೆತ್ತುಕೊಳ್ಳುವ ತನಕ ನಿರಾತಂಕದಿಂದಿರಬಹುದು. ಈಗಿನ ಪರಿಸ್ಥಿತಿಯನ್ನೂ ಇಂಥಾ ನೆಲೆಯಲ್ಲೆ ವಿಶ್ಲೇಷಿಸಬೇಕಾಗುತ್ತದೆ. ಶೋಷಕ-ಶೋಷಿತರ ನಡುವಣ ಸಂಬಂಧಗಳನ್ನು ಪರಿಶೀಲಿಸಿ, ಅವುಗಳ ಸುಧಾರಣೆಗೆ ಸೂಕ್ತ ಪರಿಹಾರ ನೀಡುವಲ್ಲಿ ವಿವಿಧ ಆಯೋಗಗಳು ತಕ್ಕಮಟ್ಟಿಗೆ ಪ್ರಾಮಾಣಿಕವಾಗಿಯೇ ಪ್ರಯತ್ನಿಸಿರುವುದು ದಿಟ. ಇಂಥಾ ಆಯೋಗಗಳ ವರದಿಗಳನ್ನು ಪರಿಶೀಲಿಸಿರುವ ಸರ್ವೋಚ್ಛ ನ್ಯಾಯಾಲಯ, ಹಿಂದುಳಿದಿರುವಿಕೆಗೆ ಇರುವ ಮಾನದಂಡಗಳನ್ನು ಸ್ಥೂಲವಾಗಿಯಾದರೂ ನಿರ್ದೇಶಿಸಿರುವುದನ್ನು ಕಾಣುತ್ತೇವೆ. ಒಂದು ಜಾತಿ ಹಿಂದುಳಿದಿದ್ದೆಂದು ನಿರ್ಧರಿಸುವಲ್ಲಿ ಅದು ನೌಕರಿಯಲ್ಲಿ ಪಡೆದ ಪ್ರಾತಿನಿಧ್ಯ, ಶಿಕ್ಷಣರಂಗದಲ್ಲಿ ಸಾಧಿಸಿದ ಪ್ರಗತಿ ಹಾಗೂ ಆರ್ಥಿಕ ಸ್ಥಿತಿ-ಗತಿಗಳು ಪರಿಗಣನೆಗೆ ಬರುತ್ತವೆ. ಯಾವ ಜಾತಿ ಅಥವಾ ಸಮುದಾಯಗಳ ಸರಾಸರಿ ಶಿಕ್ಷಣ ಮಟ್ಟ ಗಣನೀಯವಾಗಿ ಇಳಿಮುಖದ್ದಾಗಿರುತ್ತದೊ ಆ ಸಮುದಾಯಗಳು ಶೈಕ್ಷಣಿಕವಾಗಿ ಹಿಂದುಳಿದಿರುವುವೆಂದೇ ಅರ್ಥ. ವ್ಯಕ್ತಿಯನ್ನು ಒಂದು ಘಟಕವಾಗಿ ತೆಗೆದುಕೊಳ್ಳಲಾಗುವುದಿಲ್ಲವಾದ್ದರಿಂದ, ಆರ್ಥಿಕಾಧಾರದ ಮೇಲೆ ಹಿಂದುಳಿದಿರುವಿಕೆಯನ್ನು ನಿರ್ಧರಿಸಲಾಗುವುದಿಲ್ಲ; ಏಕೆಂದರೆ, ಒಬ್ಬ ವ್ಯಕ್ತಿಯ ಹಿಂದುಳಿದಿರುವಿಕೆಯನ್ನು ನಿರ್ಧರಿಸಲು ಆ ವ್ಯಕ್ತಿಯ ಕಸುಬು ಮತ್ತು ವರಮಾನಗಳನ್ನು ಪರಿಗಣನೆಗೆ ತೆಗೆದುಕೊಳ್ಳುವುದರಿಂದ ನಿಜವಾದ ಹಿಂದುಳಿದ ವರ್ಗಗಳಿಗೆ ಸಹಾಯವಾಗುವುದಿಲ್ಲ ಎನ್ನುವ ವಾದವೇ ಇದಕ್ಕೆ ಕಾರಣ.

ವೈದಿಕಶಾಹಿ ಮತ್ತು ಬಂಡವಾಳಶಾಹಿಗಳು ಒಂದೇ ನಾಣ್ಯದ ಎರಡು ಮುಖಗಳೆನ್ನುತ್ತದೆ ನಮ್ಮ ಚರಿತ್ರೆ. ಸಮಾಜವಿಜ್ಞಾನಿಗಳು ಕೈಗೊಂಡ ಸಮೀಕ್ಷೆಗಳು ತಿಳಿಸುವಂತೆ, ಸಾಂಸ್ಕೃತಿಕ ಮಾಧ್ಯಮಗಳು ವೈದಿಕಶಾಹಿಯ ಹಿಡಿತದಲ್ಲಿದ್ದರೆ, ರಾಜಕೀಯ ಅಧಿಕಾರ ಮತ್ತು ಭೂ ಒಡೆತನಗಳು ಬಂಡವಾಳಶಾಹಿಯ ಅಧೀನದಲ್ಲಿವೆ. ಭಾರತದ ಮಟ್ಟಿಗೆ, ಇಲ್ಲಿಯ ಸಮಾಜ ವ್ಯವಸ್ಥೆ ಊಳಿಗಮಾನ್ಯ ಸ್ಥಿತಿಯಲ್ಲಿದ್ದಾಗಲೇ ಸ್ವಾತಂತ್ರ್ಯ ಬಂದದ್ದರಿಂದ, ಭೂ ಒಡೆಯ ಜಾತಿಗಳವರು ಹೆಚ್ಚಿನ ಪ್ರಮಾಣದಲ್ಲಿ ಅಧಿಕಾರ ಸೂತ್ರ ಹಿಡಿದರೆಂಬುದನ್ನು ನೋಡಿದರೆ, ಹತ್ತು-ಹಲವು ಜಾತಿಗಳು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಾಗೂ ರಾಜಕೀಯವಾಗಿ ಹಿಂದುಳಿಯಲು ಕಾರಣವೇನೆಂಬುದಕ್ಕೆ ಉತ್ತರ ದೊರೆಯಬಹುದು.

* * *

ಬಹುಕಾಲದಿಂದಲೂ 'ಅಸ್ಪೃಶ್ಯ'ರೆಂದೇ ಕರೆಸಿಕೊಂಡ 'ನಿಮ್ನವರ್ಗ'ದವರನ್ನು ಈಗ 'ಪರಿಶಿಷ್ಟ ಜನಾಂಗ'ವೆಂದು ಕರೆಯಲಾಗುತ್ತದೆ. ಅಸ್ಪೃಶ್ಯ ಹಾಗೂ ಅದರ ಪರ್ಯಾಯ ಹೆಸರುಗಳು ಆ ವರ್ಗದವರ ಸಾಮಾಜಿಕ ಸ್ಥಿತಿ-ಗತಿಗಳನ್ನು ಬಹು ಸ್ಪಷ್ಟವಾಗಿಯೇ ಚಿತ್ರಿಸುತ್ತವೆ. ಗಾಂಧೀಜಿ 'ಹರಿಜನ' ಅಥವಾ ದೇವರಮಕ್ಕಳೆಂದು ಅವರನ್ನು ಕರೆದಿರುವುದರಲ್ಲಿ, ಅಸ್ಪೃಶ್ಯರಿಗೆ ಅಂಟಿದ ಕಳಂಕವನ್ನು ತೊಡೆದುಹಾಕಬೇಕೆನ್ನುವ ದೃಷ್ಟಿಯೂ ಇದ್ದಂತೆ ತೋರುತ್ತದೆ. ಆದರೆ ಭಾರತದ ಸಂವಿಧಾನ 'ಅಸ್ಪೃಶ್ಯ' ಎಂಬ ಶಬ್ದವನ್ನು ಸ್ಪಷ್ಟವಾಗಿ ನಿರಾಕರಿಸುತ್ತದೆ ಹಾಗೂ ನಿಷೇಧಿಸುತ್ತದೆ. ೧೭ನೇ ಅನುಚ್ಛೇದದಲ್ಲಿ ಈ ಬಗೆಗೆ ಸೂಕ್ತ ನಿರ್ದೇಶನ ನೀಡಲಾಗಿದೆ. ಇದರ ಪ್ರಕಾರ, ಅಸ್ಪೃಶ್ಯತೆಯ ಆಚರಣೆ ದಂಡನೀಯ ಅಪರಾಧ. ಈ ಸಂಬಂಧದ ಅಪರಾಧಗಳಿಗೆ ಶಿಕ್ಷೆಯಾಗಿರುವ ಉದಾಹರಣೆಗಳಿದ್ದರೂ ಅಸ್ಪೃಶ್ಯತೆ ಎಂಬ ಪದವಾಗಲಿ, ಅದರ ಆಚರಣೆಯಾಗಲಿ ಭಾರತಾದ್ಯಂತ ಇನ್ನೂ ಜೀವಂತವಿರುವುದು - ಭಾರತೀಯ ಸಮಾಜ ಯಾವ ಕಾಲಕ್ಕೂ ಪರಿವರ್ತನೆಗೊಳ್ಳುವುದಿಲ್ಲ ವೆಂಬುದಕ್ಕೆ ಸಾಕ್ಷಿಯಾಗಿದೆ. ನಿಷೇಧಿತ ಅಸ್ಪೃಶ್ಯ ಶಬ್ದಕ್ಕೆ ಬದಲಾಗಿ ಈಗ ಬಳಕೆಯಲ್ಲಿರುವ ಪರಿಶಿಷ್ಟ ಜನಾಂಗವೆಂದು ಕರೆಯಬೇಕೆನ್ನುತ್ತದೆ ನಮ್ಮ ಸಂವಿಧಾನ. ವಾಸ್ತವದಲ್ಲಿ, ಪರಿಶಿಷ್ಟ ಜನಾಂಗವೆಂಬ ಪ್ರಯೋಗ ಬಳಕೆಗೆ ಬಂದುದು ಆಂಗ್ಲರ ಆಡಳಿತದಲ್ಲಿ, ಅಂದರೆ ೧೯೨೮ರಲ್ಲಿ ಸರ್ ಜಾನ್ ಸೈಮನ್ ಆಯೋಗ ಭಾರತಕ್ಕೆ ಬಂದಿದ್ದ ಸಂದರ್ಭದಲ್ಲಿ ಎನ್ನುವುದು ಗಮನಾರ್ಹ.

ಕರ್ನಾಟಕದ ಮಟ್ಟಿಗೆ, 'ದಲಿತ' ಶಬ್ದದಿಂದ ಗುರುತಿಸಲ್ಪಡುವ ಜನಾಂಗವಾಗಲಿ, ಸಂಸ್ಕೃತಿಯಾಗಲಿ, ಸಾಹಿತ್ಯವಾಗಲಿ ಇತ್ತೀಚಿನ ವರ್ಷಗಳಲ್ಲಿ ಪ್ರಸಿದ್ಧಿ ಪಡೆದುದು ದಲಿತ ಸಂಘರ್ಷ ಸಮಿತಿಯ ಚಟುವಟಿಕೆಗಳಿಂದ ಎಂಬುದಂತೂ ನಿಜ. 'ದಲಿತ' ಎಂಬುದು ಮಂತ್ರವಾಗಿ, ಶಕ್ತಿಯಾಗಿ ಪ್ರವಹಿಸತೊಡಗಿದುದನ್ನು ನಿರಾಕರಿಸುವಂತಿಲ್ಲ. ದಲಿತ ಎಂದರೆ ಹಿಂಸೆಗೆ ಒಳಗಾದ, ದಲನಕ್ಕೆ ಒಳಗಾದ, ಶೋಷಣೆಗೆ ಒಳಗಾದ ಎಂಬುದರಿಂದ ಮೊದಲ್ಗೊಂಡು ಅದೊಂದು ಜೀವನ ಪದ್ಧತಿಯೆನ್ನುವವರೆಗೆ ಅದರ ಅರ್ಥಗಳನ್ನು ವಿಸ್ತರಿಸಲಾಗಿದೆ. ಚಾರಿತ್ರಿಕ ನೆಲೆಯಲ್ಲಿ 'ದಲ' ಎಂಬ ಸಂಸ್ಕೃತ ಶಬ್ದದಿಂದ ಬಂದುದು 'ದಲಿತ'; ದಲದ ದಲನಕ್ಕೆ ಒಳಗಾದವರು ದಲಿತರು; ದಲ ಎಂದರೆ ಚೂರು, ತುಂಡು, ಭಾಗ, ಸೈನ್ಯ, ಕತ್ತಿಯ ಬಲೆ, ಅಂದರೆ ಸೈನ್ಯಬಲದಿಂದ ಕತ್ತಿಯ ಅಲಗಿನಿಂದ ಚೂರು ಚೂರಾದವರು, ಛಿದ್ರವಾದವರು; ದಲನದ ಕ್ರಿಯೆಗೆ ಈಡಾದವರು; ಯಾರು ಶೋಷಿತರೋ ಅವರೇ ದಲಿತರು, ಇತ್ಯಾದಿ ವಿವರಣೆಗಳಿವೆ. ದಲಿತ ಎಂಬುದು ಎಲ್ಲ ಶೋಷಿತರನ್ನು ಒಳಗೊಳ್ಳುವಂಥದು; ಅಸ್ಪೃಶ್ಯರು, ಕಾರ್ಮಿಕರು, ಶ್ರಮಜೀವಿಗಳು, ಭೂಹೀನರು, ಬಡರೈತರು, ಆದಿವಾಸಿಗಳು, ಬಡ ಮುಸ್ಲಿಮರು, ಶೋಷಣೆಗೊಳಗಾದ ಮಹಿಳೆಯರು - ಇಂಥಾ ತುಳಿತಕ್ಕೊಳಗಾದವರೇ ದಲಿತರು ಎಂಬುದು ಮಹಾರಾಷ್ಟ್ರ ದಲಿತ ಪ್ಯಾಂಥರ್ಸ್‌ನ ವ್ಯಾಖ್ಯಾನ. ಸಾಂಸ್ಕೃತಿಕ ಸ್ವರೂಪದ ಅರಿವನ್ನು ಸಮರ್ಥಿಸಲು ಸಹಾಯಕವಾಗುವ ಒಂದು ಅವಶ್ಯ ಸಂಕೇತ ದಲಿತ ಎಂಬ ಶಬ್ದವೆಂತಲೂ ವ್ಯಕ್ತಪಡಿಸಲಾಗಿದೆ (ಮುರುಗ್‌ಕರ್: ೧೯೯೧: ೫೪). ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ನಿರಂತರವಾಗಿ ಶೋಷಣೆ ಗೊಳಗಾದವರೇ ದಲಿತರೆಂಬ ಭಾವನೆಯೇ ಎಲ್ಲೆಡೆ ಇರುವಂಥಾದ್ದು.

ಈಗ ವ್ಯಾಪಕ ಬಳಕೆಯಲ್ಲಿರುವ 'ದಲಿತ' ಶಬ್ದದ ಪ್ರಯೋಗ ಕಳೆದ ಶತಮಾನದಿಂದಲೇ ಆಗತೊಡಗಿದ್ದು ಸ್ಪಷ್ಟ. ಮಹಾರಾಷ್ಟ್ರದ ಸಮಾಜ ಕಾರ್ಯಕರ್ತ ಹಾಗೂ ಹೋರಾಟಗಾರ ಮಹಾತ್ಮಾ ಜ್ಯೋತಿರಾವ್ ಫೂಲೆಯವರು, ಅಸ್ಪೃಶ್ಯರು ಮತ್ತು ಜಾತಿಬಾಹಿರರನ್ನು ಹತ್ತಿಕ್ಕಲಾದವರು ಮತ್ತು ಛಿನ್ನ-ಭಿನ್ನರಾದವರೆಂದು ವಿವರಿಸುವಲ್ಲಿ ಈ ಶಬ್ದವನ್ನು ಪ್ರಯೋಗಿಸಿದರೆನ್ನಲಾಗುತ್ತದೆ (ಮ್ಯಾಸ್ಸೆ : ೧೯೯೫ : ೧೫). ಆದರೆ, ಇದೇ ವೇಳೆಗೆ, ಈ ಶಬ್ದವನ್ನು ಹುಟ್ಟುಹಾಕಿದವರು ಡಾ. ಬಿ. ಆರ್. ಅಂಬೇಡ್ಕರ್‌ರೆಂತಲೇ ಸ್ಪಷ್ಟಪಡಿಸಿರುವುದುಂಟು (ಮುರುಗ್‌ಕರ್ : ೧೯೯೧ : ೬). ಡಾ. ಅಂಬೇಡ್ಕರ್ ಈ ಶಬ್ದವನ್ನು ಪರಿಶಿಷ್ಟ ಜಾತಿ ಸಮುದಾಯವನ್ನು ಜಾತಿನೆಲೆಯಲ್ಲಿ ಸ್ಪಷ್ಟವಾಗಿ ಗುರುತಿಸುವ ನಿಟ್ಟಿನಲ್ಲಿ 'ದಲಿತ' ಶಬ್ದವನ್ನು ಮೊದಲಿಗೆ ಹುಟ್ಟುಹಾಕಿದರು. ಆ ನಂತರ ಇದು ಅಂಗೀಕರಿಸಲ್ಪಟ್ಟು ವ್ಯಾಪಕವಾಗಿ ಬಳಕೆಗೆ ಬಂದಿತು. ಪ್ರಾರಂಭದಲ್ಲಿ ಈ ಶಬ್ದವನ್ನು ಮಹಾರಾಷ್ಟ್ರದ ಮಹರ್ ಜನಾಂಗಕ್ಕೆ ಮಾತ್ರ ಅನ್ವಯಿಸಲಾಗಿದ್ದು, ಆ ನಂತರ ಎಲ್ಲಾ ಪರಿಶಿಷ್ಟ ಜಾತಿಗಳನ್ನು ಈ ಹೆಸರಿನಿಂದ ಕರೆಯಲು ಬಳಸಿಕೊಳ್ಳಲಾಯಿತು. ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್‌ನ ಸ್ಥಾಪಕರಲ್ಲೊಬ್ಬರಾದ ನಾಮದೇವ ಢಸಾಳರು ಪರಿಶಿಷ್ಟ ಜಾತಿ-ಪಂಗಡಗಳು, ನವಬೌದ್ಧರು, ಭೂಹೀನ ಕೃಷಿ ಕಾರ್ಮಿಕರು ಹಾಗೂ ಆರ್ಥಿಕ ಶೋಷಣೆಗೆ ಒಳಗಾದವರೆಲ್ಲರನ್ನು ಗುರುತಿಸುವಲ್ಲಿ ಈ ಶಬ್ದದ ವ್ಯಾಪ್ತಿಯನ್ನು ಹಿಗ್ಗಿಸಿದರು. ಇದು ಬಹು ಸಾಧ್ಯತೆಗಳನ್ನು ತೆರೆದಿಡುವಂಥಾದಾದ್ದರಿಂದ ಈ ಶಬ್ದವನ್ನು ಇತರ ನಾಯಕರೂ ಬಳಸತೊಡಗಿದರು.* ೧೯೬೭ರಲ್ಲಿ ಔರಂಗಾಬಾದಿನಲ್ಲಿ ನಡೆದ ವಿಚಾರ ಸಂಕಿರಣವೊಂದರಲ್ಲಿ ಸಾಹಿತಿಗಳು 'ದಲಿತ', 'ಪದದಲಿತ', 'ನವಬೌದ್ಧ' ಎಂಬ ಪದಗಳನ್ನು ಬಳಸಿಕೊಂಡುದು ವ್ಯಕ್ತಪಡುತ್ತದೆ (ಕಾಟ್ಕರ್ : ೧೯೯೬ : ૩). ೧೯೭೦ರ ವೇಳೆಗೆ ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಚಳವಳಿ ಸಂದರ್ಭದಲ್ಲೆ ದಲಿತ ಶಬ್ದದ ಬಳಕೆ ಹೆಚ್ಚಾಗಿ ಆಗತೊಡಗಿದ್ದು ಸ್ಪಷ್ಟ.

ದಲಿತ ಎಂಬುದು ಜಾತಿಯಲ್ಲ; ಸಮಾಜದ ತಳವರ್ಗದವರ ಹೋರಾಟ, ನೋವು-ನಲಿವು, ಅಪಮಾನ, ದಾರಿದ್ರ್ಯ, ಅನುಭವಗಳ ವಾಸ್ತವ. ಧರ್ಮದ ಹೆಸರಿನಲ್ಲಿ ಎಲ್ಲ ವಿಧದ ವಂಚನೆಗಳಿಗೆ ಒಳಗಾದವರು ದಲಿತರು. ಎಲ್ಲ ಜಾತಿಗಳ ಬಡವರೇ ದಲಿತರು ಎಂಬ ಹೇಳಿಕೆಗಳೂ ಕಣ್ಣಿಗೆ ಬೀಳುತ್ತವೆ. ದಲಿತ ಎಂಬುದು ಆಮೂಲಾಗ್ರ ಕ್ರಾಂತಿಗೆ ಕೊಟ್ಟ ಹೆಸರು; ಇದೊಂದು ಪೂರ್ತ ಸಾಕಾರಗೊಂಡ ಕ್ರಾಂತಿ. ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದವರೆಲ್ಲರಿಗೂ ಈ ಶಬ್ದ ಅನ್ವಯಿಸಿದರೂ ಸಂಘಟನೆಯ ದೃಷ್ಟಿಯಿಂದ ಅದು ಅಸ್ಪೃಶ್ಯರನ್ನು ಮಾತ್ರ ಮುಟ್ಟುತ್ತದೆಂಬುದನ್ನು ಒಪ್ಪದಿರುವಂತಿಲ್ಲ. ಏಕೆಂದರೆ,

* The term 'dalit' which was first coined by Dr. Ambedkar to describe the Scheduled Caste community in an explicitly caste context, was, therefore, accepted and widely used. Initially, this term became applicable only to members of the Mahar community in Maharashtra, but later it was used for reference to the Scheduled Castes as a whole. Still later, Namdeo Dhasal, who was one of the founder leaders of the Dalit Panther Movement, made an effort to widen the scope of this term to include Scheduled Castes, Tribes, Neo-Buddhists, landless labourers and all those economically exploited. it is also used by leaders because it opens multiple options - **Dalit Panther Movement in Maharashtra,** p. 6.

'ಅಸ್ಪೃಶ್ಯರು ಮತ್ತು ಜಾತಿಯಿಂದ ಅವಮಾನಿತರಾದವರೇ ದಲಿತರು' ಎನ್ನುತ್ತದೆ ದಲಿತ ಸಂಘರ್ಷ ಸಮಿತಿಯ ಸಂವಿಧಾನ. ಡಾ. ಮುನಿವೆಂಕಟಪ್ಪ ಹೇಳುವಂತೆ, ದಲಿತ ಪದ ವಿವಾದದಿಂದ ಕೂಡಿದೆ. ಇದಕ್ಕೆ ಕಾರಣ ಹಲವು ಚಿಂತಕರು ಹಲವು ವಿಧದಲ್ಲಿ ವ್ಯಾಖ್ಯಾನಿಸಿರುವುದು. ದಲಿತ ಪದ ಅಸ್ಪೃಶ್ಯ, ಅನಕ್ಷರಸ್ಥ ಮತ್ತು ಅವಮಾನಕ್ಕೊಳಗಾದ ಜಾತಿಗಳು ಎಂಬುದಾಗಿದೆ. ಅಸ್ಪೃಶ್ಯ ಯಾರೆಂದರೆ ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಯಾರು ದಮನಕ್ಕೊಳಗಾಗಿದ್ದಾರೊ ಅವರು. ದಲಿತರನ್ನು ದೇಶಾದ್ಯಂತ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತದೆ. ಹೊಲೆಯ, ಮಾದಿಗ, ಪಂಚಮ, ಚಂಡಾಲ, ಸಮಗಾರ, ಚಮ್ಮಾರ, ಆದಿಕರ್ನಾಟಕ, ಆದಿದ್ರಾವಿಡ, ಆದಿಜಾಂಭವ ಇತ್ಯಾದಿ. ಕರ್ನಾಟಕದಲ್ಲಿ ಸುಮಾರು ೧೫೦ ಅಸ್ಪೃಶ್ಯ ಜಾತಿಗಳಿವೆ ಎಂದು ಸಂವಿಧಾನದಲ್ಲಿ ಪಟ್ಟಿ ಮಾಡಲಾಗಿದೆ. ದಲಿತರು ಸಮರೂಪ ಹೊಂದಿರುವ ಗುಂಪೇನಲ್ಲ, ಬದಲಾಗಿ ಪ್ರಾದೇಶಿಕವಾದ ತಮ್ಮ ತಮ್ಮಲ್ಲಿ ಹಲವು ಭೇದಗಳನ್ನು ಹೊಂದಿದ್ದಾರೆ. ಅವರಲ್ಲಿನ ಆಂತರಿಕ ಭೇದಗಳು ಅವರ ಒಗ್ಗಟ್ಟಿಗೆ ಮತ್ತು ಅವರ ಸಮಸ್ಯೆಗಳ ನಿವಾರಣೆಗೆ ಅಡ್ಡಿಯಾಗಿವೆ (ಮುನಿವೆಂಕಟಪ್ಪ : ೧೯೯೮ : ೫೨).

ಸೈದ್ಧಾಂತಿಕ ನೆಲೆಯಲ್ಲಿ ದಲಿತರನ್ನು ಕುರಿತು ವಿವೇಚಿಸಿರುವ ಬರವಣಿಗೆಗಳತ್ತ ಗಮನ ಹರಿಸಿದರೆ, ಬೇರೆ ಬೇರೆ ಮೂಲಗಳಿಂದ ಸಂಗ್ರಹಿಸಿದ ಒಟ್ಟು ಮೂರು ಬಗೆಯ ಅಭಿಪ್ರಾಯಗಳು ಈ ಮುಂದಿನಂತೆ ಕಂಡುಬರುತ್ತವೆ: ೧. ಶೋಷಣೆ ಎಂಬ ಪದಕ್ಕೆ ಜಾತಿಭೇದವಿಲ್ಲ; ಆರ್ಥಿಕ-ಸಾಮಾಜಿಕ-ರಾಜಕೀಯ ರಂಗದಲ್ಲೆಲ್ಲಾ ಶೋಷಣೆಗೆ ಒಳಗಾದ ಎಲ್ಲ ಜನರೂ ದಲಿತರು; ೨. ಪಂಚಮರು ಅಥವಾ ಬಹಿಷ್ಕೃತರು ಎಂದು ಕರೆಯಿಸಿಕೊಳ್ಳುವ ಅಸ್ಪೃಶ್ಯರೆಲ್ಲಾ ದಲಿತರು; ಹಾಗೂ ೩. ಅಸ್ಪೃಶ್ಯರೂ ಸೇರಿದಂತೆ ಅಸ್ಪೃಶ್ಯತೆಯ ನೋವನ್ನು ಅನುಭವಿಸದಿದ್ದರೂ ಅಸ್ಪೃಶ್ಯರ ಹಾಗೆ ಆರ್ಥಿಕ-ಸಾಮಾಜಿಕ- ರಾಜಕೀಯ ರಂಗದಲ್ಲಿ ಶೋಷಣೆಗೆ ಒಳಗಾದ ಜನರೂ ಸೇರಿ ದಲಿತರಾಗುತ್ತಾರೆ (ಮಾಲಗತ್ತಿ: ೧೯೮೯ : ೪). ದಲಿತರು ಕೇವಲ ಶೋಷಿತರಷ್ಟೇ ಅಲ್ಲ; ಶೋಷಣೆಯ ಜೊತೆಗೆ ಅಮಾನವೀಯವಾದ ಹಿಂಸೆ, ಕ್ರೌರ್ಯಗಳಿಗೆ ಒಳಗಾದವರು. ಒಂದು ವ್ಯಕ್ತಿತ್ವವೇ ಇಲ್ಲದವರಂತೆ ನಡೆಯಿಸಿ ಕೊಳ್ಳಲ್ಪಟ್ಟವರೆಂಬಂಥ ಹೇಳಿಕೆಗಳಿಗೇನೂ ಕೊರತೆಯಿಲ್ಲ. ಇಂಥಾ 'ನಿಜ ದಲಿತ'ರಾದವರೂ ಅಸ್ಪೃಶ್ಯರಲ್ಲದೆ ಬೇರೆ ಯಾರಾಗಿರಲು ಸಾಧ್ಯ? ದಲಿತರ ವಿಶೇಷ ಪ್ರಾತಿನಿಧ್ಯದ ಮನವಿಯೊಂದಿಗೆ ದುಂಡುಮೇಜಿನ ಪರಿಷತ್ತಿಗೆ ಡಾ. ಅಂಬೇಡ್ಕರ್ ಮತ್ತು ಆರ್. ಶ್ರೀನಿವಾಸನ್ ಅವರು ಕೊಟ್ಟ ವಿಶೇಷ ಜ್ಞಾಪನಾ ಪತ್ರದಲ್ಲಿ (೪ ನವೆಂಬರ್ ೧೯೩೧) ದಲಿತರನ್ನು ಹೇಗೆ ಸಂಬೋಧಿಸಬೇಕೆಂಬುದರ ಬಗೆಗೂ ಮನವಿ ಮಾಡಿಕೊಳ್ಳಲಾಗಿದೆ. ದಲಿತ ಜನರನ್ನು 'ತುಳಿತಕ್ಕೊಳಪಟ್ಟವರು' (Depressed Classes) ಎಂದು ಕರೆಯುವುದನ್ನು ದಲಿತರು ಹಾಗೂ ಇತರರು ಆಕ್ಷೇಪಿಸಿದ್ದಾರೆ; ಈ ಹೆಸರು ಅವಮಾನಕರವಾಗಿಯೂ ಅವಹೇಳನಕಾರಿಯಾಗಿಯೂ ಇರುವುದರಿಂದ, ಹೊಸ ರಾಜ್ಯಾಂಗವನ್ನು ರಚಿಸುವಾಗ, ಹಾಲಿ ಹೆಸರನ್ನು ಬದಲಾವಣೆ ಮಾಡಬೇಕು; ಅವರನ್ನು 'ಹಿಂದೂಯೇತರರು' (Non-Caste Hindus), 'ಬಂಡಾಯ ಹಿಂದೂಗಳು' (Protestant Hindus or Non-Conformist Hindus) ಅಥವಾ ಇಂಥಾ ಇನ್ನಾವುದೇ ಹೆಸರಿನಿಂದ ಕರೆಯುವುದು

ಸೂಕ್ತವೆಂದು ನಾವು ತಿಳಿಯುತ್ತೇವೆ ಎಂದಿರುವುದನ್ನು ಈ ಮನವಿಯಲ್ಲಿ ನೋಡಬಹುದು (ಗೋಪಿನಾಥ್ : ೧೯೯೦ : ೮೨).

ಭಾರತ ಸಂವಿಧಾನದಲ್ಲಿ ಈ ಹೆಸರಿನ ಬದಲಾವಣೆ ಕುರಿತು ತೆಗೆದುಕೊಂಡ ನಿರ್ಣಯ ಕುರಿತು ಮೇಲೆಯೇ ನೋಡಿದ್ದೇವೆ. ಅಸ್ಪೃಶ್ಯ, ಪರಿಶಿಷ್ಟ ಜಾತಿ ಅಥವಾ ಹರಿಜನ ಎಂಬ ಪದಗಳ ಬದಲಿಗೆ ಅಧಿಕೃತವಾಗಿ 'ದಲಿತ' ಶಬ್ದವನ್ನೆ ಬಳಸುವಂತೆ ಮಹಾರಾಷ್ಟ್ರ, ಮಧ್ಯಪ್ರದೇಶ ಮತ್ತು ಉತ್ತರಪ್ರದೇಶ ಸರ್ಕಾರಗಳು ಸೂಚಿಸಿರುವುದನ್ನು ಇಲ್ಲಿ ಅವಶ್ಯ ಗಮನಿಸಬೇಕು. ಪರಿಶಿಷ್ಟ ಜಾತಿ-ಪಂಗಡ ಹಾಗೂ ಇತರ 'ಮೈಕ್ರೋ ಎಸ್. ಸಿ.' ಗಳಿಗೆ ಪರ್ಯಾಯವಾಗಿ 'ದಲಿತ' ಪಾರಿಭಾಷಿಕವನ್ನೆ ಪ್ರಸ್ತುತ ಅಧ್ಯಯನದಲ್ಲಿ ಪ್ರಯೋಗಿಸಿದೆ. ಸದ್ಯಕ್ಕೆ ತೀರಾ ಹಿಂದುಳಿದ ಸ್ಪೃಶ್ಯ-ಅಸ್ಪೃಶ್ಯ ಜಾತಿಗಳಿಗೆ ಸೀಮಿತಗೊಂಡಂತೆ ಈ ಪಾರಿಭಾಷಿಕ ವ್ಯಾಪಕ ಬಳಕೆಯಲ್ಲಿರುವುದನ್ನೂ ಗಮನಿಸಬಹುದು. ಸ್ವಾತಂತ್ರ್ಯಾ ನಂತರದಲ್ಲಿ ಭಾರತದ ದಲಿತರ ಬದುಕಿನಲ್ಲಿ ಆಗಿರುವ ಮಾರ್ಪಾಟು ಅಚ್ಚರಿ ಹುಟ್ಟಿಸುವಂಥಾದ್ದು. 'ದಲಿತಪ್ರಜ್ಞೆ' ಯೆಂಬುದು ಪ್ರತಿಭಟನೆಯ ಸಂಕೇತವಾಗುವುದರೊಡನೆ ದಲಿತರೆಲ್ಲರ ಒಗ್ಗಟ್ಟಿಗೆ ಕಾರಣವಾಗಿರುವುದು ಗಮನಾರ್ಹ. ಈ ಹಿನ್ನೆಲೆಯಲ್ಲಿ, ದಲಿತರು ಪ್ರಜ್ಞಾವಂತರಾಗಿ ಆತ್ಮವಿಶ್ವಾಸದಿಂದ ಪ್ರವರ್ತಿಸುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಚರಿತ್ರೆ ಮರುಕಳಿಸುವಂತೆ ತೋರುತ್ತಿದೆ. ನಿಂದಾತ್ಮಕವಾದುದನ್ನೆ ರಕ್ಷಣೆಯ ಗುರಾಣಿಯಾಗಿ ಪರಿವರ್ತಿಸಿಕೊಳ್ಳುವ ಹಾಗೂ ನಿಂದಕರಿಗೇ ಅದನ್ನು ತಿರುಗುಬಾಣವಾಗಿ ಪ್ರಯೋಗಿಸುವ ಪ್ರಯತ್ನಗಳು ನಡೆಯತೊಡಗಿವೆ. ಇತರೆ ಜಾತಿ-ಜನಾಂಗಗಳವರು ತಮ್ಮ ತಮ್ಮ ಹೆಸರುಗಳ ಮುಂದೆ ತಮ್ಮ ಜಾತಿಗಳ ಹೆಸರುಗಳನ್ನು ಇಟ್ಟುಕೊಳ್ಳುವುದು ರೂಢಿಯಲ್ಲಿದೆಯಷ್ಟೆ. ದಲಿತರೂ-ಮುಖ್ಯವಾಗಿ ಮಾದಿಗರು-ಹಾಗೆ ಕರೆದುಕೊಳ್ಳಲು ಹಿಂಜರಿಯದೆ ಆತ್ಮಾಭಿಮಾನ ಮೂಡಿಸಿಕೊಳ್ಳಬೇಕೆಂಬ ಆಂಧ್ರ ದಲಿತರ ಕರೆಗೆ ಇತರ ದಲಿತರು ಹೇಗೆ ಸ್ಪಂದಿಸುವರೋ ಕಾದುನೋಡಬೇಕಾಗಿದೆ.

❑ ❑

# ೨. ಚಳವಳಿಗಳ ಹಿನ್ನೆಲೆ

ಹಿಂದುಳಿದ ವರ್ಗಗಳ ಹಾಗೂ ದಲಿತ ಚಳವಳಿಗಳನ್ನು ಕುರಿತು ಚಾರಿತ್ರಿಕ ನೆಲೆಯಲ್ಲಿ ವಿವೇಚಿಸುವುದು ಅನಿವಾರ್ಯ. ಈ ಸಮಸ್ಯೆಯನ್ನು ಬಗೆಹರಿಸಲು ಪ್ರಯತ್ನಿಸಿದ ಗೌತಮಬುದ್ಧನ ನಂತರವೂ, ಅಂದರೆ ಸುಮಾರು ೨೫೦೦ ವರುಷಗಳ ತರುವಾಯವೂ ಈ ಸಮಸ್ಯೆ ಹಾಗೆಯೇ ಉಳಿದಿದೆಯೆಂಬುದು ಭಾರತದ ಪ್ರಸ್ತುತ ಸಾಮಾಜಿಕ ಪರಿಸ್ಥಿತಿಗೆ ಹಿಡಿದ ಕನ್ನಡಿಯಾಗಿದೆ. ಮೊದಲ ಸಾಮಾಜಿಕ ಕ್ರಾಂತಿ ಸಿಂಧೂ ನಾಗರಿಕತೆ ಅವಧಿಯಲ್ಲಿ ಹುಟ್ಟಿಕೊಂಡಿತೆಂಬುದು; ದಸ್ಯು ಅಥವಾ ದಾಸರಂಥಾ ಹಿಂದುಳಿದ ಬುಡಕಟ್ಟು ಜನಾಂಗಗಳು ಜೀತಪದ್ಧತಿಯ ವ್ಯಾಪ್ತಿಗೊಳಪಟ್ಟು ಗುಲಾಮ ಸಮಾಜ ವ್ಯವಸ್ಥೆಯಲ್ಲಿ ನಲುಗಿ ಹೋದುದು; ಪ್ರತಿಭಟನೆ ಮತ್ತು ರಕ್ತಪಾತದ ನಂತರ ನಾಶಗೊಂಡುದು ಚರಿತ್ರೆಯಲ್ಲಿ ದಾಖಲಾಗಿದೆ. ಮುಖ್ಯವಾಗಿ, ಮಹಿಳೆಯರು ಮತ್ತು ಶೂದ್ರರು ಇಂಥಾ ಹೋರಾಟಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರಿಂದಲೇ, ಚಾತುರ್ವರ್ಣದ ಚರಿತ್ರೆಯೆಂದರೆ ಮಹಿಳೆಯರು ಮತ್ತು ಶೂದ್ರರ ಹೋರಾಟದ ಚರಿತ್ರೆಯೇ ಆಗಿದೆಯೆಂಬ ವ್ಯಾಪಕ ಅಭಿಪ್ರಾಯ ವ್ಯಕ್ತಪಟ್ಟಿದೆ. ಬ್ರಾಹ್ಮಣ-ಕ್ಷತ್ರಿಯ-ವೈಶ್ಯ ವರ್ಣಗಳು ಒಂದೆಡೆಯಿದ್ದರೆ, ಇವುಗಳ ಪಟ್ಟಭದ್ರತೆಯನ್ನು ಅಸ್ಥಿರಗೊಳಿಸುವ ಸೆಣಸಾಟದಲ್ಲಿ ಪ್ರಮುಖ ಪಾತ್ರ ವಹಿಸಿದವರು ಮಹಿಳೆಯರು ಮತ್ತು ಶೂದ್ರರೆಂಬುದನ್ನು ಚರಿತ್ರೆ ಒಳಗೊಳ್ಳುತ್ತದೆ. ಬುದ್ಧಪೂರ್ವದ ಯುಗವೆನಿಸಿದ ವೈದಿಕ ಯುಗದಿಂದ ಬ್ರಿಟಿಷ್‌ಪೂರ್ವಯುಗದವರೆಗಿನ ಕಥೆಯಾದರೂ ಇದೇ. ಜಾತಿವ್ಯವಸ್ಥೆಯನ್ನು ನಿರಂತರಗೊಳಿಸಲೆತ್ನಿಸಿದ ವೈದಿಕ ಮತ್ತು ಜಾತಿವಿನಾಶವನ್ನು ಸಾಧಿಸಲು ಸತತ ಪ್ರಯತ್ನದಲ್ಲಿ ತೊಡಗಿದ ಅವೈದಿಕ ವರ್ಗಗಳ ನಡುವಣ ಹೋರಾಟಗಾಥೆ. ಜಾತಿವ್ಯವಸ್ಥೆ ತನ್ನ ಸ್ಥೂಲ ಸ್ಥಿತಿಯಲ್ಲಿ ಕಾಣಿಸಿಕೊಳ್ಳುವ ಕ್ರಿ.ಪೂ. ೬ನೇ ಶತಮಾನದಿಂದೀಚೆಗೆ, ಅಂದರೆ ವಿಜಯನಗರ ಕಾಲದವರೆಗೆ ಶಿಥಿಲಗೊಳ್ಳದೆ ಮುಂದುವರೆದುಕೊಂಡು ಬಂದುದನ್ನು ಗುರುತಿಸಲಾಗುತ್ತದೆ. ಬುಡಕಟ್ಟು ಸಮಾಜದ ಸಾಂಸ್ಥಿಕ ರಚನೆಯನ್ನು ವರ್ಣವ್ಯವಸ್ಥೆಯೆಂದು ಹಾಗೂ ಈ ಸಮಾಜದ ಕುಸಿತದೊಂದಿಗೆ ಜಾತಿವ್ಯವಸ್ಥೆಯೆಂಬ ಸಾಂಸ್ಥಿಕ ರಚನೆ ಕಾಣಿಸಿಕೊಂಡುದನ್ನು ಕಂಡುಕೊಳ್ಳಲಾಗಿದೆ.

ಇಲ್ಲಿ ಉದ್ಭವಿಸುವ ಪ್ರಶ್ನೆಯೆಂದರೆ, ಮೂಲದಲ್ಲಿ ಶೂದ್ರ ಪಂಗಡಗಳು ದಲಿತ ಪಂಗಡಗಳೇ ಆಗಿದ್ದುವೆಂದು ಭಾವಿಸಿದರೂ ಅವು ಅಸ್ಪೃಶ್ಯ ಪಂಗಡಗಳಾಗಿದ್ದಿರಬಹುದೇ? - ಎಂಬುದು. ಕ್ರಿ. ಶ. ೬ನೇ ಶತಮಾನದ ಆರಂಭದ ವೇಳೆಗಾಗಲೇ ಭಾರತದಲ್ಲಿ ಜಾತಿವ್ಯವಸ್ಥೆಯ ಸರ್ವಲಕ್ಷಣಗಳೂ ತೋರಿಬಂದಿದ್ದು, ಶೂದ್ರಪಂಗಡಗಳು ಅಥವಾ ಹಿಂದುಳಿದ ಪಂಗಡಗಳು ಜಾತಿವ್ಯವಸ್ಥೆಯ ಅವಿಭಾಜ್ಯ ಅಂಗಗಳೆನಿಸಿದ್ದುವು. ಜಾತಿವ್ಯವಸ್ಥೆಯ ಬಿಗಿತನ ಹೆಚ್ಚತೊಡಗಿದಂತೆ ಅಸ್ಪೃಶ್ಯರ ಸಂಖ್ಯೆಯೂ ಅಧಿಕಗೊಂಡುದು ಗಮನಾರ್ಹ.

ಇದರೊಂದಿಗೆ ಶೋಷಣೆ ಮತ್ತು ದೌರ್ಜನ್ಯಗಳೂ ಹೆಚ್ಚಾದವು. ಆಗಿನ ತಂತ್ರಾರಾಧನಾ ಧರ್ಮವಾದರೂ ಅವೈದಿಕ ಧರ್ಮಗಳು ಮತ್ತು ಪಂಥಗಳಿಗೆ ಸೇರಿದ ಹಿಂದುಳಿದ ಮತ್ತು ಅಸ್ಪೃಶ್ಯ ಜಾತಿಗಳ ಜನರ ರಕ್ಷಣೆಗೆಂದೇ ಜನ್ಮತಳೆಯಿತೆನ್ನುವುದನ್ನು ನೋಡುತ್ತೇವೆ. ಶೂದ್ರಧರ್ಮವೆನಿಸಿದ ತಂತ್ರ, ಜಾತಿವಿರೋಧಿ ಮಾತ್ರವಲ್ಲದೆ ಸಮಾನತೆಯನ್ನು ಘೋಷಿಸುವ ಧರ್ಮವೂ ಆಗಿ ಬೆಳೆಯಿತು. ಅಸ್ಪೃಶ್ಯತೆ ಮತ್ತು ಜಾತಿಪದ್ಧತಿಗಳ ನಡುವೆ ಅವಿನಾಭಾವ ಸಂಬಂಧ ಇರುವುದು ಸ್ಪಷ್ಟ.

ಮಧ್ಯಕಾಲೀನ ಭಾರತದಲ್ಲಿ ಅರಬ್ಬರ ಮತ್ತು ಟರ್ಕರ ಪ್ರವೇಶವಾದ ಸಂದರ್ಭದಲ್ಲಿ ಜಾತಿಪದ್ಧತಿ ಒಡೆದು ಕಾಣುವಷ್ಟರ ಮಟ್ಟಿಗೆ ಇಲ್ಲಿ ಬೇರುಬಿಟ್ಟಿದುದು ಮಾತ್ರವಲ್ಲದೆ, ಅಸ್ಪೃಶ್ಯ ಜಾತಿಗಳಾಗಿ ಸಾಮಾನ್ಯ ಕೈಕಸಬುದಾರ ಸಮುದಾಯಗಳು ಪರಿಗಣಿತವಾಗಿದ್ದವು. ಅವರಿಗಾಗಿ ಪ್ರತ್ಯೇಕ ಕೇರಿಗಳು ಸೃಷ್ಟಿಗೊಂಡಿದ್ದುವೆಂದರೆ ಇದರ ಭೀಕರತೆಯ ಅರಿವಾಗುತ್ತದೆ. ಅರಬ್ಬರಾಗಲಿ, ಟರ್ಕರಾಗಲಿ ಜಾತಿವಿರೋಧಿ ಹೋರಾಟಗಳಿಗೆ ತಮ್ಮ ಸಹಾನುಭೂತಿ ತೋರಲಿಲ್ಲವೆನ್ನುವುದು ಆಗಿನ ವಿಪರ್ಯಾಸ ಸಂಗತಿಗಳಲ್ಲೊಂದು. ಭಕ್ತಿ ಚಳವಳಿಯಾಗಲಿ, ಸೂಫಿ ಚಳವಳಿಯಾಗಲಿ ಜಾತಿವ್ಯವಸ್ಥೆಯನ್ನು ನಾಶಗೊಳಿಸುವಲ್ಲಿ ನಿರೀಕ್ಷಿಸಿದ ಹಂತ ತಲುಪಲಿಲ್ಲವೆನ್ನುವುದು; ಹಾಗೆಯೇ, ಸೂಫಿ ಚಳವಳಿ ಆಧ್ಯಾತ್ಮಿಕ ಸಮಾನತೆ ಧ್ಯೇಯದ ಇಸ್ಲಾಂ ಚಳವಳಿಯಾದ್ದರಿಂದ ಅದು ಜಾತಿವಿರೋಧಿ ಚಳವಳಿಯಾಗುವಂತಿರಲಿಲ್ಲವೆಂಬುದು ಪರಿಶೀಲನಾರ್ಹ ಅಂಶಗಳು. ಮೊಗಲ್ ಆಳ್ವಿಕೆಯ ಆಂತರಿಕ ಬಿಕ್ಕಟ್ಟಿನ ಮೂಲವಾಗಿ ಜಾತಿವ್ಯವಸ್ಥೆ ಕಂಡುಬಂದುದು; ಅಸ್ಪೃಶ್ಯ ಜಾತಿಗಳು, ಆದಿವಾಸಿ ಬುಡಕಟ್ಟುಗಳು ಕಾರ್ಮಿಕರಾಗಿದ್ದರೂ ರೈತ ಸಮುದಾಯದ ಜಾತಿಗಳಾಗದಂತೆ ಅವಕಾಶ ವಂಚಿತವಾದುದು; ಬ್ರಾಹ್ಮಣವಿರೋಧಿ ಹಾಗೂ ಶೂದ್ರಪರವಾದ ಶಾಕ್ತ ಬಂಡಾಯಕ್ಕೆ ಬ್ರಾಹ್ಮಣವಾದಿ ಶಕ್ತಿಗಳ ಕುತಂತ್ರದಿಂದ ಹಿನ್ನಡೆಯುಂಟಾದುದು - ಇವೆಲ್ಲವೂ ಇಂಗ್ಲಿಷರ ಆಡಳಿತಾವಧಿಯವರೆಗಿನ ಭಾರತ ಚರಿತ್ರೆಯಲ್ಲಿ ಕಂಡುಬರುವಂಥ ಸಂಗತಿಗಳು.

ಆದರೆ ವಸಾಹತುಕಾಲೀನ ಭಾರತದಲ್ಲಿ ಜಾತಿವಿನಾಶದ ಅರಿವನ್ನು ವರ್ಗವಿನಾಶ ಮತ್ತು ಸ್ತ್ರೀ ವಿಮೋಚನೆಗಳ ನೆಲೆಯಲ್ಲಿ ಭಾರತೀಯ ಅಸ್ಪೃಶ್ಯ ಮತ್ತು ಇತರೆ ಹಿಂದುಳಿದ ವರ್ಗಗಳಲ್ಲಿ ಮೂಡಿಸುವ ಪರಿಣಾಮಕಾರಿ ಕೆಲಸಕ್ಕೆ ಕೈಹಾಕಿದವರೆಂದರೆ ಮಹಾತ್ಮಾ ಜ್ಯೋತಿ ಬಾ ಫೂಲೆ ಮತ್ತು ಡಾ. ಬಿ. ಆರ್. ಅಂಬೇಡ್ಕರ್. ಭಾರತೀಯ ಅಸ್ಪೃಶ್ಯ ಮತ್ತು ಹಿಂದುಳಿದ ವರ್ಗಗಳನ್ನು ಅಬ್ರಾಹ್ಮಣವಾದಿ ಸಂಘರ್ಷಕ್ಕೆ ಯಶಸ್ವಿಯಾಗಿ ಸೆಳೆದವರಲ್ಲಿ ಈ ಈರ್ವರೇ ಪ್ರಮುಖರು.

### ೨.೧. ಮಹಾರಾಷ್ಟ್ರದ ಪ್ರಭಾವ

ಕರ್ನಾಟಕದಲ್ಲಿ ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು ಪ್ರವೇಶಿಸಲು ಮತ್ತು ವ್ಯವಸ್ಥಿತವಾಗಿ ಆರಂಭಗೊಳ್ಳಲು ಮಹಾರಾಷ್ಟ್ರದಲ್ಲಿ ನಡೆದ ಈ ಬಗೆಯ ಸುಧಾರಣಾ ಹೋರಾಟಗಳು ಪರೋಕ್ಷವಾಗಿ ಕಾರಣವೆಂದು ಗುರುತಿಸಲಾಗುತ್ತದೆ. ಮುಖ್ಯವಾಗಿ, ಇಂಥಾ ಹೋರಾಟಪ್ರಜ್ಞೆ ಮುಂಬಯಿ ಕರ್ನಾಟಕದಿಂದ ಮೈಸೂರಿನತ್ತ ಹರಿಯಿತೆಂಬ ಅಭಿಪ್ರಾಯವೂ ಇದೆ. ಇದನ್ನು ಸಮರ್ಥಿಸಲೆಂಬಂತೆ ಮಹಾತ್ಮಾ ಜ್ಯೋತಿ ಬಾ ಫೂಲೆ (೧೮೨೭-೧೮೯೦) ಹಾಗೂ ಡಾ. ಅಂಬೇಡ್ಕರ್‌ರಂಥಾ ಮಾನವತಾವಾದಿ ನೆಲೆಯ

ಹೋರಾಟಗಾರರನ್ನು ಹಿನ್ನೆಲೆಯಲ್ಲಿ ಉಲ್ಲೇಖಿಸಲಾಗುತ್ತದೆ. ೧೯ನೇ ಶತಮಾನದ ಎರಡನೇ ದಶಕದಿಂದಲೇ ಮಹಾರಾಷ್ಟ್ರದಲ್ಲಿ ಆರಂಭಗೊಂಡ ಈ ನಿಟ್ಟಿನ ಚರ್ಚೆ ಮತ್ತು ಪ್ರತಿಭಟನೆಗಳು ೨೦ನೇ ಶತಮಾನದ ಮಧ್ಯಕಾಲದ ವೇಳೆಗೆ ನಿಶ್ಚಿತ ರೂಪ ಪಡೆದುಕೊಂಡಿದ್ದನ್ನು ಗಮನಿಸಬಹುದು. ಜ್ಯೋತಿ ಬಾ ಫೂಲೆಯವರು ತಮ್ಮ ಕಾರ್ಯಕ್ರಮಗಳನ್ನು ಪ್ರಾರಂಭಿಸುವ ವೇಳೆಗಾಗಲೇ ಹಲವಾರು ಸಮಾಜ ಸುಧಾರಕರು ಮಹಾರಾಷ್ಟ್ರಾದ್ಯಂತ ತಮ್ಮ ಪಾಲಿನ ಕೆಲಸಗಳನ್ನು ನಿರ್ವಹಿಸಿದ್ದರು. ಫೂಲೆಯವರು ಅಂಬೇಡ್ಕರರಿಗೆ 'ಗುರು ಸಮಾನ'ರಾಗಿದ್ದರೆಂತಲೇ ಹೇಳುವುದುಂಟು. ಶೋಷಿತರ, ದಲಿತರ ದನಿಯಾಗಿ ರೂಪುಗೊಂಡ ಡಾ. ಅಂಬೇಡ್ಕರ್ ತಮ್ಮ ಹೋರಾಟಕ್ಕೆ ಸ್ಫೂರ್ತಿ, ಮಾರ್ಗದರ್ಶನಗಳನ್ನು ಪಡೆದುದು ಫೂಲೆಯವರ ವಿಚಾರಗಳಿಂದ. ಫೂಲೆಯವರು ೧೮೫೭ ರಿಂದ ೧೮೬೪ರ ಅವಧಿಯಲ್ಲಿ ಬಾಲಕಿಯರ ಶಾಲೆ, ಅಸ್ಪೃಶ್ಯರಿಗಾಗಿ ಶಾಲೆ, ಬಾಲಹತ್ಯಾ ಪ್ರತಿಬಂಧಕ ಗೃಹ ಇತ್ಯಾದಿ ಸಂಸ್ಥೆಗಳನ್ನು ಆರಂಭಿಸಿದುದು ಹೋರಾಟ ಪರಂಪರೆಯ ಮುಂದುವರಿಕೆಯೇ ಆಯಿತು. ಮಹಾರಾಷ್ಟ್ರದ ವಿಚಾರವಂತರ ದೃಷ್ಟಿಯಲ್ಲಿ, ಜ್ಯೋತಿ ಬಾ ಫೂಲೆ ಹರಿಜನ- ಮಾದಿಗ ಮುಂತಾದ ಅಸ್ಪೃಶ್ಯ ಜನರ ಮೊದಲ ಉದ್ಧಾರಕ. ಐದುಸಾವಿರ ವರ್ಷಗಳ ಭಾರತದ ಇತಿಹಾಸದಲ್ಲಿ ಬಾಲಕಿಯರಿಗಾಗಿ ಶಾಲೆ ತೆರೆದ ಮೊದಲ ಭಾರತೀಯ. ಆದ್ದರಿಂದ ಇವರು ಭಾರತೀಯ ಸ್ತ್ರೀ ಶಿಕ್ಷಣದ ಜನಕನೆಂಬ ಗೌರವಕ್ಕೆ ಪಾತ್ರರು. ಸ್ತ್ರೀ ಸ್ವಾತಂತ್ರ್ಯ, ರೈತ, ಕಾರ್ಮಿಕ ನಿರುದ್ಯೋಗಿಗಳ ದುಃಖ-ದಾರಿದ್ರ್ಯಗಳ ನಿವಾರಣೆಗಾಗಿ ಚಳವಳಿ ಸಂಘಟಿಸಿದ ಮೊದಲ ಮುಂದಾಳು. ಚಾತುರ್ವರ್ಣ ಮತ್ತು ಜಾತಿಭೇದದ ವ್ಯವಸ್ಥೆಯ ಮೇಲೆ ದಾಳಿ ಮಾಡಿ ಮಾನವೀಯತೆಯ, ಸಮಾನತೆಯ ಘೋಷಣೆ ಮಾಡಿದ ಮೊದಲ ಲೋಕನಾಯಕ. ಆಧುನಿಕ ಭಾರತದ ಮೊದಲನೆಯ ಮಹಾತ್ಮಾ. 'ಸತ್ಯಮೇವ ಜಯತೆ' ಮಂತ್ರಕ್ಕೆ ಶಕ್ತಿ ತುಂಬಿದ ಮೊದಲನೆಯ ಸತ್ಯಶೋಧಕ (ಕಾಟ್ಕರ್ : ೧೯೯೬: ೨೧). ೧೮೭೩ರಲ್ಲಿ ಇವರಿಂದ ಆರಂಭವಾದ 'ಸತ್ಯಶೋಧಕ ಸಮಾಜ' ಶೋಷಿತರನ್ನು ಶೋಷಣೆಯಿಂದ ಮುಕ್ತಗೊಳಿಸುವ ದಿಸೆಯಲ್ಲಿ ಚಳವಳಿ ಸ್ವರೂಪದ ಚಟುವಟಿಕೆಗಳಿಗೆ ನಾಂದಿ ಹಾಡಿತು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದೆಂದರೆ, ಜಾತಿವ್ಯವಸ್ಥೆಯನ್ನು ತೊಡೆದು ಹಾಕುವ ಸಮಾಜಕ್ರಾಂತಿ ಇಂಗ್ಲಿಷ್ ಆಡಳಿತದಿಂದ ಆಗಲಿಲ್ಲವೆಂಬುದು. ಆದರೆ ಫೂಲೆಯವರು ಈ ವಿಚಾರದಲ್ಲಿ ಯಶಸ್ವಿಯ ಹಾದಿಯಲ್ಲಿ ಮುನ್ನುಗ್ಗಿದರು. ದಲಿತರ ಪರ ನ್ಯಾಯ ಪಡೆಯಲು ಆ ನಂತರ ತೀವ್ರತರ ಹೋರಾಟಕ್ಕೆ ಸನ್ನದ್ಧರಾದ ಡಾ. ಅಂಬೇಡ್ಕರ್ ಇದೇ ಹಾದಿಯಲ್ಲಿ ದಲಿತರನ್ನು ಬಹುದೂರದವರೆಗೆ ನಡೆಸಿಕೊಂಡು ಬಂದುದನ್ನು ಚರಿತ್ರೆ ಹೇಳುತ್ತದೆ.

ಡಾ. ಅಂಬೇಡ್ಕರ್‌ರ ಪ್ರಕಾರ, ಜಾತಿ ಎಂದರೇನೆ ವಿಭಜನೆ-ವಿಂಗಡನೆ. ಅವರು ಹೇಳಿದಂತೆ, 'ಅಸ್ಪೃಶ್ಯರನ್ನು ಶೋಷಿಸಲು ಹಿಂದೂಗಳು ರಚಿಸಿಕೊಂಡಿರುವ ಒಂದು ವಸಾಹತುಶಾಹಿ ಕ್ರಮ ಅದು'. ಅವರು ಮುಂದುವರೆದು, ಬ್ರಾಹ್ಮಣೇತರ ವರ್ಗಗಳು ಇತಿಹಾಸದ ಬೆಳವಣಿಗೆಯಲ್ಲಿ ಹಿಂದೂ ಬುದ್ಧಿಯಲ್ಲಿ ಗಟ್ಟಿಯಾಗಿ ಕುಳಿತಿರುವುದನ್ನು, ಕೇವಲ ನಂಬಿಕೆಯೊಂದೆ ಅವುಗಳನ್ನು ಹಿಂದೂಧರ್ಮದಲ್ಲಿ ನೆಲೆನಿಲ್ಲುವಂತೆ ಮಾಡಿವೆಯೆಂದು ವ್ಯಾಖ್ಯಾನಿಸುತ್ತಾರೆ. ನಂಬಿಕೆಯ ಮೇಲೆ ಜಾತಿ ನಿಂತಿರುವುದನ್ನು ಸಮರ್ಥಿಸುತ್ತಾರೆ. ಹಿಂದೂ ಜನಾಂಗ ಒಂದು ಸಂಕೀರ್ಣ ರಚನೆಯಾಗಿದ್ದರೂ ಅದರಲ್ಲೊಂದು ಆಳವಾದ ಸಾಂಸ್ಕೃತಿಕ

ಏಕತೆಯಿದೆ; ವ್ಯಾಪಕವಾದ ಸಾಂಸ್ಕೃತಿಕ ಘಟಕದ ಪ್ರತಿಯೊಂದು ಭಾಗವನ್ನು ಹೆಣೆದು ಕಟ್ಟಿದೆ. ಪ್ರಾರಂಭದಲ್ಲಿದ್ದುದು ಒಂದೇ ಜಾತಿ; ಅನುಕರಣೆಯಿಂದ ಮತ್ತು ಬಹಿಷ್ಕರಿಸಿದ್ದರಿಂದ ವರ್ಗಗಳೇ ಜಾತಿಗಳಾಗಿ ಪರಿಣಮಿಸಿವೆ (ಅಂಬೇಡ್ಕರ್-೧ : ೧೯೮೦ : ३೧). ನೆಲೆಗೊಳಿಸಲ್ಪಟ್ಟಿರುವ ಈ ವ್ಯವಸ್ಥೆ ಸ್ಥಾನ ಮತ್ತು ಕರ್ತವ್ಯಗಳೆರಡರಲ್ಲೂ ಸಾಂಪ್ರದಾಯಿಕವಾದ ವ್ಯವಸ್ಥೆ. ಒಮ್ಮೆ ಸ್ಪೃಶ್ಯನಾದರೆ ಯಾವಾಗಲೂ ಸ್ಪೃಶ್ಯನೇ. ಒಮ್ಮೆ ಅಸ್ಪೃಶ್ಯನಾದರೆ ಯಾವಾಗಲೂ ಅಸ್ಪೃಶ್ಯನೇ ಎನ್ನುತ್ತಾರೆ ಅವರು (ಅಂಬೇಡ್ಕರ್-೫ : ೧೯೮೬ : ३೮).

ಅಸ್ಪೃಶ್ಯತಾ ನಿವಾರಣೆ ಮಾತ್ರವಲ್ಲದೆ, ಎಲ್ಲಾ ದುರ್ಬಲವರ್ಗಗಳ ವಿಮೋಚನೆ ಡಾ. ಅಂಬೇಡ್ಕರ್‌ರ ಹೋರಾಟದ ಗುರಿಯಾಗಿದ್ದುದು ಸ್ಪಷ್ಟ. ಹಿಂದುಳಿದ ವರ್ಗಗಳ ಬಗೆಗೆ ಅವರಲ್ಲಿದ್ದ ಕಾಳಜಿ ಹಾಗೂ ಆ ವರ್ಗಗಳಿಗೆ ಆಗುತ್ತಿರುವ ಅನ್ಯಾಯಗಳ ಬಗೆಗೆ ಅವರಲ್ಲಿದ್ದ ಆತಂಕಗಳನ್ನು ಸಮರ್ಥವಾಗಿ ಅಭಿವ್ಯಕ್ತಿಸುವ ಪ್ರತೀಕವೆನಿಸಿದಂಥವು ಅವರ ವಿಚಾರಗಳು.

ಭಾರತದಲ್ಲಿ ಸಾರ್ವಜನಿಕ ಸೇವೆಗಳ ಕುರಿತು ೧೮೮೬-೮೭ರಲ್ಲಿ ಎಚ್ಚಸನ್ ಆಯೋಗ ಕೆಲವಾರು ಶಿಫಾರಸುಗಳನ್ನು ಮಾಡಿತು. ಈ ಆಯೋಗದ ಪ್ರಕಾರ, ಇಂಗ್ಲೆಂಡಿನಲ್ಲಿ ಮಾಡಿದ ಉನ್ನತ ಅಧಿಕಾರಗಳ ನೇಮಕವನ್ನು ಗಣನೀಯವಾಗಿ ಕಡಿಮೆಮಾಡಿ, ಇದರಿಂದ ಲಭ್ಯವಾಗುವ ಎಲ್ಲಾ ಉನ್ನತ ನೇಮಕಗಳನ್ನು ಸ್ಥಳೀಯವಾಗಿ ಭಾರತದಲ್ಲಿಯೇ ಮಾಡಬೇಕು ಎಂದಿತ್ತು. ಆದರೆ ಈ ಶಿಫಾರಸಿನಿಂದ ಆಗಿನ ವ್ಯವಸ್ಥೆಯಲ್ಲಿ ಯಾವುದೇ ಗಣನೀಯ ಬದಲಾವಣೆಯಾಗುತ್ತದೆಂದು ಹೇಳಲಾಗದೆಂದು ಡಾ. ಅಂಬೇಡ್ಕರ್ ಅಭಿಪ್ರಾಯಿಸಿದರು. ಸಾರ್ವಜನಿಕ ಸೇವೆಗಳ ಬಗೆಗೆ ಸುಧಾರಣೆಗಳನ್ನು ಸೂಚಿಸಿದ ಡಾ. ಅಂಬೇಡ್ಕರ್, ಭಾರತೀಕರಣ ಮತ್ತು ಹಿಂದುಳಿದ ವರ್ಗಗಳ ಬೇಡಿಕೆಗಳನ್ನು ಕುರಿತು ಸಮರ್ಪಕವಾಗಿ ವಿವೇಚಿಸಿದರು. ಮುಖ್ಯವಾಗಿ, ಹಿಂದುಳಿದ ವರ್ಗಗಳಿಗೆ ಆಗುತ್ತಿರುವ ಅನ್ಯಾಯಗಳ ಬಗೆಗೆ ಹೆಚ್ಚು ಒತ್ತುಕೊಟ್ಟುದು ಗಮನಾರ್ಹ. ಅವರು ಹೇಳಿದಂತೆ, ಭಾರತೀಯರಿಗಾಗಿ ಮುಕ್ತಗೊಳಿಸಲಾದ ಸಾರ್ವಜನಿಕ ಸೇವೆಗಳು ವಿವಿಧ ಸಂದರ್ಭಗಳಿಂದಾಗಿ ಕೇವಲ ಬ್ರಾಹ್ಮಣರ ಮತ್ತು ತತ್ಸಂಬಂಧ ಇತರ ಜಾತಿಗಳು ಸ್ವತ್ತಾಗಿರುವುದು ಎಲ್ಲರಿಗೂ ಸಾಕಷ್ಟು ತಿಳಿದಿರುವ ವಿಷಯ. ಬ್ರಾಹ್ಮಣೇತರರು, ನಿಮ್ನವರ್ಗಗಳು ಮತ್ತು ಮಹಮದೀಯರು ಈ ಸೇವೆಗಳಿಂದ ಸಂಪೂರ್ಣ ವರ್ಜಿತರಾಗಿದ್ದಾರೆ. ಸಾರ್ವಜನಿಕ ಸೇವೆಗಳಲ್ಲಿ ತಮಗೆ ನ್ಯಾಯವಾಗಿ ದೊರಕಬೇಕಾದ ಪಾಲನ್ನು ಪಡೆದುಕೊಳ್ಳಲು ಅವರು ತೀವ್ರ ಚಳವಳಿ ನಡೆಸಿದ್ದಾರೆ... ಹಿಂದುಳಿದ ವರ್ಗಗಳ ಜನರನ್ನು ಸಾರ್ವಜನಿಕ ಸೇವೆಗಳಿಗೆ ಪ್ರವೇಶ ಪಡೆಯಲು ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಭಾಗವಹಿಸಲು ಆಹ್ವಾನಿಸುವುದೆಂದರೆ ಅವರಿಗೆ ಮೋಸ ಮಾಡಿದಂತಾಗುವುದು ಮತ್ತು ಹಿಂದುಳಿದ ವರ್ಗಗಳು ಈ ರೀತಿ ಮೋಸ ಹೋಗಲು ನಿರಾಕರಿಸುವುದು ಸರಿಯೇ ಆಗಿದೆ.... ಸಾರ್ವಜನಿಕ ಸೇವೆಗಳ ನೇಮಕದಲ್ಲಿ ದಕ್ಷತೆಯೇ ಆಧಾರವಾಗಿರಬೇಕೆಂದು ಬಲವಾಗಿ ಪ್ರತಿಪಾದಿಸುವವರಿಗೆ ಆಧುನಿಕ ಆಡಳಿತ ವ್ಯಾಪ್ತಿಯಲ್ಲಿ ಬರುವ ವಿಷಯಗಳ ಕಲ್ಪನೆ ಇದ್ದಂತೆ ತೋರುವುದಿಲ್ಲ. ಶಾಸಕಾಂಗದಲ್ಲಿ ಪಾಸಾದ ಶಾಸನಗಳನ್ನು ಜಾರಿಗೊಳಿಸುವುದು ಮಾತ್ರ ಆಡಳಿತವೆಂದು ಅವರು ಭಾವಿಸಿದಂತಿದೆ. ಇದು ಆಡಳಿತದ ವ್ಯಾಪ್ತಿ ಮತ್ತು ಮಹತ್ವದ ಅಪೂರ್ಣ ತಿಳಿವಳಿಕೆಯಾಗಿದೆ ಎಂಬುದು ಪ್ರಶ್ನಾತೀತ....

ಬಹುಸಂಖ್ಯೆಯ ವರ್ಗಗಳ ಕಲ್ಯಾಣದ ಸಂಬಂಧದ ವ್ಯಾಪಕ ಅಧಿಕಾರಗಳನ್ನು ತನ್ನ ಹಿತಾಸಕ್ತಿಗಳು ಮತ್ತು ಉದ್ದೇಶಗಳಲ್ಲಿ ಜನಸಂಖ್ಯೆಯ ಉಳಿದ ವರ್ಗಗಳಿಗೆ ವಿರೋಧವಾಗಿರುವ ಮತ್ತು ಅವರ ಬಯಕೆಗಳು, ನೋವು-ನಲಿವುಗಳ ಅರಿವಿಲ್ಲದೇ ಇರುವ ಹಾಗೂ ಅವರ ಆಶೋತ್ತರಗಳಿಗೆ ಮಾರಕವಾಗಿರುವಂಥಾ ಒಂದು ನಿರ್ದಿಷ್ಟ ವರ್ಗದವರ ಕೈಯಲ್ಲಿ, ಶಿಕ್ಷಣದ ಒರೆಗಲ್ಲಿನಿಂದ ಇವೆಲ್ಲವೂ ಶಿಕ್ಷಣದಿಂದ ದೊರೆಯುತ್ತವೆಂಬ ಒಂದೇ ಕಾರಣದಿಂದ, ಅಂಥಾ ನಿಯಮಗಳನ್ನು ರೂಪಿಸುವ ವ್ಯಾಪಕ ಅಧಿಕಾರಗಳನ್ನು ಕೊಡಲಾಗದೆಂಬುದು ನಿರ್ವಿವಾದವಾದ ಅಂಶ.... ಒಂದು ನಿರ್ದಿಷ್ಟ ವರ್ಗದಿಂದ ನೇಮಕಗೊಂಡ ಅಧಿಕಾರಿಗಳು ಮತ್ತು ಯಾರ ಅಂತರಾಳದಲ್ಲಿ ಸಾರ್ವಜನಿಕ ಕರ್ತವ್ಯಕ್ಕಿಂತ ಹೆಚ್ಚಾಗಿ ಜಾತಿಪ್ರಜ್ಞೆ ಬೇರೂರಿರುತ್ತದೆಯೋ ಅಂಥವರು ಸಾರ್ವಜನಿಕರ ಹಿತಾಸಕ್ತಿಗೆ ವಿರುದ್ಧವಾಗಿ ಸ್ವಜಾತಿಯ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವಲ್ಲಿ ತಮ್ಮ ಅಧಿಕಾರ ಸ್ಥಾನಗಳನ್ನು ಭ್ರಷ್ಟಗೊಳಿಸಬಹುದು.... ಒಂದು ವರ್ಗದ ಆಡಳಿತವೆಂದರೆ ಆ ವರ್ಗದ ಹಿತಾಸಕ್ತಿಗಳು ಮತ್ತು ಪೂರ್ವಾಗ್ರಹಗಳ ಆಡಳಿತವೆಂದೇ ಅರ್ಥ.... ಬ್ರಾಹ್ಮಣರು ಮತ್ತು ತತ್ಸಂಬಂಧಿ ಜಾತಿಗಳಿಗೆ ಸೇರಿದ ಅಧಿಕಾರಿಗಳ ವರ್ಗ ಪಕ್ಷಪಾತದಿಂದ ಉಂಟಾಗುವ ಅನಾನುಕೂಲತೆಗಳು ಅವರ ದಕ್ಷತೆಯಿಂದ ದೊರಕಬಹುದಾದ ಎಲ್ಲಾ ಅನುಕೂಲತೆಗಳನ್ನು ಮೀರಿಸಿವೆ ಮತ್ತು ಒಟ್ಟಾರೆಯಾಗಿ ಅವರು ಒಳ್ಳೆಯದನ್ನು ಮಾಡುವುದಕ್ಕಿಂತ ಹೆಚ್ಚಾಗಿ ಕೆಡುಕನ್ನೇ ಮಾಡಿದ್ದಾರೆಂದೇ ನನ್ನ ಅಭಿಪ್ರಾಯ. ನಾನು ಕಂಡಂತೆ ಸಾರ್ವಜನಿಕ ಸೇವೆಗಳಲ್ಲಿ ವಿವಿಧ ಜಾತಿಗಳವರನ್ನು ಬೆರಕೇ ಮಾಡುವುದೇ ಇದಕ್ಕೆ ಪರಿಹಾರವೆನಿಸುವುದು. ಇದರಿಂದ ಸ್ವಲ್ಪ ಪ್ರಮಾಣದಲ್ಲಿ ಅದಕ್ಷತೆಯನ್ನುಂಟು ಮಾಡಿದಂತಾಗಬಹುದು. ಆದರೆ ಇದು ವರ್ಗ ಪಕ್ಷಪಾತದ ಕೇಡುಗಳಿಗೆ ಅಮೂಲ್ಯವಾದ ಪರಿಹಾರವನ್ನೊದಗಿಸುತ್ತದೆ. ಈಗ ದೇಶದಲ್ಲಿ ನಡೆದಿರುವ ಸಾಮಾಜಿಕ ಸಂಘರ್ಷಗಳ ಕಾರಣದಿಂದ ಇದು ಅತ್ಯಂತ ಆವಶ್ಯವಾಗಿದೆ.... ಮುಂದುವರಿದ ಜಾತಿಗಳವರನ್ನು ದೇಶದ ಸಾರ್ವಜನಿಕ ಸೇವೆಗಳಿಂದ ಹೊರಗಿಡುವುದು ನೈತಿಕ ಅನ್ಯಾಯವಾಗಿದ್ದರೆ, ಹಿಂದುಳಿದ ಜಾತಿಗಳವರನ್ನು ಅದೇ ಕ್ಷೇತ್ರದಿಂದ ಹೊರಗಿಡುವುದೂ ಸಹ ನೈತಿಕ ಅನ್ಯಾಯವಾಗಿರಬೇಕು, ಮತ್ತು ಅದು ಹಾಗಿದ್ದ ಪಕ್ಷದಲ್ಲಿ ಅದನ್ನು ನಾಶಪಡಿಸ ಲೇಬೇಕು... ಭಾರತೀಕರಣದ ಪರವಾದವು ದಕ್ಷ ಆಡಳಿತದ ಆಧಾರವನ್ನವ ಲಂಬಿಸಿರಲಿಲ್ಲ ವೆನ್ನುವುದನ್ನು ನೆನಪಿನಲ್ಲಿಡಬೇಕು. ಅದು ಒಳ್ಳೆಯ ಆಡಳಿತ ಪರವಾದ ವಿಚಾರವನ್ನವ ಲಂಬಿಸಿದ್ದಿತು... ಆದ್ದರಿಂದ ಭಾರತೀಕರಣಕ್ಕಾಗಿ ಒತ್ತಾಯಿಸಿ ದವರೇ, ಹಿಂದುಳಿದ ವರ್ಗಗಳ ಪರವಾದ ವಾದವು ಭಾರತೀಕರಣದ ಅಂಗವಾಗಿದೆಯೆಂಬ ಅಂಶವನ್ನು ಅವರು ಮರೆತಿದ್ದಾರೆ. ಅದೇನೆ ಇರಲಿ, ಇಷ್ಟು ವ್ಯಾಪಕ ಅಧಿಕಾರಗಳು ಇತರ ವರ್ಗಗಳನ್ನುಳಿದು ಒಂದು ವಿಶಿಷ್ಟ ವರ್ಗಕ್ಕೆ ಹಸ್ತಾಂತರಗೊಳ್ಳುವುದೆಂದು ನನಗನಿಸಿದರೆ ನಾನು ಅದನ್ನು ಆಗಗೊಡಲಾರೆ.... ನೇಮಕಗಳು ನಿಮ್ನವರ್ಗಗಳು, ಮಹಮದೀಯರು ಮತ್ತು ಬ್ರಾಹ್ಮಣೇತರರಿಗೆ ಅನುಕ್ರಮವಾಗಿ ಈ ಆದ್ಯತೆಯ ಪ್ರಕಾರ ಸೇವೆಗಳಲ್ಲಿ ಇವರ ಸಂಖ್ಯೆ ಒಂದು ಪ್ರಮಾಣ ತಲುಪುವವರೆಗೆ ಮೀಸಲಾಗಿರಿಸಬೇಕು (ಅಂಬೇಡ್ಕರ್-೨, ೧ : ೧೯೯೩ : ೭೦೦-೭೦೭). ಅಂಬೇಡ್ಕರ್‌ರ ಈ ನುಡಿಗಳು ಹಿಂದುಳಿದ, ದಲಿತ ಮತ್ತು ಅಲ್ಪಸಂಖ್ಯಾತರ ಆಶೋತ್ತರಗಳನ್ನು ಸ್ಪಷ್ಟವಾಗಿಯೇ ಬಿಂಬಿಸುತ್ತವೆ. ಸಾಮಾಜಿಕವಾಗಿ ಮಾತ್ರವಲ್ಲದೆ, ಶೈಕ್ಷಣಿಕ, ಆರ್ಥಿಕ ಮತ್ತು ರಾಜಕೀಯ

ಕ್ಷೇತ್ರಗಳಲ್ಲಿ ಇಂದಿಗೂ ಈ ವರ್ಗಗಳು ತಮ್ಮ ಬೇಡಿಕೆಗಳನ್ನು ಸಂಪೂರ್ಣ ಈಡೇರಿಸಿಕೊಳ್ಳಲು ಹೋರಾಟ ನಡೆಸುವಂತಾಗಿರುವುದು ವಿಪರ್ಯಾಸವೇ ಸರಿ.

ಮಹಾರಾಷ್ಟ್ರದಲ್ಲಿ ಬ್ರಾಹ್ಮಣೇತರ ಚಳವಳಿಯನ್ನು ಹುಟ್ಟು ಹಾಕಿದವರು ಸತ್ಯಶೋಧಕ ಸಮಾಜದ (೧೮೭೩) ಸ್ಥಾಪಕ ಮಹಾತ್ಮಾ ಜ್ಯೋತಿ ಬಾ ಫೂಲೆ. ಆ ನಂತರ ಈ ಚಳವಳಿ ದಕ್ಷಿಣ ಭಾರತದ ಇತರ ರಾಜ್ಯಗಳಲ್ಲಿ ಆರಂಭಗೊಂಡುದನ್ನು ನೋಡಬಹುದು. ಸಾಮಾಜಿಕ ಪಿಡುಗಿನ ವಿರುದ್ಧ ಹಿಂದುಳಿದವರು ಹಾಗೂ ದಲಿತರು ಕೈಗೊಳ್ಳಬೇಕಿದ್ದ ಅತಿ ಜರೂರಾದ ನಿರ್ಧಾರವೆಂಬುದನ್ನು ಮನದಟ್ಟು ಮಾಡಿಸಿಕೊಟ್ಟಿತು ಈ ಚಳವಳಿ. ವಸಾಹತುಶಾಹಿ ವ್ಯವಸ್ಥೆ ಇಂಗ್ಲಿಷ್ ಶಿಕ್ಷಣ ಮತ್ತು ಭಾಷೆಗಳಿಗೆ ಆಡಳಿತದಲ್ಲಿ ನೀಡಿದ ಆದ್ಯತೆ, ಅದರ ಪೂರ್ಣ ಪ್ರಯೋಜನವನ್ನು 'ಶಿಕ್ಷಿತ ವರ್ಗ' ಪಡೆದುಕೊಂಡುದು, ಸಾಮಾಜಿಕ ಮತ್ತು ಆಡಳಿತಾತ್ಮಕ ಕ್ಷೇತ್ರಗಳಲ್ಲಿ ಪ್ರಾಬಲ್ಯ ಹೊಂದಿದುದು ದಲಿತ ಮತ್ತು ಹಿಂದುಳಿದ ಸಮುದಾಯಗಳಿಗೆ ಭಾರಿ ಹಿನ್ನಡೆಯನ್ನುಂಟು ಮಾಡುವ ಅಂಶಗಳಾಗಿದ್ದವು. ಭಾರತೀಯ ಸಮಾಜದಲ್ಲಿ ಹಣ, ಇಂಗ್ಲಿಷ್ ಭಾಷೆ ಹಾಗೂ ಮೇಲುಜಾತಿ - ಈ ಮೂರೂ ಒಂದೆಡೆ ಸೇರಿದರೆ ಸೃಷ್ಟಿಯಾಗುವ ಸ್ಥಿತಿ ಭಯಾನಕವಾಗಿರುತ್ತದೆಂಬ ರಾಮ ಮನೋಹರ ಲೋಹಿಯಾ ಅವರ ಹೇಳಿಕೆಯನ್ನು ಈ ಹಿನ್ನೆಲೆಯಲ್ಲಿ ಪರಿಭಾವಿಸಬೇಕು. ಇದನ್ನು ವಿರೋಧಿಸಿ ಸಮಾನತೆ ಮತ್ತು ನ್ಯಾಯದ ಮೇಲಿನ ತಮ್ಮ ಹಕ್ಕೊತ್ತಾಯಗಳನ್ನು ಸಾಧಿಸಲು ಮಹಾರಾಷ್ಟ್ರದಲ್ಲಿ ನಡೆದಂತೆ ಉತ್ತರಪ್ರದೇಶ, ಬಿಹಾರ್, ತಮಿಳುನಾಡು, ತಿರುವಾಂಕೂರು ಮತ್ತು ಆಂಧ್ರಪ್ರದೇಶಗಳಲ್ಲೂ ಅಬ್ರಾಹ್ಮಣ ಅಥವಾ ಬ್ರಾಹ್ಮಣೇತರ ಚಳವಳಿಗಳು ಆರಂಭಗೊಂಡವು. ಇವು ಭಾರತಾದ್ಯಂತ ದೀರ್ಘಕಾಲದಿಂದಲೂ ಬೇರುಬಿಟ್ಟಿದ್ದ ಐತಿಹಾಸಿಕ ಅಸಮತೋಲನವನ್ನು ಸರಿದೂಗಿಸುವ ನಿಟ್ಟಿನಲ್ಲಿ ಪ್ರಬಲ ಸಂಘರ್ಷದ ಪ್ರಯತ್ನಗಳೆನಿಸಿದವು. ಸಾಮಾಜಿಕವಾಗಿ ಹಿಂದುಳಿದ, ಆರ್ಥಿಕವಾಗಿ ಬಡವಾದ, ಶೈಕ್ಷಣಿಕವಾಗಿ ಅಂಧರಾದ, ರಾಜಕೀಯವಾಗಿ ದುರ್ಬಲರಾದ ಹಾಗೂ ಮಾನವೀಯತೆಯ ನೆಲೆಯಲ್ಲಿ ಭಾರೀ ಶೋಷಣೆಗೆ ಒಳಗಾದ ಸಮುದಾಯಗಳು ಮೈಕೊಡವಿಕೊಂಡು ಎದ್ದುನಿಂತುದು ದೇಶದ ಬದಲಾದ ಪರಿಸರದ ಶುಭ ಸೂಚನೆಯೆನಿಸಿತು.

### ೨.೨. ಉತ್ತರಪ್ರದೇಶ, ಬಿಹಾರ್, ತಮಿಳುನಾಡು ಮತ್ತು ಆಂಧ್ರಪ್ರದೇಶಗಳಲ್ಲಿಯ ಪರಿಸ್ಥಿತಿ

ಭಾರತಾದ್ಯಂತ ಕಂಡುಬರುವ ಒಂದು ಸಾಮಾನ್ಯ ಲಕ್ಷಣವೆಂದರೆ, ವರ್ಣಾಶ್ರಮ ಪದ್ಧತಿ ಆಧಾರದ ಮೇಲೆ ಆದ ಸಾಮಾಜಿಕ ವಿಭಜನೆ. ಉತ್ತರಪ್ರದೇಶದಲ್ಲಿಯೂ ಈ ವ್ಯವಸ್ಥೆ ಆಳವಾಗಿ ಬೇರುಬಿಟ್ಟಿದ್ದು, ಶೈಕ್ಷಣಿಕವಾಗಿ ಬ್ರಾಹ್ಮಣರು, ಕಾಯಸ್ಥರು ಹಾಗೂ ಬನಿಯಾಗಳು ಉಚ್ಚಸ್ಥಾನ ಪಡೆದಿದ್ದರು. ಭೂಮಾಲೀಕರ ಪೈಕಿ ಮೊದಲಸ್ಥಾನದಲ್ಲಿರುವ ರಜಪೂತರಾಗಲಿ, ರೈತಾಪಿಗಳಾದ ಯಾದವರು, ಕುರ್ಮಿಗಳು, ಜಾಟರು, ಲೋದರು, ಕೋಯಿರಿಗಳು ಮೊದಲಾದವರಾಗಲಿ ಶಿಕ್ಷಣಕ್ಷೇತ್ರ ಹಾಗೂ ಸಾರ್ವಜನಿಕ ಸೇವಾಸಂಸ್ಥೆಗಳಲ್ಲಿ ತೀರಾ ಕಡಿಮೆ ಪ್ರಾತಿನಿಧ್ಯ ಹೊಂದಿದ್ದುದು ವ್ಯಕ್ತಪಡುತ್ತದೆ. ನಿಮ್ನವರ್ಗದಲ್ಲಿರುವ ರಾಜಕೀಯ ಒಗ್ಗಟ್ಟು ಇತರ ಹಿಂದುಳಿದ ಕೃಷಿಕವರ್ಗಗಳಲ್ಲಿ ಕಂಡುಬರುತ್ತಿಲ್ಲವೆನ್ನುವುದು ವಾಸ್ತವಾಂಶ ವಾದರೂ, ಅಲ್ಪಸಂಖ್ಯಾತರ ವಿರುದ್ಧ ಒಂದುಗೂಡುವ ಪರಿಪಾಠ ಬೆಳೆದುಬಂದಿರುವ

ಕಾರಣದಿಂದಲೋ ಏನೋ ಮೇಲ್ವರ್ಗದವರ ಪ್ರತಿರೋಧವಾಗಲಿ, ಸಾಮರಸ್ಯವಾಗಲಿ ಕಂಡುಬರುವುದಿಲ್ಲ. ಅಲ್ಪ ಪ್ರಮಾಣದಲ್ಲಿ ಭೂಮಾಲೀಕರನ್ನು ಒಳಗೊಂಡಿರುವ ಹಿಂದುಳಿದ ವರ್ಗಗಳು ರಾಜಕೀಯವಾಗಿ ಎಷ್ಟು ದುರ್ಬಲವಾಗಿದ್ದುವೆನ್ನಲು, ೧೯೩೭ರ ವರೆಗೆ ಮಂತ್ರಿಮಂಡಲಗಳಲ್ಲಿ ಹಿಂದುಳಿದ ವರ್ಗದ ಒಬ್ಬ ಪ್ರತಿನಿಧಿಯೂ ಇರಲಿಲ್ಲವೆನ್ನುವ ಉದಾಹರಣೆಯೊಂದೇ ಸಾಕು. ೧೯೫೨ ರಲ್ಲಿ ಜಾಟ್ ವರ್ಗದ ನಾಯಕರೊಬ್ಬರನ್ನು ಕ್ಯಾಬಿನೆಟ್‌ಗೆ ಸೇರಿಸಿಕೊಳ್ಳುವವರೆಗೆ ಆರು ಕ್ಯಾಬಿನೆಟ್ ದರ್ಜೆಗಳಲ್ಲಿ ಮೂರು ಸ್ಥಾನಗಳನ್ನು ಬ್ರಾಹ್ಮಣರೇ ಆಕ್ರಮಿಸಿಕೊಂಡಿದ್ದರು. ೧೯೬೭ರ ಮಂತ್ರಿಮಂಡಲದಲ್ಲಿ ಯಾದವರು, ಕುರ್ಮಿಗಳು ಮೊದಲಾದವರು ಸೇರಿದ್ದರೆ, ೧೯೭೦-೭೧ ರಲ್ಲಿ ಮೇಲ್ವರ್ಗದ ರೈತಾಪಿ ಜನಗಳೊಂದಿಗೆ ಕುಶಲಕರ್ಮಿ ಜಾತಿಯವರೂ ಪ್ರಾತಿನಿಧ್ಯ ಪಡೆದುಕೊಂಡರು. ಹಿಂದುಳಿದವರ ಸಂಖ್ಯೆ ರಾಜಕೀಯದಲ್ಲಿ ಗಣನೀಯವಾಗಿ ಏರಿದುದು ೧೯೭೭ರಲ್ಲಿ. ಅದೇ ವರ್ಷ ಮೀಸಲಾತಿ ಕುರಿತ ಆಜ್ಞೆಯನ್ನು ಸರ್ಕಾರ ಜಾರಿಗೆ ತಂದ ಪ್ರಯುಕ್ತ ೧೯೭೮ರಲ್ಲಿ ಈ ಮೂಲಭೂತ ಬದಲಾವಣೆಯ ವಿರುದ್ಧ ಮತ ಚಲಾಯಿಸಿದುದು ಗಮನಾರ್ಹ.

ವಾಸ್ತವದಲ್ಲಿ, ಸರ್ಕಾರ ಈ ಮೀಸಲಾತಿ ಕುರಿತ ಆಜ್ಞೆ ಜಾರಿಗೊಳಿಸಿದುದು ಅತಿ ಹಿಂದುಳಿದ ವರ್ಗಗಳ ಆಯೋಗದ ವರದಿಯನ್ನಾಧರಿಸಿ. ಈ ಮೀಸಲಾತಿಯ ಪ್ರಮಾಣ ಪ್ರತಿಶತ ೧೫ ಆಗಿದ್ದಿತು. ಈ ಮೀಸಲಾತಿ ಆಜ್ಞೆಗೆ ವಿರುದ್ಧವಾಗಿ ಪ್ರಬಲ ಪ್ರತಿಭಟನೆ ವ್ಯಕ್ತಗೊಂಡುದು ಮುಂದುವರೆದ ವರ್ಗಗಳಿಂದ ಮಾತ್ರ. ಸರ್ಕಾರಿ ನೌಕರರನ್ನೊಳಗೊಂಡ ಈ ಮೀಸಲಾತಿ ವಿರೋಧಿ ಚಳವಳಿಗಾರರು ಮಂಡಿಸಿದ ಬೇಡಿಕೆಯೆಂದರೆ, ಸಾಮಾಜಿಕ ಹಾಗೂ ಆರ್ಥಿಕ ಹಿಂದುಳಿದಿರುವಿಕೆಗೆ ಆಧಾರವಾಗಿರಬೇಕಾದ್ದು ಜಾತಿಯಲ್ಲ ವರ್ಗ ಎಂಬುದಾಗಿದ್ದಿತು. ಈ ಸರ್ಕಾರಿ ಆಜ್ಞೆ ಆ ನಂತರ ಅಲಹಾಬಾದ್ ಉಚ್ಚ ನ್ಯಾಯಾಲಯ ದಿಂದ ತಳ್ಳಿಹಾಕಲ್ಪಟ್ಟಿತು; ಪರಿಶಿಷ್ಟ ಜಾತಿ-ಜನಾಂಗಗಳು ರಾಜಕೀಯ ಅನೈಕ್ಯತೆಯನ್ನು ರಾಷ್ಟ್ರಮಟ್ಟದಲ್ಲಿ ಸಾರಿತು. ವಿಭಜನೆಗೊಳಗಾದ ಮುಂದುವರೆದ ಜಾತಿಗಳವರು ಸಂಘಟಿತರಾಗಿ ಹೋರಾಟ ನಡೆಸಿದುದು ಸಹಜವೇ ಆಗಿದ್ದಿತೆನ್ನಬೇಕು. ಭೂ ಸುಧಾರಣೆಯಿಂದಾಗಿ ಯಾದವ, ಕುರ್ಮಿ, ಲೋಧಿ, ಗುಜ್ಜರು, ಕೋಯಿರಿಯಂಥಾ ಉಳುಮೆದಾರ ವರ್ಗಗಳು ಭೂಮಾಲೀಕರಾಗುವಂತಾಯಿತು.

ಉತ್ತರಪ್ರದೇಶದಲ್ಲಿದ್ದಂತೆಯೇ ಬಿಹಾರದಲ್ಲಿಯೂ ನಿಮ್ನವರ್ಗದವರು ಮತ್ತು ಹಿಂದುಳಿದವರು ಬ್ರಾಹ್ಮಣರ ತಿರಸ್ಕಾರಕ್ಕೆ ಗುರಿಯಾಗಿದ್ದುದನ್ನು ಚರಿತ್ರೆ ಹೇಳುತ್ತದೆ. ಈ ರಾಜ್ಯದಲ್ಲಿ ಬ್ರಾಹ್ಮಣರು, ಭೂಮಿಹಾರರು ಮತ್ತು ರಜಪೂತರು ಈ ಮೂರು ಜಾತಿಗಳನ್ನು ದ್ವಿಜಜಾತಿಗಳೆಂದೇ ಸಂಬೋಧಿಸಿದೆ. ಬ್ರಾಹ್ಮಣರು ಮತ್ತು ರಜಪೂತರರಿಗಿಂತಲೂ ಕಾಯಸ್ಥರೇ ಹೆಚ್ಚು ಸಂಖ್ಯೆಯಲ್ಲಿ ಸುಶಿಕ್ಷಿತರೆನಿಸಿರುವ ಬಿಹಾರದಲ್ಲಿ, ಸಾಮಾಜಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಪರಿಶಿಷ್ಟರನ್ನು, ಹಿಂದುಳಿದವರನ್ನು ಅವ್ಯಾಹತವಾಗಿ ವಂಚಿಸುತ್ತಾ ಬಂದರೆನ್ನಲು ಸಾಕಷ್ಟು ಉದಾಹರಣೆಗಳಿವೆ. ೧೯೬೦ರಲ್ಲಿ ಬಿಹಾರದ ರಾಜಕೀಯ ರಣರಂಗ ಬ್ರಾಹ್ಮಣರ ಅಂತರ್ಯುದ್ಧದಿಂದ ರಂಜನೀಯವಾಗಿದ್ದಿತೆಂಬ ಹೇಳಿಕೆಯನ್ನು ಗಮನಿಸಿದರೆ, ರಾಜಕೀಯ ವಾಗಿ ಬ್ರಾಹ್ಮಣೇತರರು ಎಷ್ಟು ದೂರದಲ್ಲಿ ನಿಂತಿದ್ದರೆಂಬುದು ಸ್ಪಷ್ಟಪಡುತ್ತದೆ. ಆದರೂ ಹಿಂದುಳಿದ ವರ್ಗಗಳಲ್ಲಿ ಯಾದವರು, ಕುರುಬಿಗಳು, ಕೋಯಿರಿರು ಮುಂತಾದವರು

ಸಂಘಟಿತರಾಗಿ ರಾಜಕೀಯ ಕ್ಷೇತ್ರದಲ್ಲಿ ಪ್ರವೇಶಿಸಲು ಸಾಧ್ಯವಾದುದು ೧೯೫೦ರ ದಶಕದಲ್ಲಿ ಮಾತ್ರ. ಪಾಟ್ನಾದಲ್ಲಿ ಸ್ಥಾಪನೆಗೊಂಡ 'ಅಖಿಲ ಭಾರತ ಯಾದವ ಮಹಾಸಭಾ' ದ ಮೂಲಕ ಉತ್ತರಪ್ರದೇಶ, ಪಂಜಾಬ್ ಮೊದಲಾದ ರಾಜ್ಯಗಳಲ್ಲಿಯ ಯಾದವರನ್ನು ಸಂಘಟಿಸುವ ಪ್ರಯತ್ನ ನಡೆಯಿತು. ಹಿಂದುಳಿದ ರೈತಜಾತಿಗಳು ಸಂಘಟನೆಗೊಳ್ಳಲು ಇದರಿಂದ ಸಾಧ್ಯವಾಯಿತು. ರಾಜಕೀಯ ಶಕ್ತಿಯನ್ನು ವಶಮಾಡಿಕೊಳ್ಳುವ ನಿಟ್ಟಿನಲ್ಲಿ ಇವು ತಮ್ಮ ಸಾಮರ್ಥ್ಯ ತೋರಲಾರಂಭಿಸಿದವು. ಅಂಕಿ-ಅಂಶಗಳು ತೋರಿಸಿಕೊಡುವಂತೆ, ೧೯೫೭ ರಿಂದ ೧೯೬೦ರ ವರೆಗಿನ ಕಾಲಾವಧಿಯಲ್ಲಿ ಕಾಯಸ್ಥರ ಪ್ರಭಾವ ಇಳಿಯತೊಡಗಿದಂತೆ ಭೂಮಿಹಾರರ ಪ್ರಭಾವ ಏರತೊಡಗಿತು. ರಜಪೂತ ಮತ್ತು ಬ್ರಾಹ್ಮಣರ ಪ್ರಾತಿನಿಧ್ಯಕ್ಕೆ ಧಕ್ಕೆಯೊದಗಲಿಲ್ಲ. ಆದರೆ ೧೯೪೮ ರಿಂದ ೧೯೬೦ರ ವರೆಗಿನ ಕಾಲಾವಧಿಯಲ್ಲಿ ಕೆಳ ಹಾಗೂ ಮೇಲ್ವರ್ಗದ ಹಿಂದುಳಿದ ಜಾತಿಗಳವರು ಪ್ರಗತಿ ಸಾಧಿಸಿದರು. ಮುಂದುವರೆದ ಜಾತಿಗಳ ಸದಸ್ಯರ ಸಂಖ್ಯೆ ಕಡಿಮೆಯಾಗುತ್ತಾ, ಹಿಂದುಳಿದ ವರ್ಗಗಳ ಶಾಸಕರ ಸಂಖ್ಯೆ ನಿಧಾನವಾಗಿ ಏರುತ್ತಾ ಹೋದುದು ೧೯೬೨ರ ನಂತರ ಎಂಬುದು ಗಮನಾರ್ಹ.

೧೯೫೫ರಲ್ಲಿ ಸ್ಥಾಪನೆಗೊಂಡ ಸಂಯುಕ್ತ ಸೋಶಿಯಾಲಿಸ್ಟ್ ಪಾರ್ಟಿಯ ಡಾ. ರಾಮಮನೋಹರ ಲೋಹಿಯಾ ಅವರು ಬಿಹಾರ ರಾಜಕೀಯದಲ್ಲಿ ಹಿಂದುಳಿದ ವರ್ಗಗಳವರು ಪ್ರಾಬಲ್ಯ ಹೊಂದಲು ಕಾರಣರಾದುದನ್ನು ಇಲ್ಲಿ ಪ್ರಸ್ತಾಪಿಸಬೇಕು. ಅವರ ದೃಷ್ಟಿಯಲ್ಲಿ, ಜಾತಿ ಮತ್ತು ಹೆಣ್ಣು-ಇವೆರಡರ ಸಂದರ್ಭದಲ್ಲೂ ಪ್ರಧಾನವಾಗಿ ಕಾಣುವ ಪ್ರತ್ಯೇಕವಾದಿ ಮನಸ್ಥಿತಿಯೇ ಭಾರತೀಯ ಚೇತನದ ಅಧೋಗತಿಗೆ ಮೂಲಕಾರಣವಾಗಿದೆ. ಸಾಹಸಕ್ಕಿಳಿಯಬಲ್ಲ ಮನಸ್ಸು ಹಾಗೂ ಸಂತಸ ಚಿಮ್ಮಿಸಬಲ್ಲ ಶಕ್ತಿಗಳೆರಡನ್ನೂ ಕೊಂದು ಹಾಕುವ ಭಯಂಕರ ಶಕ್ತಿ ಈ ಪ್ರತ್ಯೇಕವಾದಿ ಮನೋಭಾವಕ್ಕಿದೆ (ನಾಗವಾರ, ಹುಳಿಯಾರ್: ೧೯೯೬ : ೨೮೭). ಸಮಾಜಕ್ಕೆ ಶಾಪವೆನಿಸಿದ ಜಾತಿವ್ಯವಸ್ಥೆ ಮತ್ತು ಸ್ತ್ರೀ ಶೋಷಣೆಗಳನ್ನು ಧಿಕ್ಕರಿಸಿದವರು ಲೋಹಿಯಾ. ಸಾಮಾಜಿಕವಾಗಿ ನಿರ್ಲಕ್ಷ್ಯಕ್ಕೊಳಗಾದ ಸಮುದಾಯಗಳಿಗೆ ವಿಶೇಷ ಅವಕಾಶಗಳನ್ನು ಹಾಗೂ ಅಗ್ರಪಂಕ್ತಿಯ ಮನ್ನಣೆಯನ್ನು ನೀಡಬೇಕಾದ ಅಗತ್ಯ ಕುರಿತು ಸಿದ್ಧಾಂತ ರೂಪಿಸಲು ಲೋಹಿಯಾರಿಗೆ ಆಗಿನ ಭಾರತೀಯ ಸಾಮಾಜಿಕ ಸಂದರ್ಭ ಪ್ರೇರಣೆ ನೀಡಿದುದು ಸ್ಪಷ್ಟ. ಅವರು ಸ್ಥಾಪಿಸಿದ ಸಮಾಜವಾದಿ ಪಕ್ಷದಲ್ಲಿ ಶೇ. ೬೦ ರಷ್ಟು ಪದಾಧಿಕಾರಿಗಳು ಪರಿಶಿಷ್ಟ ಜಾತಿ-ಪಂಗಡ ಹಾಗೂ ಹಿಂದುಳಿದ ಜಾತಿಗಳಿಗೆ ಸೇರಿದವರಾಗಿದ್ದರಲ್ಲದೆ, ಅಲ್ಪಸಂಖ್ಯಾತರು ಹಾಗೂ ಮಹಿಳೆಯರನ್ನು ಆರಿಸುವಾಗ ಅವರಲ್ಲಿಯೂ ಹಿಂದುಳಿದ ಜಾತಿಗಳ ಪ್ರತಿನಿಧಿಗಳನ್ನೇ ಆರಿಸಲಾಗುತ್ತಿತ್ತು. ಪಾರ್ಲಿಮೆಂಟಿನಿಂದ ಹಿಡಿದು ಸ್ಥಳೀಯ ಸಭೆಗಳ ಚುನಾಯಿತ ಸ್ಥಾನಗಳವರೆಗೂ ಸಮಾಜವಾದಿ ಪಕ್ಷ ಇದೇ ನಿಯಮವನ್ನು ಅನುಸರಿಸುತ್ತಿತ್ತು. ಮುಖ್ಯವಾಗಿ, ದುರ್ಬಲ ಜಾತಿಗಳಿಗೆ ವಿಶೇಷ ಅವಕಾಶಗಳನ್ನು ಒದಗಿಸಬೇಕೆಂಬುದು ಅವರ ನಿಲುವಾಗಿದ್ದಿತು. 'ಐದು ಸಾವಿರ ವರ್ಷಗಳಿಂದ ಶೇ. ೮೦ರಷ್ಟು ಜನರಿಗೆ ಎರಡನೇ ದರ್ಜೆಯ ಬದುಕು ಹಾಗೂ ಅದೇ ಬಗೆಯ ಸ್ಥಾನಮಾನಗಳನ್ನು ನೀಡಿರುವ ಭಾರತೀಯ ಸಂದರ್ಭದಲ್ಲಿ ಸಮಾನತೆಯ ಅಮೂರ್ತ ಪರಿಕಲ್ಪನೆಗೆ ನಿಜವಾದ ಅರ್ಥ ತರಬೇಕೆಂಬ' ಉದ್ದೇಶ

ಅವರದಾಗಿದ್ದಿತು. ಬಿಹಾರ ರಾಜಕಾರಣದಲ್ಲಿ ದಲಿತ ಮತ್ತು ಹಿಂದುಳಿದ ವರ್ಗಗಳವರು ಅವಕಾಶ ಪಡೆಯಲು ಇಂಥಾ ಪ್ರಯತ್ನವೂ ಫಲಕಾರಿಯಾಯಿತು; ತಾತ್ವಿಕ ಹೋರಾಟದ ಸಂಕಲ್ಪವನ್ನು ಹಿಂದುಳಿದ ಸಮುದಾಯಗಳಲ್ಲಿ ಮೂಡಿಸಿತು.

ಸಾಮಾಜಿಕವಾಗಿ ಹಿಂದುಳಿಯುವಿಕೆಗೂ ಸಾಕ್ಷರತಾ ಪ್ರಮಾಣಕ್ಕೂ ಇರುವ ಅಂತರ್ ಸಂಬಂಧ ಗಂಭೀರವಾದುದು. ಸಾಕ್ಷರತಾ ಪ್ರಮಾಣದ ದೃಷ್ಟಿಯಿಂದ ಇಡೀ ದೇಶದಲ್ಲಿ ಬಿಹಾರ ಕೊನೆಯ ಸ್ಥಾನದಲ್ಲಿರುವುದು ಆತಂಕ ಹುಟ್ಟಿಸುವ ಸಂಗತಿಗಳಲ್ಲೊಂದು. ೧೯೭೧ ರ ವೇಳೆಗೆ ಸಾಕ್ಷರತಾ ಪ್ರಮಾಣ ಶೇ. ೧೮ ರಿಂದ ೨೦ಕ್ಕೆ ಏರಿದುದು ಸಾಧನೆ ಗಳಲ್ಲೊಂದೆಂದು ತಿಳಿಯಲಾಗುತ್ತದೆ (ಕುಪ್ಪುಸ್ವಾಮಿ : ೧೯೭೮ : ೨೫-೨೬).

ಬಿಹಾರದ ದಲಿತರ ಪಾಲಿಗೆ ಇನ್ನೊಂದು ಆತಂಕಕಾರಿಯಾದ ಸಂಗತಿಯೆಂದರೆ, ಜಾತಿಯಿಂದಲಷ್ಟೆ ಅಲ್ಲದೆ, ಅದೇ ಹಿನ್ನೆಲೆಯಲ್ಲಿ ಆರ್ಥಿಕ ಸಂಕಷ್ಟಗಳಿಗೂ ತುತ್ತಾಗುವುದು. ಸರ್ಕಾರ ಜಾರಿಗೆ ತರುವ ಭೂಸುಧಾರಣಾ ಕಾನೂನುಗಳು ಹಿಂದುಳಿದ ವರ್ಗಗಳ ಸಣ್ಣ ಹಿಡುವಳಿದಾರರಿಗೆ, ಭೂಮಾಲೀಕರಿಗೆ ಅನುಕೂಲವಾಗಬಹುದಾದರೂ ದಲಿತರ ಪಾಲಿಗೆ ಅವು ಗಂಡಾಂತರಕಾರಿಯಾದುವು ಎನ್ನಬಹುದು. ಏಕೆಂದರೆ ಹೆಚ್ಚು ದುಡಿಮೆಗಾಗಿ ಭೂಮಾಲೀಕರಿಂದ ಒತ್ತಡಕ್ಕೆ ಒಳಗಾಗುವುದು ಒಂದೆಡೆಯಾದರೆ, ಅದನ್ನು ನಿರಾಕರಿಸು ವುದಾದರೆ, ಪ್ರತಿಭಟಿಸುವುದಾದರೆ ಭೂಮಾಲೀಕ ವರ್ಗದವರು ಎಸಗುವ ಅತ್ಯಾಚಾರಗಳನ್ನು ಅನ್ಯಾಯವಾಗಿ ಸಹಿಸಿಕೊಳ್ಳಬೇಕಾದುದು ಇನ್ನೊಂದೆಡೆ. ಕೃಷಿ ಕಾರ್ಮಿಕರಾಗಿರುವವರಲ್ಲಿ ದಲಿತರೇ ಹೆಚ್ಚಾಗಿರುವುದರಿಂದ, ಅತ್ಯಾಚಾರ - ದೌರ್ಜನ್ಯಗಳಿಗೆ ಮೇಲಿಂದ ಮೇಲೆ ತುತ್ತಾಗುವವರೂ ಅವರೇ. ಭೂಮಾಲೀಕರ ಹಿತಾಸಕ್ತಿ ಕಾಪಾಡುವಂಥಾ ರಣಬೀರಸೇನೆಯೆಂಬ ಖಾಸಗಿ ಸಂಘಟನೆ ದಲಿತರ ಮೇಲೆ ನಿರಂತರವಾಗಿ ಎಸಗುತ್ತಿರುವ ದೌರ್ಜನ್ಯಗಳೇ ಇದಕ್ಕೆ ಸಾಕ್ಷಿ. ಬೆಲ್ಚಿ, ಪಿಪ್ರಾ ಮೊದಲಾದೆಡೆಗಳಲ್ಲಿ ದಲಿತರ ಮೇಲೆ ಆಗಿರುವ ಕ್ರೂರ ರೀತಿಯ ದೌರ್ಜನ್ಯ - ಅತ್ಯಾಚಾರಗಳನ್ನು ಉದಾಹರಿಸಬಹುದು. ಜೆಹಾನಾಬಾದ್ ಜಿಲ್ಲೆಯ ರುಕ್ಷಾಗರ್ ಗ್ರಾಮದಲ್ಲಿ ರಣಬೀರಸೇನೆಯಿಂದಾದ ದಲಿತರ ಕೊಲೆಗಳು ಇತ್ತೀಚಿನ ಉದಾಹರಣೆಗಳಾಗಿವೆ.

ಲೋಹಿಯಾ ಸಿದ್ಧಾಂತವನ್ನು ಆಧರಿಸಿ ಬಿಹಾರ ಸರ್ಕಾರ ಹಿಂದುಳಿದವರನ್ನು ಸಂಘಟಿಸುವ ಪ್ರಯತ್ನ ನಡೆಸಿತು. ೧೯೭೮ರಲ್ಲಿ ಹಿಂದುಳಿದವರಿಗಾಗಿ ೨೦ ಪ್ರತಿಶತ ಮೀಸಲಾತಿ ತರುವುದರೊಡನೆ ಆಗಿನ ಸರ್ಕಾರ ಸಮಗ್ರ ಪರಿವರ್ತನೆಯ ಕನಸನ್ನು ಕಾಣತೊಡಗಿತು. ಆದರೆ ಇದಕ್ಕೆ ದೊರೆತ ಪ್ರತಿಕ್ರಿಯೆಯೆಂದರೆ ಎಂದಿನಂತೆ ಮುಂದುವರೆದ ಸಮುದಾಯಗಳಿಂದ ಪ್ರತಿಭಟನೆ; ಶಿಕ್ಷಣ ಸಂಸ್ಥೆಗಳನ್ನು ಮುಚ್ಚುವಿಕೆ; ಬಸ್ಸು-ರೈಲುಗಳ ಮೇಲೆ ದಾಳಿ; ಸಾರ್ವಜನಿಕ ಆಸ್ತಿ-ಪಾಸ್ತಿಯ ಲೂಟಿ ಮತ್ತು ನಾಶ. ಈ ಮೀಸಲಾತಿಯನ್ನು ಜಾರಿಗೆ ತರುವ ಮುನ್ನ ಹಿಂದುಳಿದವರನ್ನು ವ್ಯವಸ್ಥಿತವಾಗಿ ಸಂಘಟಿಸಿ, ಅವರಲ್ಲಿ ಸಾಮಾಜಿಕ ಮತ್ತು ರಾಜಕೀಯ ಅರಿವು ಮೂಡಿಸಿ, ಅವರಿಗೆ ನಾಯಕತ್ವ ವಹಿಸಿದಿದ್ದರೆ ಮೀಸಲು ವಿರೋಧಿ ಚಳವಳಿಯನ್ನು ಸಮರ್ಥವಾಗಿ ಎದುರಿಸಬಹುದಿತ್ತೆಂಬ ಅಭಿಪ್ರಾಯವೂ ಇದೆ. ಆದರೆ ಕಾಲಕಾಲಕ್ಕೆ ರಾಜಕೀಯ ಅಧಿಕಾರಗ್ರಹಣದ ಸ್ಪರ್ಧೆಯಲ್ಲಿ ವಿಜೇತರಾಗುತ್ತಿರುವ

ಮುಂದುವರೆದವರು ಎಂದಿನಂತೆ ಹಿಂದುಳಿದ ವರ್ಗಗಳಿಗೆ ಅನ್ಯಾಯ ಎಸಗುತ್ತಿರುವುದು ನಿಚ್ಚಳವಾಗಿದೆ.

ಮುಖ್ಯ ಸಂಗತಿಯೆಂದರೆ, ಭಾರತಾದ್ಯಂತ ಪರಿಶಿಷ್ಟ ಜಾತಿ-ಪಂಗಡಗಳವರ ಮೇಲೆ ದೌರ್ಜನ್ಯಗಳು ಹೆಚ್ಚಿದ್ದು, ಆ ಕುರಿತು ನಡೆದ ಅಧ್ಯಯನಗಳು ಅಂಕಿ-ಅಂಶಗಳೊಡನೆ ತೋರಿಸಿಕೊಡುತ್ತವೆ. ಪರಿಶಿಷ್ಟ ಜಾತಿಗಳವರ ಮೇಲಿನ ದೌರ್ಜನ್ಯಗಳು ಎಲ್ಲಾ ರಾಜ್ಯಗಳಲ್ಲೂ ಹೆಚ್ಚಿದ್ದರೆ, ಕೇರಳ, ಮಹಾರಾಷ್ಟ್ರ, ಒರಿಸ್ಸಾ, ಮಧ್ಯಪ್ರದೇಶ ಮತ್ತು ರಾಜಸ್ಥಾನಗಳಲ್ಲಿ ಪರಿಶಿಷ್ಟ ಪಂಗಡದವರ ಮೇಲೆ ಇಂಥಾ ದೌರ್ಜನ್ಯಗಳು ಹೆಚ್ಚಿರುವುದು ಗಮನಕ್ಕೆ ಬರುತ್ತದೆ. ದೌರ್ಜನ್ಯವೆಸಗಿದವರನ್ನು ಶಿಕ್ಷಿಸುವ ನಿಟ್ಟಿನಲ್ಲಿ ನ್ಯಾಯದಾನ ವಿಳಂಬಗೊಳ್ಳುತ್ತಿರುವುದು ಆತಂಕವನ್ನುಂಟು ಮಾಡುವಂಥಾದ್ದು. 'ವಿಳಂಬದ ನ್ಯಾಯವೆಂದರೆ, ನ್ಯಾಯವನ್ನೆ ನಿರಾಕರಿಸಿದಂತೆ' ಎಂಬ ಮಾತು ಇಂಥಾ ಸಂದರ್ಭದಲ್ಲೆಲ್ಲ ನಿಜವೆನಿಸುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಇಂಥಾ ದೌರ್ಜನ್ಯಗಳು ಹೆಚ್ಚಾಗಿ ನಡೆಯುವುದನ್ನು ಗುರುತಿಸಲಾಗಿದೆ (ಖಿಲ್ನಾರೆ: ೧೯೯೭ : ೧೪).

ತಮಿಳುನಾಡು ಅಪ್ಪಟ ದ್ರಾವಿಡದೇಶವಾದರೂ ತಮಿಳು ಬ್ರಾಹ್ಮಣರಿಂದಾಗಿ ಇಲ್ಲಿಯ ದಲಿತ ಮತ್ತು ಹಿಂದುಳಿದ ಸಮುದಾಯಗಳು ಹಿಂದಕ್ಕೆ ನೂಕಲ್ಪಟ್ಟುದು ವಿಚಿತ್ರವಾದರೂ ವಾಸ್ತವ. ಮುಂದುವರೆದ ವರ್ಗಗಳಿಗೆ ಇಂಗ್ಲಿಷ್ ಆಡಳಿತ ಬಳುವಳಿಯಾಗಿ ಕೊಟ್ಟಿದುದೇನೆಂದರೆ ಇಂಗ್ಲಿಷ್ ಶಿಕ್ಷಣ. ಇಂಗ್ಲಿಷ್ ಭಾಷಾಜ್ಞಾನದ ಬೆಂಬಲದಿಂದ ಇಂಗ್ಲಿಷರಿಂದ ಎಲ್ಲ ಬಗೆಯ ಲಾಭ ಪಡೆದವರು ತಮಿಳು ಬ್ರಾಹ್ಮಣರು; ಸರ್ಕಾರಿ ಸೇವೆಯ ಎಲ್ಲ ಹಂತಗಳಲ್ಲೂ ಬೇರುಬಿಟ್ಟವರು. 'ಇಂಗ್ಲಿಷ್ ಕಲಿತ ಕೆಲವೇ ಜನರ ಪುಟ್ಟ ಗುಂಪು ಭಾರತೀಯ ಭಾಷೆಗಳನ್ನು ಕಡೆಗಣಿಸುವುದರ ಮೂಲಕ ಭಾರತದ ಆತ್ಮವನ್ನೇ ನಾಶಮಾಡುವುದರ ಜೊತೆಗೇ, ಆಡಳಿತ ಹಾಗೂ ಕೈಗಾರಿಕೆಗಳನ್ನೂ ನಿಯಂತ್ರಿಸುತ್ತದೆಂಬ' ಮಾತು ಎಲ್ಲ ಸಂದರ್ಭಗಳಿಗೂ ಅನ್ವಯಿಸುವಂಥಾದ್ದು. ಈಚಿನವರೆಗೂ ಇಂಥದೇ ಪ್ರವೃತ್ತಿ ಮುಂದುವರೆದಿದ್ದರೂ ವಸಾಹತುಕಾಲೀನ ದೃಷ್ಟಿ-ಧೋರಣೆಗಳು ತಕ್ಕಮಟ್ಟಿಗಾದರೂ ಸುಧಾರಿಸಲ್ಪಟ್ಟಿವೆ. ಆದರೆ ೧೯೬೧ ರಲ್ಲಿ 'ಇಂಗ್ಲಿಷ್ ತೊಲಗಿಸಿ' ಚಳವಳಿಗೆ ಸಂಬಂಧಪಟ್ಟ ಸಭೆಯೊಂದರಲ್ಲಿ ತಮಿಳುನಾಡಿನಲ್ಲಿ ರಾಮಮನೋಹರ ಲೋಹಿಯಾ ಅವರು ಮಾತನಾಡುತ್ತಿದ್ದಾಗ ಕಲ್ಲಿನ ಏಟುಗಳು ಬಿದ್ದುದನ್ನು ಪರಿಗಣಿಸುವುದಾದರೆ, ವಸಾಹತು ಶಕ್ತಿಗಳು ರೂಪಿಸಿದ ವ್ಯವಸ್ಥೆಯ ಮುಂದುವರೆದ ಪ್ರತಿನಿಧಿಗಳಂತೆ ಅಲ್ಲಿಯವರು ವರ್ತಿಸಿದ್ದು ಗಮನ ಸೆಳೆಯುತ್ತದೆ.

೧೯೧೬ರಲ್ಲಿ ಬ್ರಾಹ್ಮಣೇತರರ ಏಳಿಗೆಗಾಗಿ ಅಸ್ತಿತ್ವಕ್ಕೆ ಬಂದುದು ಜಸ್ಟಿಸ್ ಪಾರ್ಟಿ. ಇದರ ಸ್ಥಾಪಕರು ತ್ಯಾಗರಾಜ ಚೆಟ್ಟಿ ಹಾಗೂ ರಾಮಸ್ವಾಮಿ ಮತ್ತು ಲಕ್ಷ್ಮಣಸ್ವಾಮಿ ಹೆಸರಿನ ಈರ್ವರು ಮೊದಲಿಯಾರ್ ಸಹೋದರರು. ರಾಮಸ್ವಾಮಿಯವರು ಆರ್ಕಾಟ್ ರಾಮಸ್ವಾಮಿ ಮೊದಲಿಯಾರರೆಂದೇ ಪ್ರಸಿದ್ಧರಾದವರು. ಜಸ್ಟಿಸ್ ಪಕ್ಷದ ನಾಯಕರಾಗಿ ನೇಮಕಗೊಂಡವರು ಎಂ. ಸಿ. ರಾಜ. ಈ ಪಕ್ಷ ಮದರಾಸಿನಲ್ಲಿ ಮಾತ್ರವಲ್ಲದೆ, ಬೆಂಗಳೂರು ಮತ್ತು ಮೈಸೂರುಗಳಲ್ಲೂ ತನ್ನ ಪ್ರಭಾವ ಬೀರಿತು. ೧೯೧೭ರಲ್ಲಿ ಇಂಗ್ಲಿಷ್ ಸರ್ಕಾರ ಭಾರತದಲ್ಲಿ ಜವಾಬ್ದಾರಿ ಸರ್ಕಾರವನ್ನು ಜಾರಿಗೆ ತರುವ ಘೋಷಣೆ ಮಾಡಿತು. ಈ ಜವಾಬ್ದಾರಿ

ಸರ್ಕಾರದಲ್ಲಿ ಸಂಸ್ಥಾನಗಳ ಸ್ಥಾನನಿರ್ಣಯ ಮಾಡುವ, ಅಂದರೆ ಜವಾಬ್ದಾರಿ ಸರ್ಕಾರದ ರೂಪುರೇಷೆಗಳನ್ನು ನಿರ್ಧರಿಸುವ ಬಗೆಗೆ ಇಂಗ್ಲಿಷ್ ಸರ್ಕಾರದ ಸ್ಟೇಟ್ ಕಾರ್ಯದರ್ಶಿ ಇ. ಎಸ್. ಮಾಂಟೆಗೂ ಮತ್ತು ಮದರಾಸಿನಲ್ಲಿದ್ದ ವೈಸ್‌ರಾಯ್ ಲಾರ್ಡ್ ಚೆಲ್ಮ್ಸ್‌ಫರ್ಡ್ ಇವರುಗಳಿದ್ದ ಆಯೋಗ (ಮಾಂಟೆಗೂ-ಚೆಲ್ಮ್ಸ್‌ಫರ್ಡ್ ಆಯೋಗ)ವನ್ನು ರಚಿಸಲಾಯಿತು. ಈ ಸುಧಾರಣೆಯ ಲಾಭ ಪಡೆದ ತಮಿಳುನಾಡಿನ ಬ್ರಾಹ್ಮಣೇತರರು 'ಸೌತ್ ಇಂಡಿಯನ್ ಲಿಬರಲ್ ಫೆಡರೇಶನ್' ಸಂಸ್ಥೆಯನ್ನು ಹುಟ್ಟುಹಾಕಿದರು. ೧೯೧೭ರಲ್ಲಿ ಮದರಾಸಿನಲ್ಲಿ ನಡೆದ ಜಸ್ಟಿಸ್ ಪಕ್ಷದ ಮೊದಲನೇ ಸಮ್ಮೇಳನದಲ್ಲಿ ರಾಜಾ ವೆಂಕಟಗಿರಿಯವರು ಮಾತನಾಡಿ, "ಭಾರತದಂಥಾ ದೇಶದಲ್ಲಿ ಸರ್ಕಾರಿ ನೌಕರರು ಅತ್ಯಂತ ಪ್ರಭಾವಶಾಲಿಗಳಾಗಿರುವುದರಿಂದ ಅಧಿಕಾರವರ್ಗದಲ್ಲಿ ಯಾವುದೇ ಒಂದು ವರ್ಗದ ಆಧಿಕ್ಯವಾದಾಗ ಆ ವರ್ಗಕ್ಕೆ ಅನುಚಿತ ಪ್ರಾಮುಖ್ಯ ಹಾಗೂ ಪ್ರಭಾವ ದೊರೆಯುತ್ತದೆಂಬ" ವಿಚಾರ ಮಂಡಿಸಿದರು. ಈ ವಿಚಾರಧಾರೆ ಇತರ ರಾಜ್ಯಗಳಲ್ಲಿಯ ಬ್ರಾಹ್ಮಣೇತರರಿಗೂ ಹಿಡಿಸಿತು (ಜಯಪ್ಪಗೌಡ : ೧೯೯೪ : ೨೯೪). ಪರಿಣಾಮವಾಗಿ, ಜಸ್ಟಿಸ್ ಪಕ್ಷಕ್ಕೆ ನಿರೀಕ್ಷಿಸಿದ ಸ್ಥಾನ-ಮಾನ, ಪ್ರೋತ್ಸಾಹಗಳು ದೊರೆಯುವಂತಾಯಿತು.

ಮೊದಲಿಗೆ ಬ್ರಾಹ್ಮಣರಿಂದ ತುಂಬಿಹೋಗಿದ್ದ ಕಾಂಗ್ರೆಸ್ ಪಕ್ಷದಲ್ಲಿದ್ದ ಇ. ವಿ. ರಾಮಸ್ವಾಮಿ ನಾಯ್ಕರ್ ಅವರು ಆ ನಂತರ ಸ್ವತಂತ್ರವಾಗಿ ಆತ್ಮಗೌರವ ಚಳವಳಿ ಆರಂಭಿಸುವುದರೊಡನೆ ಬ್ರಾಹ್ಮಣ್ಯವನ್ನು ಪ್ರಶ್ನಿಸಿ ಅಂಧಶ್ರದ್ಧೆಯ ವಿರುದ್ಧ ಸಮರ ಸಾರಿದರು. ಇವರು ಮಂಡಿಸಿದ ಪ್ರಮುಖ ಬೇಡಿಕೆಗಳಲ್ಲಿ ಪ್ರತ್ಯೇಕ ದ್ರಾವಿಡಸ್ಥಾನವೂ ಒಂದು. ಇದರಿಂದಾದ ಪರಿಣಾಮವೆಂದರೆ ಜಸ್ಟಿಸ್ ಪಕ್ಷವು ದ್ರಾವಿಡ ಕಳಗಂ ಪಕ್ಷವಾಗಿ ಪರಿವರ್ತಿತವಾಯಿತು (೧೯೪೪). ಅದೇ ವರ್ಷದಲ್ಲಿ ಮದರಾಸ್ ಪ್ರೆಸಿಡೆನ್ಸಿಯಲ್ಲಿ ತ್ಯಾಗರಾಜ ಚೆಟ್ಟಿಯಾರ್ ನೇತೃತ್ವದಲ್ಲಿ ಹಿಂದುಳಿದವರ ಬೃಹತ್ ಸಮ್ಮೇಳನ ಏರ್ಪಾಟಾದುದು ವಿಶೇಷ.

೧೯೨೦ರಲ್ಲಿ ಜಸ್ಟಿಸ್ ಪಕ್ಷ ಅಧಿಕಾರಕ್ಕೆ ಬರುತ್ತಿದ್ದಂತೆಯೇ ಬ್ರಾಹ್ಮಣರು ಸರ್ಕಾರಿ ಸೇವೆಯಲ್ಲಿ ತಮ್ಮ ಹಿಂದಿನ ಹಿಡಿತವನ್ನು ಸಡಿಲಿಸತೊಡಗಿದರು. ೧೯೨೭ರಲ್ಲಿ ಹೊರಬಿದ್ದ ಸರ್ಕಾರಿ ಆಜ್ಞೆಯ ಪ್ರಕಾರ ಸರ್ಕಾರಿ ಸೇವೆಯಲ್ಲಿ ಜಾತಿವಾರು ಮೀಸಲಾತಿ ಜಾರಿಗೆ ಬರುವಂತಾಯಿತು. ಆದರೆ ಈ ಆಜ್ಞೆ ಪಿಳ್ಳೈ ಮತ್ತು ಮೊದಲಿಯಾರರಂಥ ಭೂಮಾಲೀಕ ವರ್ಗಗಳಿಗೆ ಅನುಕೂಲವಾಗಿದ್ದಿತೆಂದು ಹೇಳಲಾಗಿದೆ. ಈ ಪಕ್ಷದ ಸ್ಥಾಪಕರು ಭೂಮಾಲೀಕ ವರ್ಗದವರಾಗಿದ್ದು, ಇತರ ಭೂಹೀನ ಹಿಂದುಳಿದವರನ್ನು ತಮ್ಮೊಡನೆ ಸೇರಿಸಿಕೊಳ್ಳಲು ಆಸಕ್ತರಾಗಿರಲಿಲ್ಲವೆಂಬುದು ವ್ಯಕ್ತಪಡುತ್ತದೆ. ೧೯೨೭ರ ಸರ್ಕಾರಿ ಆಜ್ಞೆಯನ್ನು ೧೯೪೭ರಲ್ಲಿ ಪುನರ್‌ವಿಮರ್ಶಿಸಲಾಯಿತಲ್ಲದೆ, ಮೊದಲಬಾರಿಗೆ, ಅಬ್ರಾಹ್ಮಣ ಜಾತಿಗಳನ್ನು ಅಬ್ರಾಹ್ಮಣ ಹಿಂದೂಗಳೆಂದು ಮತ್ತು ಅಬ್ರಾಹ್ಮಣ ಹಿಂದುಳಿದ ಹಿಂದೂಗಳೆಂದು ವಿಭಜಿಸಲಾಯಿತು. ಆದರೆ ಈ ಜಾತಿಯವರು ಮೀಸಲಾತಿಯನ್ನು ತಳ್ಳಿಹಾಕಿದ್ದರಿಂದ, ೧೯೫೧ರಲ್ಲಿ ಸರ್ಕಾರ ಇನ್ನೊಂದು ಆಜ್ಞೆ ಹೊರಡಿಸಿ ಪರಿಶಿಷ್ಟ ಜಾತಿ-ಜನಾಂಗಗಳವರು ಮತ್ತು ಹಿಂದುಳಿದ ವರ್ಗದವರಿಗಾಗಿ ಮಾತ್ರ ಮೀಸಲಾತಿ ಘೋಷಿಸಿತು. ಇಷ್ಟಾದರೂ ಆರಂಭದಲ್ಲಿ ಮೀಸಲಾತಿಯ ಲಾಭವು ಕೇವಲ ಹಿಂದುಳಿದ ಜಾತಿಗಳಲ್ಲಿಯ ಮುಂದುವರೆದವರಿಗೆ ಮಾತ್ರ ತಲುಪುವಂತಾದುದು ವಿಷಾದಕರ. ಈ ಎಲ್ಲಾ ಹೋರಾಟಗಳಿಂದ

ತಾತ್ವಿಕವಾಗಿ ಹಿಂದುಳಿದ ವರ್ಗಗಳು ಕ್ರಿಯಾಶೀಲವಾಗಲು ಸಾಧ್ಯವಾಗದೆ ತಮಿಳುನಾಡಿನ ದ್ರಾವಿಡ ಕಳಗಂ ಸಂಸ್ಕೃತಿ ಮಾತ್ರ ಪ್ರಚಾರಗೊಳ್ಳಲು ಸಾಧ್ಯವಾಯಿತೆಂಬ ಮಾತನ್ನು ತಳ್ಳಿಹಾಕುವಂತಿಲ್ಲ.

ಆಂಧ್ರಪ್ರದೇಶದಲ್ಲಿ, ಅಂದರೆ ಹಿಂದಿನ ಹೈದರಾಬಾದ್ ರಾಜ್ಯದಲ್ಲಿ, ೧೯೩೦ಕ್ಕೂ ಮುಂಚಿನಿಂದಲೇ ಕ್ರಾಂತಿಕಾರಿ ಚಟುವಟಿಕೆಗಳು ಬೆಳೆದುಬಂದುದು ಗಮನಕ್ಕೆ ಬರುತ್ತದೆ. ಹಿಂದೂ-ಮುಸ್ಲಿಂ ತಿಕ್ಕಾಟ, ಕಮ್ಯೂನಿಸ್ಟ್ ಹಿಡಿತದ ಆಂಧ್ರ ಮಹಾಸಭಾ ಸಂಘಟನೆಯ ಚಟುವಟಿಕೆಗಳು, ಅಂಬೇಡ್ಕರ್‌ರ ಪ್ರಭಾವದಿಂದ ಉಂಟಾದ ದಲಿತರ ಜಾಗೃತಿ-ಇವೆಲ್ಲವೂ ಆಂಧ್ರದಲ್ಲಿ ಹಿಂದುಳಿದ ವರ್ಗಗಳು ಮತ್ತು ದಲಿತರ ಹೋರಾಟಗಳಿಗೆ ಹೊಸ ಆಯಾಮ ಒದಗಿದುದನ್ನು ಸಮರ್ಥಿಸುತ್ತವೆ. ೧೯೩೮-೩೯ರಲ್ಲಿ ತೀವ್ರಗೊಂಡ ಸತ್ಯಾಗ್ರಹ ಚಳವಳಿ ರಾಷ್ಟ್ರೀಯ ಹೋರಾಟಕ್ಕಾಗಿ ಜನರನ್ನು ಅಣಿಗೊಳಿಸಿದರೂ ಇದು ಮತೀಯ ಘರ್ಷಣೆಗೆ ಹಾದಿಮಾಡಿಕೊಟ್ಟುದು ವಿಷಾದನೀಯ. ರಾಷ್ಟ್ರೀಯ ಚಳವಳಿ ಹಿನ್ನೆಲೆಯಲ್ಲಿ ಹೈದರಾಬಾದಿನ ಅರಸೊತ್ತಿಗೆ(ನಿಜಾಂಶಾಹಿ)ಯನ್ನು ವಿರೋಧಿಸಿದವರನ್ನು ಮುಸ್ಲಿಂ ವಿರೋಧಿಗಳೆಂದು ಭಾವಿಸುವ ಪ್ರವೃತ್ತಿ ಮೊದಲಿಟ್ಟಿತು. ಕಮ್ಯೂನಿಸ್ಟರು ಆಂಧ್ರಮಹಾಸಭಾದ ಮೂಲಕ ತೆಲಂಗಾಣ ಪ್ರದೇಶದಲ್ಲಿ ಜನಸಂಘಟನೆಯಲ್ಲಿ, ಮುಖ್ಯವಾಗಿ ಒಕ್ಕಲುತನದವರ ಸಂಘಟನೆಯಲ್ಲಿ ತೊಡಗಿದರು. ಕಮ್ಯೂನಿಸ್ಟ್ ನಾಯಕತ್ವವಾದರೂ ಆಂಧ್ರದ ಪ್ರಗತಿಪರ ಮುಸ್ಲಿಮರು ಮತ್ತು ಮೇಲ್ವರ್ಗದ ಹಿಂದೂಗಳ ವಶದಲ್ಲಿದ್ದಿತೆಂಬುದನ್ನು ಗಮನಿಸಬೇಕು. ದಲಿತರು ಈ ಸಂಘಟನೆಯೊಡನೆ ಸಂಬಂಧ ಇರಿಸಿಕೊಂಡಿರಲಿಲ್ಲವೆನ್ನುವುದು ದಿಟ. ಆದರೆ ಮಹಾರಾಷ್ಟ್ರ ದಲಿತರ ಪ್ರಭಾವ ಕರ್ನಾಟಕದ ಮೇಲೆ ಆದಂತೆ ಆಂಧ್ರ ದಲಿತರ ಮೇಲೂ ಆದುದಕ್ಕೆ ೧೯೩೪ರಲ್ಲಿ ಡಾ. ಅಂಬೇಡ್ಕರ್ ಎಲ್ಲೋರಾ ಪ್ರವಾಸ ಕೈಗೊಂಡುದೇ ಸಾಕ್ಷಿ. ದೌಲತಾಬಾದಿನಲ್ಲಿ ಮುಸ್ಲಿಂ ಅಧಿಕಾರಶಾಹಿ ದಲಿತರಿಗೆ ನೀರು ಕೊಡಲು ನಿರಾಕರಿಸಿದುದು ಅವರ ಗಮನಕ್ಕೆ ಬಂದುದು ಆಗಲೇ. ೧೯೩೮ ಡಿಸೆಂಬರ್‌ನಲ್ಲಿ ಚಾಲಿಸ್‌ಗಾಂವ್ ಬಳಿಯ ಮಕ್ರಾನ್‌ಪುರದಲ್ಲಿ ನಡೆದ ಔರಂಗಾಬಾದ್ ಜಿಲ್ಲಾ ದಲಿತ ಸಮ್ಮೇಳನದಲ್ಲಿ ಭಾಗವಹಿಸಿದ್ದ ಡಾ. ಅಂಬೇಡ್ಕರ್, ಹೈದರಾಬಾದ್ ಸರ್ಕಾರವನ್ನೂ ಅದರ ನೀತಿಯನ್ನೂ ಕಟುವಾಗಿ ಟೀಕಿಸಿದರು. ದಲಿತರಿಗೆ ಇನಾಂ (ವತನ್) ಭೂಮಿಯನ್ನು ನೀಡಲು, ವೇತಬೇಗಾರ್ ರದ್ದುಪಡಿಸುವ ಬಗೆಗೆ ಕಾನೂನು ಜಾರಿಗೆ ತರಲು, ಶಿಕ್ಷಣ ಸೌಲಭ್ಯಗಳನ್ನು ಒದಗಿಸಲು ನಿಜಾಂ ಸರ್ಕಾರವನ್ನು ಒತ್ತಾಯಿಸಿ ನಿರ್ಣಯಗಳನ್ನು ಕೈಗೊಳ್ಳಲಾಯಿತು. ಕ್ರಮೇಣ ಆಂಧ್ರದ ಮಹಾರರು ಡಾ. ಅಂಬೇಡ್ಕರ್‌ರ ಹೋರಾಟದ ವಲಯವನ್ನು ಪ್ರವೇಶಿಸಿತೊಡಗಿದರು.

ಆಂಧ್ರದಲ್ಲಿ ದಲಿತ ಸಂಘಟನೆ ಬಗೆಗೆ ತೀವ್ರ ಗಮನ ಹರಿಸಿದವರಲ್ಲಿ 'ಹೈದರಾಬಾದಿ ಅಂಬೇಡ್ಕರ್' ಎಂದೇ ಪ್ರಸಿದ್ಧರಾಗಿದ್ದ ಬಿ. ಎಸ್. ವೆಂಕಟರಾವ್ ಮುಖ್ಯರು. ಇನ್ನೊಬ್ಬರು ಜೆ. ಸುಬ್ಬಯ್ಯ. 'ಭೀಮಸೇನಾ' ಸ್ಥಾಪಿಸಿದ ಶ್ಯಾಮಸುಂದರ್ ಜನಿಸಿದ್ದು ಔರಂಗಾಬಾದಿನಲ್ಲಿ. ೧೯೩೩ ರಲ್ಲಿ ಟಕ್ಕರ್ ಬಾಪೂ ಅವರು ಹೈದರಾಬಾದಿಗೆ ಭೇಟಿ ನೀಡಿದ ಸಂದರ್ಭದಲ್ಲಿ ದಲಿತ ಸಂಘಟನೆಯ ಶಾಖೆಯೊಂದನ್ನು ಆರಂಭಿಸಿದರು. ೧೯೩೮ರಲ್ಲಿ ಬಿ. ಎಸ್. ವೆಂಕಟರಾವ್ ಸ್ಥಾಪಿಸಿದ ಹೈದರಾಬಾದ್ ಸ್ಟೇಟ್ ಡಿಪ್ರೆಸ್ಡ್ ಕ್ಲಾಸಸ್ ಅಸೋಸಿಯೇಶನ್

(ಡಿ. ಸಿ. ಎ.) ನಿಜಾಂ ಸರ್ಕಾರದೊಡನೆ ಗುರಿತಿಸಿಕೊಂಡಿದ್ದು, ದಲಿತರಿಗೆ ಪ್ರತ್ಯೇಕ ಚುನಾವಣಾ ಮೀಸಲಾತಿ ಬೇಡಿಕೆಯನ್ನು ಮಂಡಿಸಿತು. ಆದರೆ ಆಂತರಿಕ ಕಲಹದ ಕಾರಣವಾಗಿ ಡಿ. ಸಿ. ಎ. ಸಂಘಟನೆ ೧೯೪೦ರಲ್ಲಿ ಒಡೆದು ಹೋಗಿತಾಯಿತು. ಯುವ ಸಮೂಹ ಅರಿಗೇ ರಾಮಸ್ವಾಮಿಯವರೊಡನೆ ಸೇರಿ ಅವರ ಹೈದರಾಬಾದ್ ಸ್ಟೇಟ್ ಆದಿ-ಹಿಂದೂ ಮಹಾಸಭಾವನ್ನು ಪುನಶ್ಚೇತನಗೊಳಿಸುವಲ್ಲಿ ತೊಡಗಿಕೊಂಡಿತು. ಆದರೆ ೧೯೪೨ ಜುಲೈನಲ್ಲಿ ನಾಗಪುರದಲ್ಲಿ ನಡೆದ ಶೆಡ್ಯೂಲ್ಡ್ ಕ್ಯಾಸ್ಟ್ ಫೆಡರೇಶನ್‌ನಲ್ಲಿ, ಪ್ರತ್ಯೇಕಗೊಂಡಿದ್ದ ಈ ಎಲ್ಲಾ ಬಣಗಳೂ ಭಾಗವಹಿಸಿದ್ದವಲ್ಲದೆ, ಡಾ. ಅಂಬೇಡ್ಕರರ ಹಿತವಾದದ ಮೇರೆಗೆ ಆದಿ-ಹಿಂದೂ ಮಹಾಸಭಾವನ್ನು ಶೆಡ್ಯೂಲ್ಡ್ ಕ್ಯಾಸ್ಟ್ ಫೆಡರೇಶನ್ (ಎಸ್. ಸಿ. ಎಫ್.) ಎಂಬ ಹೆಸರಿನಿಂದ ಕರೆಯಲು ನಿರ್ಣಯಿಸಲಾಯಿತು. ಡಿ. ಸಿ. ಎ. ಮತ್ತು ಎಸ್. ಸಿ. ಎಫ್. ಗಳೆರಡೂ ದಲಿತರ ಮೇಲೆ ಹಿಡಿತ ಸಾಧಿಸಲು ತಮ್ಮಲ್ಲೆ ಪೈಪೋಟಿ ನಡೆಸಿದುದು ನಿಜ. ಸ್ವಾತಂತ್ರ್ಯಾನಂತರದಲ್ಲಿ ಆಂಧ್ರಪ್ರದೇಶದಲ್ಲಿ ಮಾಲ ಮತ್ತು ಮಾದಿಗ ಜನಾಂಗಗಳ ನಡುವೆ ಏರ್ಪಟ್ಟಿರುವ ಪೈಪೋಟಿ ಈಗ ದೇಶಾದ್ಯಂತ ಚರ್ಚೆಯ ವಿಷಯವಾಗಿದೆ; ಕರ್ನಾಟಕದಲ್ಲಿ ಮಾದಿಗರ ಪ್ರತ್ಯೇಕ ಮೀಸಲಾತಿ ಚಳವಳಿಗೂ ಪ್ರೇರಣೆ ನೀಡಿದೆ.

### ೨.೩. ಮೈಸೂರು ಸಂಸ್ಥಾನದ ಬ್ರಾಹ್ಮಣೇತರ ಚಳವಳಿ

ಕರ್ನಾಟಕದ ಮಟ್ಟಿಗೆ, ದಲಿತ ಮತ್ತು ಹಿಂದುಳಿದ ವರ್ಗಗಳ ಚಳವಳಿಯ ಬೇರುಗಳು ೧೨ನೇ ಶತಮಾನದಷ್ಟು ಹಿಂದಕ್ಕೆ ಹರಿದಿವೆಯೆಂಬುದನ್ನು ಒಪ್ಪಲೇ ಬೇಕು. ಜಾತಿವಿಮೋಚನಾ ಚಳವಳಿಯನ್ನು ಈ ಹಂತದಿಂದಲೇ ಗುರುತಿಸುವ ಪದ್ಧತಿ ಬೆಳೆದು ಬಂದಿದ್ದು, ಕೆಳವರ್ಗದ ಆಶಯ ಮತ್ತು ಅಭಿವ್ಯಕ್ತಿಯಾಗಿ ವಚನಸಾಹಿತ್ಯ ಸೃಷ್ಟಿಗೊಂಡುದು ಮತ್ತು ಬೆಳೆದುಬಂದುದು ಇದಕ್ಕೆ ಪ್ರಮುಖ ಕಾರಣವೆನ್ನಬಹುದು. ಸ್ವಾಭಿಮಾನ ರಕ್ಷಣೆ, ಉದ್ಯೋಗದ ಹಕ್ಕು, ಸಾಮಾಜಿಕ ನ್ಯಾಯ ಸ್ಥಾಪನೆಗಳಿಗಾಗಿ ದಲಿತ ಮತ್ತು ಹಿಂದುಳಿದ ವರ್ಗಗಳಿಗೆ ಶರಣಪಂಥ ನೆರವು ನೀಡಿ ಪ್ರೋತ್ಸಾಹಿಸಿತು. ಮಾದಿಗರು, ಡೋಹರು, ಸಮಗಾರರು, ಮಚ್ಚಿಗರು, ಬೇಡರು, ಕ್ಷೌರಿಕರು, ಮಡಿವಾಳರು, ಒಕ್ಕಲಿಗರು, ನೇಯ್ಗೆಯವರು, ಅಕ್ಕಸಾಲಿಗರು, ಮಲಹರರು, ಬಡಗಿಗಳು, ಚಿಪ್ಪಿಗರು, ಸತ್ತಿಗೆ ಕಾಯಕದವರು, ಬಾಣಸದವರು, ಬೆಸ್ತರು, ಅಂಬಿಗರು, ಗೊಲ್ಲರು, ಈಡಿಗರು, ಡೊಂಬರು, ದುರುಗ ಮುರುಗಿಯವರು-ಇವರೇ ಮೊದಲಾದವರು ಬಸವಣ್ಣ ಸಂಘಟಿಸಿದ ಶರಣರ ತಂಡದಲ್ಲಿದ್ದ ದಲಿತ ಮತ್ತು ಹಿಂದುಳಿದ ವರ್ಗಗಳವರು. ಶರಣಗಣ, ಶರಣ ಸಾಹಿತ್ಯ, ಶರಣ ಚಳವಳಿ ಇತ್ಯಾದಿಯನ್ನು ಸಮಾನತೆಗಾಗಿ ನಡೆದ ಎಲ್ಲ ವಿಧದ ಹೋರಾಟಗಳ ಸಂದರ್ಭದಲ್ಲೆಲ್ಲ ನೆನಪಿಸಿಕೊಳ್ಳುವ, ಅದರಿಂದ ಪ್ರೇರಣೆ ಪಡೆಯುವ, ಧೈರ್ಯ-ಸ್ಫೂರ್ತಿಗಳಿಂದ ಕಾರ್ಯೋನ್ಮುಖರಾಗುವ ಪ್ರವೃತ್ತಿಯನ್ನು ನೋಡುತ್ತಿದ್ದೇವೆ. ಮುಖ್ಯವಾಗಿ, ಉತ್ತರ ಕರ್ನಾಟಕದ ಸಾಮಾನ್ಯ ಜನಸಮುದಾಯಗಳು ಶರಣ ಚಳವಳಿಯಲ್ಲಿ ನೇರವಾಗಿ ಭಾಗವಹಿಸಿದುದು ಅಥವಾ ಪ್ರಭಾವಕ್ಕೊಳಗಾದುದು ಸಹಜ. ಹಾಗೆಯೇ, ದಾಸಸಾಹಿತ್ಯವೂ ಸಾಮಾಜಿಕ ಸಮಾನತೆಯ ಅಗತ್ಯವನ್ನು ಎತ್ತಿ ಹೇಳುತ್ತದೆ.

ವೀರಶೈವ ಚಳವಳಿಯಾಗಿಯೂ ಮಾರ್ಪಟ್ಟ ಶರಣ ಚಳವಳಿ, ೧೨ನೇ ಶತಮಾನ ದಿಂದಲೂ ಒಂದಲ್ಲ ಒಂದು ವಿಧದಲ್ಲಿ, ಒಂದಲ್ಲ ಒಂದು ಕ್ಷೇತ್ರದಲ್ಲಿ ತನ್ನ ಅಸ್ತಿತ್ವ

ಉಳಿಸಿಕೊಂಡೇ ಬಂದಿದ್ದಿತ್ತೆನ್ನಲು ೧೯ನೇ ಶತಮಾನದ ಕೊನೇ ದಶಕದಲ್ಲಿ ನಡೆದ ಒಂದು ಘಟನೆಯೇ ಸಾಕ್ಷಿ. ಹಿಂದುಳಿದ ವರ್ಗಗಳ ಚಳವಳಿಯ ಮೊದಲ ಕಿಡಿ ಮೈಸೂರಿನಲ್ಲಿ ಹಾರಿದ್ದು ಈ ಘಟನೆಯಿಂದಲೇ ಎಂಬ ಅಭಿಪ್ರಾಯವೂ ಇದೆ. ೧೮೯೧ರಲ್ಲಿ ಮೈಸೂರು ಜನಗಣತಿ ವರದಿ ಪ್ರಕಟವಾದಾಗ, ಅದರಲ್ಲಿ ಲಿಂಗಾಯಿತ ವರ್ಗದವರನ್ನು 'ಶೂದ್ರ'ರೆಂದು ಸಂಬೋಧಿಸಿದುದು ಆ ವರ್ಗಕ್ಕೆ ಸೇರಿದ ಯಜಮಾನ್ ವೈ. ವೀರಸಂಗಪ್ಪ ಮತ್ತು ವೈ. ವಿರೂಪಾಕ್ಷಯ್ಯರಂಥಾ ಮುಖಂಡರಿಗೆ ಸರಿಬೀಳಲಿಲ್ಲ. ಸಾಮಾಜಿಕವಾಗಿ ವೀರಶೈವರು ಬ್ರಾಹ್ಮಣರಿಗೆ ಸಮಾನರೆಂಬುದನ್ನು ಎತ್ತಿ ಹಿಡಿಯಲು 'ದಿ ಮೈಸೂರ್ ಸ್ಟಾರ್' ಹೆಸರಿನ ಕನ್ನಡ ವಾರಪತ್ರಿಕೆಯನ್ನು ಆರಂಭಿಸಿದರು. ಅಲ್ಲದೆ, ಬ್ರಾಹ್ಮಣರಷ್ಟೇ ಸಮರ್ಥವಾಗಿ ವೀರಶೈವರೂ ಸಂಸ್ಕೃತ ಭಾಷೆಯಲ್ಲಿ ಕೃತಿಗಳನ್ನು ರಚಿಸಬಲ್ಲರೆಂಬುದನ್ನು ತೋರಿಸಲು ವಿದ್ವಾನ್ ಪಿ. ಆರ್. ಕರಿಬಸವಶಾಸ್ತ್ರಿ ಮತ್ತು ಎನ್. ಆರ್. ಕರಿಬಸವಶಾಸ್ತ್ರಿಗಳವರನ್ನು ಪ್ರೋತ್ಸಾಹಿಸಿದರು. ಪರಿಣಾಮವಾಗಿ, ಕೆಲವು ಉತ್ಕೃಷ್ಟ ಕಾವ್ಯಕೃತಿಗಳು ಸಂಸ್ಕೃತ ಮತ್ತು ಕನ್ನಡಭಾಷೆಗಳಲ್ಲಿ ಪ್ರಕಟಗೊಂಡವು. ಆ ನಂತರ ಎನ್. ಆರ್. ಕರಿಬಸವಶಾಸ್ತ್ರಿಗಳು 'ವೀರಶೈವ ಮತಪ್ರಕಾಶಿಕಾ' ಎಂಬ ಮಾಸಪತ್ರಿಕೆಯ ಪ್ರಕಟಣೆಯನ್ನು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಆರಂಭಿಸುವುದರ ಮೂಲಕ ಬ್ರಾಹ್ಮಣರ ವಿರುದ್ಧ ಎತ್ತಿದ ಧ್ವನಿಗೆ ತಮ್ಮದನ್ನೂ ಸೇರಿಸಿದರು. ಈ ಪ್ರತಿಭಟನೆ ಜಾತಿಪ್ರತಿಷ್ಠೆಗೆ ಸೀಮಿತಗೊಂಡಂತೆ ಮೇಲ್ನೋಟಕ್ಕೆ ತೋರಿದರೂ ಪರಂಪರೆಯ ಪ್ರಭಾವವೂ ಇರುವುದನ್ನು ಗಮನಿಸಬಹುದು.ಈ ಸಂಘಟನೆಯಲ್ಲಿ ಲಿಂಗಾಯಿತರಲ್ಲದೆ, ಒಕ್ಕಲಿಗ, ವೈಶ್ಯ, ಜೈನ ಮೊದಲಾದ ಜಾತಿವರ್ಗಗಳ ಬುದ್ಧಿಜೀವಿಗಳೂ ವರ್ತಕರೂ ಸಕ್ರಿಯರಾಗಿದ್ದುದು ಗಮನಾರ್ಹ. ಈ ನೆಲೆಯಲ್ಲಿ ಎಲ್ಲಾ ಬ್ರಾಹ್ಮಣೇತರ ವರ್ಗಗಳ ಬೇಡಿಕೆಗಳನ್ನು ಪರೋಕ್ಷವಾಗಿ ಈ ಪ್ರಯತ್ನಗಳು ಬೆಂಬಲಿಸಿದುದು ಸ್ಪಷ್ಟ.

ಏಕೀಕೃತ ಕರ್ನಾಟಕದ ಪೂರ್ವಸ್ಥಿತಿಯ ಬಗೆಗೆ ಹೇಳುವುದೆಂದರೆ, ರಾಜಾಳ್ವಿಕೆ ಕಾಲದ ಮೈಸೂರು ಸಂಸ್ಥಾನದ ಸ್ಥಿತಿ-ಗತಿಗಳ ಪ್ರಸ್ತಾಪವೇ ಆಗುತ್ತದೆ. ಇಂಗ್ಲಿಷ್ ಅಧಿಕಾರಿಗಳು (ಉದಾ-ಬೆಂಜಮಿನ್ ಹೈನೆ) ಗಮನಿಸಿದಂತೆ, ೧೮೦೦ರಲ್ಲಿ ಮೈಸೂರು ಸಂಸ್ಥಾನದಲ್ಲಿದ್ದ ಶೈಕ್ಷಣಿಕ ಪರಿಸ್ಥಿತಿಯೆಂದರೆ, ಶಿಕ್ಷಣ ಬ್ರಾಹ್ಮಣರಿಗೆ ಮಾತ್ರ ಸೀಮಿತಗೊಂಡಿದ್ದಿತು. ಸಾಮಾನ್ಯ ಜನರು ಸರಳ ಓದು-ಬರಹಗಳ ಮಟ್ಟಿಗಷ್ಟೇ ತೃಪ್ತಿ ಹೊಂದಿದ್ದರು. ೧೮೩೧ರಲ್ಲಿ ಇಂಗ್ಲಿಷರು ಮೈಸೂರು ಆಡಳಿತವನ್ನು ತಮ್ಮ ಕೈಗೆ ತೆಗೆದುಕೊಂಡ ನಂತರದ ಪರಿಸ್ಥಿತಿಯಲ್ಲೂ ಬದಲಾವಣೆಯೇನೂ ಆಗಲಿಲ್ಲ. ಇಷ್ಟಿದ್ದರೂ ದಲಿತೋದ್ಧಾರದ ನಿಟ್ಟಿನಲ್ಲಿ ಮೈಸೂರು ಅರಸೊತ್ತಿಗೆ ಆ ನಂತರ ಕೈಗೊಂಡ ಕಾರ್ಯಕ್ರಮಗಳಲ್ಲಿ ದಲಿತರಾಗಿ ಪ್ರತ್ಯೇಕ ಶಾಲೆಗಳನ್ನು ಆರಂಭಿಸಿದುದನ್ನು ನೋಡಬಹುದು. ಇದು ಕಾರ್ಯರೂಪಕ್ಕೆ ಬಂದುದು ೧೮೯೦ರಲ್ಲಿ. ಅಸ್ಪೃಶ್ಯರಿಗಾಗಿ ತೆರೆಯಲಾದ ಪ್ರತ್ಯೇಕ ಶಾಲೆಗಳು 'ಪಂಚಮಶಾಲೆ'ಗಳೆಂದು ಹೆಸರಾದವು. ವಾಸ್ತವದಲ್ಲಿ, ಇವು ಸಾರ್ವಜನಿಕ ಶಾಲೆಗಳಿಗೆ ಪರ್ಯಾಯವಾದುವು. ೨೦ನೇ ಶತಮಾನದ ಆರಂಭದಲ್ಲಿ ಪೊಲೀಸರ ನೆರವಿನೊಡನೆ ಅಸ್ಪೃಶ್ಯರನ್ನು ಸರ್ಕಾರಿ ಶಾಲೆಗಳಿಗೆ ಸೇರಿಸುವ ಪರಿಸ್ಥಿತಿ ಇದ್ದಿತೆಂಬುದು ಗಮನಾರ್ಹ. ಈ ಸಂಬಂಧದಲ್ಲಿ ಪ್ರಸ್ತಾಪಿಸಲರ್ಹವಾದ ಉದಾಹರಣೆಯೆಂದರೆ 'ಶೃಂಗೇರಿ ಪ್ರಕರಣ'; ಅಸ್ಪೃಶ್ಯರ ಶಾಲಾ ಪ್ರವೇಶದ ವಿರುದ್ಧ ನಡೆದ

ಸ್ಥಳೀಯ ಪ್ರತಿಭಟನೆಯ ಸಂಕೇತ. ಇಂಥದೇ ಇನ್ನೊಂದು ಉದಾಹರಣೆಯೆಂದರೆ, ೧೯೧೮-೧೯ರಲ್ಲಿ ಚಿತ್ರದುರ್ಗದಲ್ಲಿ ಮಾದಿಗ ಜನಾಂಗದ ಹುಡುಗನನ್ನು ಆಂಗ್ಲೋ ವರ್ನಾಕ್ಯುಲರ್ ಶಾಲೆಗೆ ಪ್ರವೇಶ ನೀಡಿದಾಗ ಸಂಭವಿಸಿದಂಥದು. ೧೯೧೩ರಲ್ಲಿ ಸ್ಥಾಪನೆಗೊಂಡ ದಲಿತ ಶಿಕ್ಷಣ ಮಿಷನ್ (ಹಿಂದೂ ದಲಿತವರ್ಗ ಮಿಷನ್) ಪಿ. ಎಸ್. ನರಸಿಂಹ ಅಯ್ಯಂಗಾರ್ ಎಂಬವರ ಪ್ರಯತ್ನದ ಫಲ. ಆ ನಂತರ ಈ ಪರಿಸ್ಥಿತಿ ಸುಧಾರಣೆಗೊಳ್ಳುತ್ತಾ ಬಂದಿತಲ್ಲದೆ, ೧೯೧೭ರಲ್ಲಿ ಬೇಲೂರು ದೇವಾಲಯದ ಆವರಣದೊಳಗೆ ಏರ್ಪಾಟಾದ ಪಂಚಮ ಸಮ್ಮೇಳನ ದಲಿತರಿಗೆ ಹೊಸದಿಕ್ಕು ತೋರಿಸಿತು.

ಶೈಕ್ಷಣಿಕವಾಗಿ ಸುಧಾರಣೆಗೊಳ್ಳುವ ಎಲ್ಲ ಲಕ್ಷಣಗಳು ಕಂಡುಬರುತ್ತಿದ್ದಂತೆಯೇ, ಸರ್ಕಾರಿ ಹುದ್ದೆಗಳಲ್ಲಿ ಸಮಾನ ಅವಕಾಶ ಪಡೆದುಕೊಳ್ಳುವ ಸಿಟ್ಟಿನಲ್ಲಿ ಹುಟ್ಟಿಕೊಂಡ ದಲಿತ ಮತ್ತು ಹಿಂದುಳಿದ ವರ್ಗಗಳ ಚಳವಳಿಗಳು ರಾಜ್ಯದ ರಾಜಕಾರಣದ ದಿಕ್ಕನ್ನೇ ಬದಲಿಸುವಂಥಾದವು. ೧೮೭೪ರ ಆಜ್ಞೆಯ ಪ್ರಕಾರ, ಪೋಲೀಸ್ ಇಲಾಖೆಯ ಸ್ಥಾನಗಳನ್ನು ತುಂಬುವಲ್ಲಿ ಪ್ರತಿ ಹತ್ತು ಹುದ್ದೆಗಳಿಗೆ ಎಂಟು ಜನ ಬ್ರಾಹ್ಮಣೇತರರನ್ನು ಆಯ್ಕೆ ಮಾಡಬೇಕೆಂದಾಯಿತು. ಇದು ಸಾರ್ವಜನಿಕ ಸೇವೆಯಲ್ಲಿ ತಮಗೆ ಅವಕಾಶಬೇಕೆಂದು ಒತ್ತಾಯ ತಂದ ಬ್ರಾಹ್ಮಣೇತರರಿಗೆ ದೊರೆತ ಜಯ. ಆ ನಂತರವೂ ಈ ಆಜ್ಞೆ ಊರ್ಜಿತಗೊಂಡಿತು. ಮುಖ್ಯವಾಗಿ, ಉತ್ತರದ ಮತ್ತು ದಕ್ಷಿಣದ ರಾಜ್ಯಗಳಲ್ಲಿ ನಡೆಯಲಾರಂಭಿಸಿದ್ದ ಈ ಬಗೆಯ ಚಳವಳಿಗಳು ಪರಸ್ಪರ ಪ್ರೇರಣೆ-ಪ್ರೋತ್ಸಾಹಗಳಿಂದ ಇನ್ನಷ್ಟು ತೀವ್ರಗೊಂಡವು. ಇವು ಬ್ರಾಹ್ಮಣೇತರ ಚಳವಳಿಗಳಾಗಿ ಮಾರ್ಪಟಿದ್ದರಿಂದ ಅಂದಿನ ಅಧಿಕಾರಶಾಹಿ ಇದರ ಲಾಭ ಪಡೆಯಲು ಹವಣಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ಬ್ರಾಹ್ಮಣೇತರ ಚಳವಳಿಯ ಬೀಜಾಂಕುರವಾದುದು ೧೯ನೇ ಶತಮಾನದ ಕೊನೆಯ ದಶಕದಲ್ಲಾದರೂ ಅದು ಕ್ರಿಯಾಶೀಲಗೊಂಡುದು ಈ ಶತಮಾನದ ಮೊದಲನೇ ದಶಕದಲ್ಲಿ.

ಮೈಸೂರು ಮಹಾರಾಜರು ೧೮೮೧ರಲ್ಲಿ ಸ್ಥಾಪಿಸಿದ ಪ್ರಜಾಪ್ರತಿನಿಧಿ ಸಭೆಯಲ್ಲಿ ರೈತ ಮತ್ತು ವರ್ತಕ ವರ್ಗಗಳ ಪ್ರತಿನಿಧಿಗಳು ಪ್ರಮುಖವಾಗಿ ಇದ್ದುದು ವಿಶೇಷ. ಆದ್ದರಿಂದ ಒಕ್ಕಲಿಗರು ಮತ್ತು ವೀರಶೈವರು ಒಟ್ಟಾಗಿರಲು ಸಹಜವಾಗಿಯೇ ಸಾಧ್ಯವೆನಿಸಿತು. ಪರಿಣಾಮವಾಗಿ, ಶೈಕ್ಷಣಿಕವಾಗಿ ಪ್ರಗತಿಪಥದಲ್ಲಿದ್ದು ಒಕ್ಕಲುತನದಲ್ಲಿ ಎರಡನೇ ದೊಡ್ಡ ವರ್ಗವೆನಿಸಿದ್ದ ವೀರಶೈವರು ೧೯೦೫ರಲ್ಲಿ 'ಮೈಸೂರು ಲಿಂಗಾಯಿತ ಶಿಕ್ಷಣ ನಿಧಿ ಸಂಘ' ಸ್ಥಾಪಿಸಿಕೊಂಡರು. ಇದಕ್ಕೆ ಮುನ್ನ, ಅಂದರೆ ೧೯೦೪ರಲ್ಲಿ, ಹಾನಗಲ್ಲಿನ ಕುಮಾರ ಸ್ವಾಮಿಯವರ ಪ್ರಯತ್ನದ ಫಲವಾಗಿ ಧಾರವಾಡದಲ್ಲಿ ಅಖಿಲಭಾರತ ವೀರಶೈವ ಮಹಾಸಭಾದ ಪ್ರಥಮ ಸಮ್ಮೇಳನ ಏರ್ಪಟ್ಟಿದ್ದು, ಅದರಲ್ಲಿ ವೀರಶೈವರ ಶಿಕ್ಷಣಕ್ಕೆ ಆದ್ಯತೆ ನೀಡುವ ಹಾಗೂ ವೀರಶೈವ ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿನಿಲಯಗಳನ್ನು ತೆರೆಯುವ ಬಗೆಗೆ ನಿರ್ಣಯ ಕೈಗೊಳ್ಳಲಾಗಿದ್ದಿತು. ಈ ಸಭೆಯಲ್ಲಿ ಭಾಗವಹಿಸಿದ್ದ ಸಿರಸಂಗಿ ಲಿಂಗರಾಜರು, ಅತ್ಯಂತ ಮುಂದುವರೆದ ಜನಸಮುದಾಯದವರು ಹಿಂದುಳಿದ ಕೋಮಿನ ಬಗೆಗೆ ಸಹಾನುಭೂತಿ ಸಹಕಾರ ತೋರಬೇಕೆಂದು ಹಾಗೂ ದೇಶದ ಐಕ್ಯತೆಗೆ ಭಂಗಬಾರದ ರೀತಿಯಲ್ಲಿ ಎಲ್ಲರೂ ರಕ್ಷಣೆಗೆ ನಿಲ್ಲಬೇಕೆಂದು ಕರೆಯಿತ್ತುದುದು ಗಮನಾರ್ಹ. ಈ ಸಮ್ಮೇಳನದ ಪ್ರಭಾವ ಮೈಸೂರಿನ ವೀರಶೈವ ಧುರೀಣರ ಮೇಲೆ ಉಂಟಾದುದು ಸಹಜ.

ಲಿಂಗಾಯಿತರ ಸಂಘ ಗುರುಮಠಗಳ ಮಾರ್ಗದರ್ಶನದಲ್ಲಿ ನಡೆದುದು ಗಮನಿಸಬೇಕಾದ ಅಂಶ. ಹಾಗೆಯೇ, ಬಾಗಲಕೋಟೆಯ ಬಸವೇಶ್ವರ ವಿದ್ಯಾವರ್ಧಕ ಸಂಘವೂ ಅಸ್ತಿತ್ವಕ್ಕೆ ಬಂದುದು ೧೯೦೬ರಲ್ಲಿ.

ಲಿಂಗಾಯಿತರ ಶಿಕ್ಷಣ ನಿಧಿ ಸಂಘದ ಸ್ಥಾಪನೆಯನಂತರ, ೧೯೦೬ರಲ್ಲಿ ಬೆಂಗಳೂರಿನಲ್ಲಿ ಅಸ್ತಿತ್ವಕ್ಕೆ ಬಂದುದೇ 'ಒಕ್ಕಲಿಗರ ಸಂಘ'. ಇದು ಒಕ್ಕಲಿಗ ಯುವ ಜನಾಂಗದ ಭವಿಷ್ಯತ್ತಿನ ಬಗೆಗೆ ಕಾಳಜಿ ಹೊಂದಿದ್ದು, ಶಿಕ್ಷಣಕ್ಕೆ ಮತ್ತು ವಿದ್ಯಾರ್ಥಿನಿಲಯಗಳ ಸ್ಥಾಪನೆಗೆ ಆದ್ಯತೆ ನೀಡತೊಡಗಿತು. ಬೆಂಗಳೂರೂ ಸೇರಿದಂತೆ ಹಳೇ ಮೈಸೂರು ರಾಜ್ಯದ ಪ್ರತಿಯೊಂದು ಜಿಲ್ಲಾ ಕೇಂದ್ರಗಳಲ್ಲೂ ಒಕ್ಕಲಿಗ ವಿದ್ಯಾರ್ಥಿನಿಲಯಗಳು ಸ್ಥಾಪನೆಗೊಂಡವು. ದಿವಾನ್ ವಿ. ಪಿ. ಮಾಧವರಾಯರು ಒಕ್ಕಲಿಗ ಸಂಘಕ್ಕಾಗಿ ಬೆಂಗಳೂರಿನಲ್ಲಿ ವಿಸ್ತಾರವಾದ ನಿವೇಶನವೊಂದನ್ನು ಕೊಡಮಾಡುವಲ್ಲಿ ಪ್ರಮುಖ ಪಾತ್ರ ವಹಿಸಿದರು. ಒಕ್ಕಲಿಗ ಸಮುದಾಯದ ಜಾಗೃತಿಗಾಗಿ ೧೯೦೭ರಲ್ಲಿ 'ಒಕ್ಕಲಿಗರ ಪತ್ರಿಕೆ' ಸಹಾ ಆರಂಭಗೊಂಡಿತು; ಒಕ್ಕಲಿಗರು ಮಾತ್ರವಲ್ಲದೆ ಹಿಂದುಳಿದ ವರ್ಗಗಳವರೆಲ್ಲರ ಮುಖವಾಣಿಯೆನಿಸಿತು. ಒಕ್ಕಲಿಗರಲ್ಲಿ ನೈತಿಕ ಮತ್ತು ಸಾಮಾಜಿಕ ಪ್ರಜ್ಞೆ ಬೆಳೆಸುವಲ್ಲಿ ಪರಿಣಾಮಕಾರಿಯಾಗಿ ಕೆಲಸ ಮಾಡಿದವರಲ್ಲಿ ಕೆ. ಹೆಚ್. ರಾಮಯ್ಯರಂಥವರು ಮುಖ್ಯರು. ಲಿಂಗಾಯಿತ ಮತ್ತು ಒಕ್ಕಲಿಗರ ಸಂಘಗಳಂತೆಯೇ ಇತರ ವರ್ಗಗಳ ಸಂಘಗಳೂ ಸ್ಥಾಪನೆಗೊಳ್ಳತೊಡಗಿದವು. ೧೯೦೯ರಲ್ಲಿ ಅಸ್ತಿತ್ವಕ್ಕೆ ಬಂದ ಮಹಮ್ಮದೀಯರ ಕೇಂದ್ರ ಸಂಘ, ಆ ನಂತರ ಸ್ಥಾಪನೆಗೊಂಡ ಕುರುಬರ ಸಂಘ ಮೊದಲಾದವು ಅಲ್ಪಸಂಖ್ಯಾತ ಮತ್ತು ಹಿಂದುಳಿದ ವರ್ಗಗಳವರ ಏಳಿಗೆಗಾಗಿ ಕೆಲಸ ಮಾಡಿದಂಥವು. ದಲಿತರನ್ನು ಪ್ರತಿನಿಧಿಸುವ ಆದಿ ದ್ರಾವಿಡ ಅಭಿವೃದ್ಧಿ ಸಂಘ ಮತ್ತು ಆದಿ ಜಾಂಭವ ಸಂಘಗಳೂ ಹುಟ್ಟಿಕೊಂಡವು.

ಮೇಲೆಯೇ ತಿಳಿದಂತೆ, ೧೯೧೬ರಲ್ಲಿ ತಮಿಳುನಾಡಿನಲ್ಲಿ ಹುಟ್ಟಿಕೊಂಡ ಬ್ರಾಹ್ಮಣೇತರ ಸಂಘಟನೆಯಾದ ಜಸ್ಟಿಸ್ ಪಕ್ಷ ತನ್ನ ಪ್ರಭಾವವನ್ನು ಮೈಸೂರು ಸಂಸ್ಥಾನದ ಮೇಲೆ ಪರಿಣಾಮಕಾರಿಯಾಗಿ ಬೀರಿದುದು ಸ್ಪಷ್ಟ. ಮೈಸೂರಿನ ಬ್ರಾಹ್ಮಣೇತರ ನೇತಾರರನ್ನು ಪ್ರಚೋದಿಸಿದುದು ಜಸ್ಟಿಸ್ ಪಕ್ಷದ ೧೯೧೭ರ ಪ್ರಥಮ ಸಮ್ಮೇಳನದಲ್ಲಿ ವ್ಯಕ್ತಪಟ್ಟ ಸಂಗತಿಗಳು. ಈ ಸಮ್ಮೇಳನದಲ್ಲಿ ಒತ್ತಿ ಹೇಳಲಾದ ಮಾತೆಂದರೆ, ಸರ್ಕಾರಿ ನೌಕರಿಯಲ್ಲಿ ಯಾವುದೇ ಒಂದು ಜಾತಿಗೆ ಹೆಚ್ಚು ಅವಕಾಶ, ಪ್ರಾತಿನಿಧ್ಯಗಳು ದೊರಕುವುದಾದರೆ ಆ ಜಾತಿಗೇ ಅನುಚಿತ ಪ್ರಾಮುಖ್ಯ ಮತ್ತು ಪ್ರಭಾವಗಳು ದೊರೆಯುತ್ತವೆಂಬುದು. ಇದು ವಾಸ್ತವವೂ ಆದ್ದರಿಂದ ಮೈಸೂರಿನ ಬ್ರಾಹ್ಮಣೇತರರು ವ್ಯವಸ್ಥಿತವಾಗಿ ಸಂಘಟನೆಗೊಳ್ಳಲು ಅನುಕೂಲವಾಯಿತು. 'ಸರ್ಕಾರದ ನೌಕರಿಗಳನ್ನು ಪಡೆಯುವುದೆಂದರೆ ಅಧಿಕಾರ ಕೇಂದ್ರದಲ್ಲಿ ಪಾಲು ಪಡೆಯುವುದು' ಎಂಬ ಸತ್ಯ ಅವರಿಗೆ ಗೋಚರಿಸಿತು. ಇದರ ಫಲವಾಗಿ ೧೯೧೭ರಲ್ಲಿ ಹುಟ್ಟಿಕೊಂಡುದೇ 'ಪ್ರಜಾಮಿತ್ರ ಮಂಡಲಿ' ಎಂಬ ಒಕ್ಕೂಟ. ಇದನ್ನು ವ್ಯವಸ್ಥಿತವಾಗಿ ಹುಟ್ಟುಹಾಕಿದವರು ಮೈಸೂರು ಮಹಾರಾಜ ಕಾಲೇಜಿನಲ್ಲಿ ಅರ್ಥಶಾಸ್ತ್ರ ಪ್ರಾಧ್ಯಾಪಕರಾಗಿದ್ದ ಸಿ.ಆರ್. ರೆಡ್ಡಿ. ಈ ಒಕ್ಕೂಟ ಅಬ್ರಾಹ್ಮಣರ ಮುಖವಾಣಿಯಾಗಿ ಕೆಲಸಮಾಡತೊಡಗಿ ಆ ನಂತರ ಸಾಂಸ್ಥಿಕ ರೂಪ ತಳೆಯಿತು. ಇದನ್ನು ಮೈಸೂರು ಸಂಸ್ಥಾನದ ಮೊದಲ ಸಂಘಟಿತ ರಾಜಕೀಯ ಪಕ್ಷವೆಂದು ಕರೆದಿರುವುದರಲ್ಲಿ ಔಚಿತ್ಯವಿದೆ.

ಆದರೆ ಬ್ರಾಹ್ಮಣೇತರರಿಂದ ಕೂಡಿದ ಪ್ರಜಾಮಿತ್ರ ಮಂಡಲಿಯ ಚೇಡಿಕೆಗಳಿಂದ ದಲಿತರಿಗೆ ಹೆಚ್ಚಿನ ಪ್ರಯೋಜನವಾಗಲಿಲ್ಲವೆಂಬ ಅಭಿಪ್ರಾಯವಿದೆ. ಈ ಪಕ್ಷದಲ್ಲಿ ಲಿಂಗಾಯತ, ಒಕ್ಕಲಿಗ, ಮುಸ್ಲಿಂ ಕೋಮುಗಳೇ ಹೆಚ್ಚಿ ಪ್ರಭುತ್ವ ಹೊಂದಿದ್ದನ್ನು, ದಲಿತರು ಮಾತ್ರವಲ್ಲದೆ ಬೇರೆ ಯಾವ ಹಿಂದುಳಿದ ಜಾತಿಗಳಿಗೂ ಪ್ರಾಮುಖ್ಯತೆ ಇರಲಿಲ್ಲವೆನ್ನುವುದನ್ನು ತೋರಿಸಲಾಗುತ್ತದೆ. ಪ್ರಭುತ್ವ ಸಾಧಿಸಿದ್ದ ಹಿಂದುಳಿದ ಕೋಮುಗಳೇ ದಲಿತರನ್ನು ಆರ್ಥಿಕವಾಗಿ ಹೆಚ್ಚು ಶೋಷಿಸುತ್ತಿದ್ದು, ಅಸ್ಪೃಶ್ಯರ ಬಗೆಗೆ ಹೆಚ್ಚಿನ ಸಹಾನುಭೂತಿ ಹೊಂದಿರಲಿಲ್ಲ. ದಲಿತರ ಸಮಸ್ಯೆಗಳ ಬಗೆಗೆ ಈ ನಾಯಕತ್ವ ಮಾತನಾಡಿದರೂ, ಹೆಚ್ಚಾಗಿ ಅದು ಮೊಸಳೆ ಕಣ್ಣೀರಿನಂತಿತ್ತು. ದಲಿತ ಸಮಸ್ಯೆಯನ್ನು ತಮ್ಮ ಹಿತಕ್ಕೋಸ್ಕರವೇ ಹೆಚ್ಚು ಬಳಸಿಕೊಂಡ ರೆನ್ನಬಹುದು (ಚಂದ್ರಶೇಖರ್ : ೧೯೮೩ : ೮೦).

೧೯೧೭ರಲ್ಲಿ ಪ್ರಾರಂಭಗೊಂಡ ಇನ್ನೊಂದು ಸಂಸ್ಥೆಯೆಂದರೆ 'ಮೈಸೂರು ಸಿವಿಕ್ ಅಂಡ್ ಸೋಷಿಯಲ್ ಪ್ರೋಗ್ರೆಸ್ ಅಸೋಸಿಯೇಷನ್'. ಕೆಲವು ಪ್ರಜ್ಞಾವಂತ ನಾಗರಿಕರ ಪ್ರಯತ್ನದ ಫಲವಾಗಿ ಇದು ಅಸ್ತಿತ್ವಕ್ಕೆ ಬಂದಿತು. ಅದೇ ವರ್ಷ ಸೆಪ್ಟಂಬರ್ ತಿಂಗಳಿನಲ್ಲಿ ಮೈಸೂರಿನಲ್ಲಿ ಏರ್ಪಟ್ಟ ಇದರ ಪ್ರಥಮ ಅಧಿವೇಶನದ ಅಧ್ಯಕ್ಷತೆ ವಹಿಸಿದವರು ಯುವರಾಜ ಕಂಠೀರವ ನರಸರಾಜ ಒಡೆಯರ್. ಇದರಲ್ಲಿ ಭಾಗವಹಿಸಿದವರನ್ನು ಗಮನಿಸಿದರೆ, ಹಿಂದುಳಿದ ವರ್ಗಗಳ ಸಂಘಟನಾ ಕಾರ್ಯದಲ್ಲಿ ಸಮಾಜದ ವಿದ್ಯಾವಂತ ವರ್ಗ ವಹಿಸಿದ ಪಾತ್ರ ಮನದಟ್ಟಾಗುತ್ತದೆ. ದಲಿತವರ್ಗದವರ ಏಳಿಗೆಗಾಗಿ ಕೆಲಸ ಮಾಡಲು ರಾಷ್ಟ್ರೀಯ ಕಾಂಗ್ರೆಸ್ ಮಾತ್ರವೇ ಪ್ರಯತ್ನಿಸಿದುದು ಗಮನಕ್ಕೆ ಬರುತ್ತದೆ. ೧೮೮೫ರಲ್ಲೇ ರಾಷ್ಟ್ರೀಯ ಕಾಂಗ್ರೆಸ್ ಅಸ್ತಿತ್ವಕ್ಕೆ ಬಂದಿದ್ದರೂ ೧೯೧೭ರ ವರೆಗೆ ಅದು ಅಸ್ಪೃಶ್ಯರ ಸಮಸ್ಯೆಯನ್ನು ಪ್ರತ್ಯೇಕ ವಿಷಯವಾಗಿ ಪರಿಗಣಿಸಲು ಪ್ರಯತ್ನಿಸಿರಲಿಲ್ಲ. ಆದರೆ ಅದೇ ವರ್ಷ ಕಲ್ಕತ್ತಾದಲ್ಲಿ ಏರ್ಪಟ್ಟ ಕಾಂಗ್ರೆಸ್ ಅಧಿವೇಶನದಲ್ಲಿ ಮೊತ್ತಮೊದಲ ಬಾರಿಗೆ ಸಾಮಾಜಿಕ ಸುಧಾರಣೆಯ ತತ್ವಾನುಸರಣೆ ನಿಟ್ಟಿನಲ್ಲಿ ಅಸ್ಪೃಶ್ಯೋದ್ಧಾರದ ನಿರ್ಣಯ ಅಂಗೀಕರಿಸಿತು. ಈ ವೇಳೆಗೆ ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ ಅಸ್ತಿತ್ವದಲ್ಲಿಲ್ಲದಿದ್ದರೂ ಇಲ್ಲಿಯ ಬ್ರಾಹ್ಮಣೇತರ ಸಂಘಟನೆಗಳ ಮೇಲೆ ಪರೋಕ್ಷ ಪರಿಣಾಮ ಬೀರಿದುದು ಸಹಜ.

ಸರ್ ಎಂ. ವಿಶ್ವೇಶ್ವರಯ್ಯನವರು ಮೈಸೂರಿನ ದಿವಾನರಾಗಿದ್ದುದು ೧೯೧೨ ರಿಂದ ೧೯೧೮ರ ವರೆಗೆ. ಅವರ ವಿರುದ್ಧ ಇರುವ ಆರೋಪವೆಂದರೆ, ಹಿಂದುಳಿದ ವರ್ಗಗಳಿಗೆ ಮೀಸಲಾತಿ ನೀಡುವ ಸಂಬಂಧದಲ್ಲಿ ಅವರು ಸಂಪೂರ್ಣ ವಿರೋಧವಾಗಿದ್ದರೆಂಬುದು. ಆದರೆ ಸಾಮಾಜಿಕ ಮತ್ತು ರಾಜಕೀಯ ಒತ್ತಡಗಳು ಹೆಚ್ಚಿದಾಗ ಅವರು ತಮ್ಮ ನಿರ್ಧಾರ ಬದಲಾಯಿಸಿಕೊಂಡು ಶೇ. ೨೫ರಷ್ಟು ಹುದ್ದೆಗಳನ್ನು ಹಿಂದುಳಿದ ವರ್ಗಗಳಿಗೆ ಮೀಸಲಾತಿ ನೀಡಲು ಒಪ್ಪಿದರು; ಹಾಗೂ ಮಹಾರಾಜರ ಇಂಗಿತದಂತೆ ಶೇ. ೩೩ ರಷ್ಟು ಹುದ್ದೆಗಳನ್ನು ನೀಡಿದರೆಂದು ವ್ಯಕ್ತಪಡುತ್ತದೆ (ಕುಪ್ಪುಸ್ವಾಮಿ : ೧೯೭೮ : ೫೪). ಸಾರ್ವಜನಿಕ ಸೇವೆಯಲ್ಲಿ ಕೇವಲ ಜಾತಿ ಅಥವಾ ಪಂಗಡಗಳ ಆಧಾರದ ಮೇಲೆ ಸರ್ಕಾರಿ ಹುದ್ದೆಗಳನ್ನು ತುಂಬುವುದು ಸರಿಯಲ್ಲ; ಅರ್ಹತೆಯುಳ್ಳವರು ಮಾತ್ರವೇ ಸರ್ಕಾರದ ಉನ್ನತ ಹುದ್ದೆಗಳನ್ನು ಹೊಂದಲು ಸಮರ್ಥರೆಂಬುದು ವಿಶ್ವೇಶ್ವರಯ್ಯನವರ ನಿಲುವಾಗಿದ್ದರೆ, ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರು ಅದಕ್ಕೆ ವಿರುದ್ಧವಾಗಿದ್ದರೆಂಬುದು ಗಮನಾರ್ಹ. ಇದರಿಂದಾದ ಪರಿಣಾಮವಿಷ್ಟೆ:

೧೯೧೮ರಲ್ಲಿ ದಿವಾನ ಹುದ್ದೆಗೆ ವಿಶ್ವೇಶ್ವರಯ್ಯನವರ ರಾಜೀನಾಮೆ. ಹಿಂದುಳಿದ ವರ್ಗಗಳಿಗೆ ನೀಡಬೇಕಿದ್ದ ಮೀಸಲಾತಿ ಪ್ರಶ್ನೆ ಸಂಬಂಧದಲ್ಲಿ ವಿಶ್ವೇಶ್ವರಯ್ಯನವರು ಸೇವೆಯಿಂದ ನಿರ್ಗಮಿಸಲು ನಿರ್ಧರಿಸಿದರೆಂಬುದು ಸರ್ವಸಮ್ಮತ ವಿಷಯ.

ವಿಶ್ವೇಶ್ವರಯ್ಯನವರು ತೆರವು ಮಾಡಿದ ಸ್ಥಾನಕ್ಕೆ ದಿವಾನರಾಗಿ ಬಂದವರು ಸರ್ದಾರ್ ಎಂ. ಕಾಂತರಾಜಾ ಅರಸ್ (೧೯೧೮-೧೯೨೨); ನಾಲ್ವಡಿ ಕೃಷ್ಣರಾಜ ಒಡೆಯರ ಸೋದರ ಮಾವ; ಮೈಸೂರು ಸಂಸ್ಥಾನದ ಮೊತ್ತಮೊದಲ ಬ್ರಾಹ್ಮಣೇತರ ದಿವಾನ್. ಬ್ರಾಹ್ಮಣೇತರ ಚಳವಳಿ ಒಂದು ನಿರ್ದಿಷ್ಟ ಹಂತ ತಲುಪಲು ಮತ್ತು ಅಲ್ಪಸಂಖ್ಯಾತರ ಕುಂದು-ಕೊರತೆಗಳನ್ನು ಪರಿಹರಿಸಲು ಅವಕಾಶವಾದುದು ಇವರ ಕಾಲದಲ್ಲೆ. ಡಾ. ಎಸ್. ಚಂದ್ರಶೇಖರ್ ವ್ಯಾಖ್ಯಾನಿಸುವಂತೆ, ಇವರ ಆಡಳಿತ ಹಿಂದುಳಿದ ವರ್ಗಗಳ ಪಾಲಿಗೆ ಒಂದು ಪರ್ವಕಾಲವೆನ್ನಬಹುದು. ಕಾಂತರಾಜರು ಜಾರಿಗೊಳಿಸಿದ ಸುಧಾರಣೆಗಳಿಂದ ಹೆಚ್ಚು ಹಿಂದುಳಿದವರು ಸರ್ಕಾರಿ ಸೇವೆಗೆ ಮತ್ತು ವಿದ್ಯಾಭ್ಯಾಸಕ್ಕೆ ತೊಡಗಲು ಸಾಧ್ಯವಾಯಿತು. ಅವರ ಕೂಗಿಗೆ ಚಾಲನೆ ಮತ್ತು ಒತ್ತನ್ನು ಕೊಟ್ಟವರು ಕಾಂತರಾಜರೇ. ಇದರಿಂದ ರಾಜಕೀಯ, ಬಹುವರ್ಷಗಳ ಕೋಮು ವೈಷಮ್ಯದಿಂದ ಕಲುಷಿತವಾಯಿತಾದರೂ ಬಹು ಜನರ ಹಿತದೃಷ್ಟಿಯಿಂದ ಈ ಬೆಳವಣಿಗೆ ಚಾರಿತ್ರಿಕ ಅವಶ್ಯವಾಗಿತ್ತು (ಚಂದ್ರಶೇಖರ್ : ೧೯೮೩: ೬೦). ಸರ್ ಲೆಸ್ಲೀ ಮಿಲ್ಲರ್ ಸಮಿತಿ ಸಹಾ ೧೯೧೮ರಲ್ಲಿ ನೇಮಿಸಲ್ಪಟ್ಟಿತು. ಮುಖ್ಯವಾಗಿ, ಮಿಲ್ಲರ್ ಸಮಿತಿ ನೇಮಕಕ್ಕೆ ಪ್ರಜಾಮಿತ್ರ ಮಂಡಲಿಯು ಮಹಾರಾಜರಿಗೆ ಸಲ್ಲಿಸಿದ ಜ್ಞಾಪನಪತ್ರ ಕಾರಣ. ಗ್ರಾಮಾಂತರ ಪ್ರದೇಶಗಳ ವಿದ್ಯಾರ್ಥಿಗಳು ಬ್ರಾಹ್ಮಣ ವಿದ್ಯಾರ್ಥಿಗಳೊಂದಿಗೆ ಸ್ಪರ್ಧಿಸಲು ಅಸಮರ್ಥರಾಗಿರುವುದು; ಬ್ರಾಹ್ಮಣರಿಂದ ತುಂಬಿ ಹೋಗಿರುವ ಅಧಿಕಾರವರ್ಗದಿಂದ ಬ್ರಾಹ್ಮಣೇತರರ ಹಿತಕ್ಕೆ ಧಕ್ಕೆ ಒದಗಿರುವುದು; ಬ್ರಾಹ್ಮಣೇತರರಿಗೆ ಹೆಚ್ಚಿನ ನೌಕರಿ ಕಲ್ಪಿಸುವುದರೊಡನೆ ಸಂಸ್ಥಾನದ ಹೊರಗಿನಿಂದ ಬ್ರಾಹ್ಮಣೇತರ ವಿದ್ಯಾವಂತರನ್ನು ಕರೆಸುವುದು; ಬ್ರಾಹ್ಮಣೇತರರಿಗೆ ವಿದ್ಯಾರ್ಹತೆ ಸಡಿಲಿಸಿ ಒಂದೇ ವರ್ಗದ ಏಕಸ್ವಾಮ್ಯವನ್ನು ಆಡಳಿತದಲ್ಲಿ ತಪ್ಪಿಸುವುದು-ಇವು ಪ್ರಜಾಮಿತ್ರಮಂಡಲಿ ಪ್ರತಿನಿಧಿಗಳು ಸಲ್ಲಿಸಿದ ಬೇಡಿಕೆಗಳು. ಇದನ್ನು ಸಹಾನುಭೂತಿಯಿಂದ ಪರಿಶೀಲಿಸಲು ಭರವಸೆ ನೀಡಿದ ಕೃಷ್ಣರಾಜ ಒಡೆಯರು, ೧೯೧೮ ಆಗಸ್ಟ್ ೪ ರಂದು ಸಮಿತಿಯೊಂದನ್ನು ರಚಿಸಿದರು. ಇದರ ಅಧ್ಯಕ್ಷರಾಗಿ ನೇಮಕಗೊಂಡವರು ರಾಜ್ಯದ ಮುಖ್ಯ ನ್ಯಾಯಾಧೀಶರಾಗಿದ್ದ ಸರ್ ಲೆಸ್ಲಿ ಮಿಲ್ಲರ್. ಆ ನಂತರ ಈ ಸಮಿತಿ 'ಮಿಲ್ಲರ್ ಸಮಿತಿ'ಯೆಂದು ಪ್ರಸಿದ್ಧಿಪಡೆಯಿತು. ಈ ಸಮಿತಿ ತನ್ನ ವರದಿ ಸಲ್ಲಿಸಿದುದು ೧೯೧೯ ಜುಲೈನಲ್ಲಿ. (ಈ ವರದಿ ಕುರಿತು ಮುಂದಿನ ಅಧ್ಯಾಯದಲ್ಲಿ ಪ್ರಸ್ತಾಪಿಸಿದೆ).

ಎರಡನೇ ಪ್ರಮುಖ ಹಂತವೆಂದರೆ, ೧೯೩೦ರಲ್ಲಾದ ಪ್ರಜಾಪಕ್ಷದ ಉದಯ. ಪ್ರಜಾಮಿತ್ರ ಮಂಡಲಿ ವಿಸರ್ಜನೆಯಾದಾಗ ಹುಟ್ಟಿಕೊಂಡುದು ಈ ಪಕ್ಷ. ದುರ್ಬಲ ವರ್ಗದವರ ಹಾಗೂ ಅಸ್ಪೃಶ್ಯರ ಹಿತಕಾಯಲು ರಾಜಕೀಯ ಸಂಘಟನೆಯಾಗಿ ಬೆಳೆದ ಈ ಪಕ್ಷ, ೧೯೩೪ರಲ್ಲಿ ಪ್ರಜಾಸಂಯುಕ್ತ ಪಕ್ಷವಾಗಿ ವಿಭಜನೆಗೊಂಡಿತು. ಇದು ಅಂತಿಮವಾಗಿ ೧೯೩೭ರಲ್ಲಿ ಮೈಸೂರು ಕಾಂಗ್ರೆಸ್‌ನಲ್ಲಿ ಲೀನವಾಯಿತು. ಹಿಂದುಳಿದ ವರ್ಗಗಳ ಬೇಡಿಕೆಗಳು ಈಡೇರುವ ಸಂದರ್ಭಗಳು ಒದಗುತ್ತಿರುವಂತೆಯೇ ತಮ್ಮ ಏಳಿಗೆಗಾಗಿ ಬೇರೆ ತೆರನಲ್ಲಿ

ಸಂಘಟಿತರಾಗುವ ಅಗತ್ಯವನ್ನು ಮನಗಂಡ ಈ ವರ್ಗಗಳ ಮುಖಂಡರು ರಾಷ್ಟ್ರೀಯ ಕಾಂಗ್ರೆಸ್ ಸೇರಿಕೊಂಡರು. ಈಗಾಗಲೇ ಗಮನಿಸಿದಂತೆ, ಕಾಂಗ್ರೆಸ್ ಸಂಸ್ಥೆ ದಲಿತೋದ್ಧಾರದ ಕಾರ್ಯಕ್ರಮವನ್ನು ಪ್ರಮುಖವಾಗಿ ಹಮ್ಮಿಕೊಳ್ಳಲೆತ್ನಿಸಿತು. ನಿಮ್ನವರ್ಗ ಹಾಗೂ ಆದಿವಾಸಿ ಜನಾಂಗಗಳ ಸಮಿತಿ ೧೯೩೦ರಲ್ಲಿ ಮಾಡಿದ ಶಿಫಾರಸಿನ ಪ್ರಕಾರ, ಹಿಂದುಳಿದ ವರ್ಗಗಳ ಇಲಾಖೆಯು ೧೯೩೧ರಲ್ಲಿ ಬೆಳಗಾವಿ ಪ್ರದೇಶದಲ್ಲಿ ಸ್ಥಾಪಿಸಲ್ಪಟ್ಟಿತು. ಹಿಂದುಳಿದ ಜನಾಂಗಗಳ ವರ್ಗೀಕರಣವನ್ನು ಈ ಸಮಿತಿ ಶಿಫಾರಸು ಮಾಡಿತು. ಇದನ್ನು ಅಂಗೀಕರಿಸಿದ ಸರ್ಕಾರ, ಹಿಂದುಳಿದ ವರ್ಗಕ್ಕೆ ಪರಿಶಿಷ್ಟ ಜಾತಿಗಳೆನಿಸಿದ ಅಸ್ಪೃಶ್ಯರು, ಪರಿಶಿಷ್ಟ ಬುಡಕಟ್ಟುಗಳೆನಿಸಿದ ಆದಿವಾಸಿ ಮತ್ತು ಗುಡ್ಡಗಾಡಿನ ಜನರು ಹಾಗೂ ಇತರ ಹಿಂದುಳಿದ ವರ್ಗಗಳೆಂದು ಪರಿಗಣಿಸಲಾದ ಇತರ ಜನಾಂಗಗಳನ್ನು ಸೇರಿಸಿತು. ಇಷ್ಟಾದರೂ ೧೯೪೦ರ ವರೆಗೆ ಯಾವ ದಲಿತನೂ ಬ್ರಾಹ್ಮಣ ವರ್ಗದ ನಾಯಕತ್ವದ ಕಾಂಗ್ರೆಸ್ ಪಕ್ಷದಲ್ಲಿ ತಾಲ್ಲೂಕು ಮಟ್ಟದ ನಾಯಕತ್ವಕ್ಕೂ ಏರಲಿಲ್ಲವೆನ್ನುವುದನ್ನು ಕಡೆಗಣಿಸುವಂತಿಲ್ಲ.

ಮೈಸೂರು ಸಂಸ್ಥಾನದಾಚೆಯ ಪ್ರದೇಶಗಳಲ್ಲೂ ಹಿಂದುಳಿದ ಮತ್ತು ನಿಮ್ನವರ್ಗಗಳ ಸುಧಾರಣೆಗೆ ಮತ್ತು ಸಂಘಟನೆಗೆ ಪ್ರಯತ್ನಗಳು ನಡೆದೇ ಇದ್ದವು. ಮದರಾಸಿನಲ್ಲಿ ಸ್ಥಾಪಿಸಲ್ಪಟ್ಟ ಜಸ್ಟಿಸ್ ಪಕ್ಷವು ದಕ್ಷಿಣಕನ್ನಡ ಮತ್ತು ಬಳ್ಳಾರಿ ಪ್ರದೇಶಗಳಲ್ಲಿಯೂ ತನ್ನ ಪ್ರಭಾವ ಬೀರಿದ್ದಿತು. ೧೯೦೮ ರಲ್ಲಿ ದಕ್ಷಿಣಕನ್ನಡ ಜಿಲ್ಲೆಯ ಬಂಟರು ಹಾಗೂ ೧೯೧೦ ರಲ್ಲಿ ಮೊಗವೀರರು ತಮ್ಮ ತಮ್ಮ ಜಾತಿಗಳವರನ್ನು ಸಂಘಟಿಸುವ ಕಾರ್ಯವನ್ನಾರಂಭಿಸಿದರು. ಬಂಟರು ತಮ್ಮ ಜಾತಿಯ ವಿದ್ಯಾರ್ಥಿಗಳ ಪ್ರಗತಿಗಾಗಿ ಮಂಗಳೂರಿನಲ್ಲಿ ವಿದ್ಯಾರ್ಥಿನಿಲಯ ವನ್ನಾರಂಭಿಸಿದರು. ಕುದ್ಮುಲ್ ರಂಗನಾಥರಾಯರಂಥ ಬ್ರಹ್ಮಸಮಾಜಿಗಳು ವಿಧವಾ ವಿವಾಹ, ಮಹಿಳೆಯರಿಗೆ ಶಿಕ್ಷಣ ಇತ್ಯಾದಿಗಳ ನಿಟ್ಟಿನಲ್ಲಿ ಸುಧಾರಣಾ ಕಾರ್ಯ ಕೈಗೊಂಡರು. ನಿಮ್ನವರ್ಗದವರ ಪರವಾಗಿ ದನಿಯೆತ್ತುವ ಕಾರ್ಯದಲ್ಲಿ ಇವರು ವಹಿಸಿದ ಪಾತ್ರ ಮಹತ್ವದ್ದು. ಕುದ್ಮುಲ್ ರಂಗನಾಥರಾಯರು ೧೯೦೬ರಲ್ಲಿ ಹುಟ್ಟಿಕೊಂಡ 'ಡಿಪ್ರೆಸ್ಡ್ ಕ್ಲಾಸಸ್ ಮಿಷನ್ ಸೊಸೈಟಿ'ಯೊಂದಿಗೆ ಸಂಪರ್ಕವಿರಿಸಿಕೊಂಡಿದ್ದ ಬಗೆಗೆ ಹೇಳಲಾಗುತ್ತದೆ. ೧೯೨೭ರಲ್ಲಿ ಗಾಂಧಿಯವರು ಮಂಗಳೂರಿಗೆ ಬಂದಾಗ ಇವರ ಬಗೆಗೆ ಮೆಚ್ಚುಗೆ ವ್ಯಕ್ತಪಡಿಸಿದುದುಂಟು. ಈ ಪ್ರದೇಶದಲ್ಲಿ ತುಳಿತಕ್ಕೊಳಗಾದವರ ಪರ ಶ್ರಮಿಸಿದವರ ಪೈಕಿ ಕಾರ್ನಾಡ್ ಸದಾಶಿವರಾಯರೂ ಒಬ್ಬರು. ೧೯೨೩ರಲ್ಲಿ ಮದರಾಸು ಸರ್ಕಾರ ದಕ್ಷಿಣಕನ್ನಡ ಜಿಲ್ಲೆಯ ನಿಮ್ನ ಮತ್ತು ತುಳಿತಕ್ಕೊಳಗಾದ ಇತರ ವರ್ಗಗಳವರಿಗಾಗಿ ಶಾಲೆಗಳನ್ನು ತೆರೆಯಿತು; ಜಮೀನನ್ನು ಹಂಚಿತು. ೧೯೪೯ರಲ್ಲಿ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳವರ ಸುಧಾರಣೆಗೆಂದು ಹರಿಜನ ಅಭಿವೃದ್ಧಿ ಇಲಾಖೆಯನ್ನೆ ಪ್ರತ್ಯೇಕವಾಗಿ ತೆರೆಯಿತು.

ಗಾಂಧಿಯವರು ಕರ್ನಾಟಕದಲ್ಲಿ ಆರಂಭಿಸಿದ ಹರಿಜನ ಸೇವಕ ಸಂಘ; ೧೯೩೪ ಮತ್ತು ೧೯೩೬ರಲ್ಲಿ ಅಸ್ಪೃಶ್ಯತೆ ವಿರುದ್ಧ ಅವರು ಕೈಗೊಂಡ ಪ್ರಚಾರ; ವೀರಣ್ಣಗೌಡ ಪಾಟೀಲರು ಹರಿಜನ ಸೇವಕ ಸಂಘದ ಕರ್ನಾಟಕ ಶಾಖೆಯ ಪ್ರಥಮ ಅಧ್ಯಕ್ಷರಾದುದು; ಈ ಸಂಘ ದಲಿತರಿಗೆ ವೃತ್ತಿ ತರಬೇತಿ ಕೇಂದ್ರಗಳು, ನಿರ್ಗತಿಕರಿಗೆ ವಸತಿ ಹಾಗೂ ವಿದ್ಯಾರ್ಥಿಗಳಿಗೆ ವಸತಿನಿಲಯಗಳನ್ನು ಆರಂಭಿಸಿದುದು - ಇವು ಕೆಲವು ಸಾಧನೆಗಳು. ಸ್ವತಂತ್ರ ಭಾರತದಲ್ಲಿ ಸಾಮಾಜಿಕವಾಗಿ ದುರ್ಬಲಗೊಂಡ ವರ್ಗಗಳ ಅಭಿವೃದ್ಧಿಗೆ ಹೊಸ ಆಯಾಮ ಒದಗಿಸಿದುದು ೧೯೫೩ರಲ್ಲಿ ನೇಮಕಗೊಂಡ ಕಾಕಾಸಾಹೇಬ ಕಾಲೇಲ್ಕರ್

ಆಯೋಗ ಮಾಡಿದ ಶಿಫಾರಸುಗಳಿಂದ. (ಈ ಆಯೋಗ ಕುರಿತು ೫ನೇ ಅಧ್ಯಾಯದಲ್ಲಿ ಪ್ರಸ್ತಾಪಿಸಿದೆ). ಕರ್ನಾಟಕ ಸರ್ಕಾರ ೧೯೫೮ರಲ್ಲಿ ಹೊರಡಿಸಿದ ಆಜ್ಞೆಯಂತೆ, ಹಿಂದುಳಿದ ವರ್ಗಗಳು, ಪರಿಶಿಷ್ಟ ಜಾತಿ ಹಾಗೂ ಬುಡಕಟ್ಟುಗಳ ಜನವರ್ಗಗಳಿಗೆ ಶಿಕ್ಷಣ ಸಂಸ್ಥೆಗಳಲ್ಲಿ ಶೇ. ೭೫ರಷ್ಟು ಸ್ಥಾನಗಳನ್ನು ಮೀಸಲಿಡಬೇಕೆಂದಾಯಿತು. ನ್ಯಾಯಾಲಯ ಇದನ್ನು ಅನೂರ್ಜಿತಗೊಳಿಸಿದ್ದರಿಂದ ೧೯೫೯ರಲ್ಲಿ ಇನ್ನೊಂದು ಆಜ್ಞೆ ಹೊರಡಿಸಿ, ವಿದ್ಯಾಸಂಸ್ಥೆಗಳಲ್ಲಿ ಹಿಂದುಳಿದವರಿಗೆ ಶೇ. ೬೫ರಷ್ಟು ಮೀಸಲಾತಿ ಇರುವಂತೆ ಸೂಚಿಸಿತು. ಈ ಆಜ್ಞೆಯೂ ಉಚ್ಚ ನ್ಯಾಯಾಲಯದಿಂದ ಅನೂರ್ಜಿತಗೊಂಡಿತು

ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ನಂತರ ಹಿಂದುಳಿದ ಮತ್ತು ಪರಿಶಿಷ್ಟ ಜಾತಿ ಮತ್ತು ಪಂಗಡಗಳವರ ಅಭಿವೃದ್ಧಿ ವಿಚಾರದಲ್ಲಿ ಮಹತ್ತರ ಬದಲಾವಣೆಗಳು ಕಂಡುಬಂದುದು ಸಹಜ. ಹಿಂದುಳಿದ ವರ್ಗಗಳು ತಮ್ಮ ತಮ್ಮಲ್ಲಿಯ ಸಂಘರ್ಷ ಮತ್ತು ಶೋಷಣೆಗಳನ್ನು ಅರ್ಥಮಾಡಿಕೊಳ್ಳತೊಡಗಿದವು. ೧೯೩೦ರಲ್ಲಿ ಮೈಸೂರಿನಲ್ಲಿ ಪ್ರಜಾಪಕ್ಷ ಸ್ಥಾಪನೆಯಾದಾಗ ಎರಡು ಪ್ರಮುಖ ಜಾತಿಗಳ ಮುಖಂಡರು ಹೆಚ್ಚು ಪ್ರಚಾರಕ್ಕೆ ಬಂದುದನ್ನು ಕಾಣುತ್ತೇವೆ. ಲಿಂಗಾಯಿತ ಮತ್ತು ಒಕ್ಕಲಿಗ - ಇವೇ ಈ ಎರಡು ಪ್ರಬಲ ಜಾತಿಗಳು. ಸ್ವಾತಂತ್ರ್ಯಾನಂತರದ ಮೈಸೂರು ರಾಜಕಾರಣ ಮುಖ್ಯವಾಗಿ ಒಕ್ಕಲಿಗರ ಹಿಡಿತದಲ್ಲಿದ್ದು, ಅದರ ನಂತರದ ಸ್ಥಾನದಲ್ಲಿ ಲಿಂಗಾಯಿತರಿದ್ದುದು ಸ್ಪಷ್ಟ. ಈ ಪರಿಸ್ಥಿತಿ ಕರ್ನಾಟಕ ಏಕೀಕರಣದವರೆಗೆ, ಅಂದರೆ ೧೯೫೬ರ ವರೆಗೆ ಮುಂದುವರೆದುಕೊಂಡು ಬಂದಿತಲ್ಲದೆ, ಬದಲಾದ ರಾಜಕೀಯ ದೃಷ್ಟಿ - ಧೋರಣೆಗಳಿಗನುಗುಣವಾಗಿ ಹಿಂದುಳಿದ ಇತರ ವರ್ಗಗಳು ಅಥವಾ ಬ್ರಾಹ್ಮಣೇತರ ಜಾತಿಗಳು ಎಚ್ಚೆತ್ತುಕೊಳ್ಳಲಾರಂಭಿಸಿದವು. ವಾಸ್ತವದಲ್ಲಿ, ಬ್ರಾಹ್ಮಣೇತರ ಜಾತಿಗಳು ತಾವು ಆರಂಭಿಸಿದ ಚಳವಳಿಯಲ್ಲಿ ಸಮಾಜದ ಎಲ್ಲಾ ಜಾತಿಸಮುದಾಯಗಳನ್ನೂ ಒಳಗೊಂಡಿದ್ದುವೇ? ಈ ಹಂತದಲ್ಲಿ ಚರಿತ್ರಕಾರರು ಗುರುತಿಸುವ ಮುಖ್ಯ ಅಂಶವೆಂದರೆ, ರಾಜ್ಯದ ಶೇ. ೯೫ ಜನಸಂಖ್ಯೆಯನ್ನು ಪ್ರತಿನಿಧಿಸುತ್ತಿದ್ದೇವೆ ಎಂದು ಹೇಳಿಕೊಳ್ಳಲು ದಲಿತರನ್ನು ಜೊತೆಗೆ ಸೇರಿಸಿಕೊಂಡು ವಾಸ್ತವದಲ್ಲಿ ಪಂಚಮ ಅಭ್ಯುದಯಕ್ಕಾಗಿ ಬ್ರಾಹ್ಮಣೇತರ ಚಳವಳಿ ಹೆಚ್ಚು ಶ್ರಮಿಸದೆ ನಾಯಕಗಣ ತಮ್ಮ ಕೋಮುಗಳ ಹಿತ ಸಾಧಿಸುವುದರಲ್ಲೆ ಹೆಚ್ಚು ಆಸಕ್ತಿ ವಹಿಸಿದ್ದರು (ಚಂದ್ರಶೇಖರ್ : ೧೯೮೩ : ೮೧). ಏಕೀಕೃತ ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಲಿಂಗಾಯಿತರು ೧೫ ಪ್ರತಿಶತವಿದ್ದರೆ, ಒಕ್ಕಲಿಗರು ೧೧ ಪ್ರತಿಶತವಿರುವುದು ಸಿದ್ಧಗೊಂಡು, ರಾಜಕೀಯ ಆಕರ್ಷಣೆಯ ಕೇಂದ್ರ ಮೈಸೂರಿನಿಂದ ಮುಂಬಯಿ ಕರ್ನಾಟಕದ ಕಡೆಗೆ ವಾಲಿತೆಂಬುದು ಗಮನಾರ್ಹ. ಏಕೀಕೃತ ಕರ್ನಾಟಕದಲ್ಲಿ ಮೀಸಲಾತಿ ನೀತಿ ಇಡೀ ರಾಜ್ಯಕ್ಕೆ ಅನ್ವಯಿಸಿತಲ್ಲದೆ, ಹೊಸ ಹೊಸ ಸಮಸ್ಯೆಗಳನ್ನು ಅದು ಎದುರಿಸುವಂತಾಯಿತು.

❑ ❑

# ೩. ಆಯೋಗಗಳ ರಚನೆ ಮತ್ತು ವರದಿಗಳ ಮಂಡನೆ

ಹಿಂದುಳಿದ ವರ್ಗಗಳ ಬಲಸಂವರ್ಧನೆಗೆ ಹಾಗೂ ದಲಿತ ಸಮುದಾಯಗಳ ಪುರೋಭಿವೃದ್ಧಿಗೆ ಸಂಬಂಧಿಸಿದಂತೆ ಕಾಲಾಕಾಲಕ್ಕೆ ಸರ್ಕಾರಗಳು ರಚಿಸಿದ ಆಯೋಗಗಳು ಜನಪರವಾದ ಶಿಫಾರಸುಗಳನ್ನು ಮಾಡುತ್ತಲೇ ಬಂದಿವೆ. ಸ್ವಾತಂತ್ರ್ಯ ಪೂರ್ವದಲ್ಲಿ ಮತ್ತು ನಂತರದಲ್ಲಿ ಕರ್ನಾಟಕದ ಹಿಂದುಳಿದ ವರ್ಗಗಳ ಸಂಘಟನೆ ಕುರಿತಂತೆ ಆಗಿನ ರಾಜ್ಯ ಸರ್ಕಾರಗಳು ಹಲವಾರು ಕ್ರಮಗಳನ್ನು ಕೈಗೊಂಡುದು ದಿಟ. ೧೯೦೫ ರಿಂದ ೧೯೫೧ರ ವರೆಗೆ ಮೈಸೂರು ಸಂಸ್ಥಾನ ಈ ದಿಸೆಯಲ್ಲಿ ಕೆಲಸ ಮಾಡಿದ್ದರೆ, ೧೯೬೦ರಿಂದೀಚೆಗೆ, ಅಂದರೆ ಏಕೀಕರಣೋತ್ತರ ಕರ್ನಾಟಕದಲ್ಲಿ ಪ್ರಜಾಸರ್ಕಾರಗಳು ಒಟ್ಟು ನಾಲ್ಕು ಆಯೋಗಗಳನ್ನು (೧೯೬೦-೧೯೯೦) ರಚಿಸಿ ಹಿಂದುಳಿದ ವರ್ಗಗಳ ಶ್ರೇಯೋಭಿವೃದ್ಧಿಗೆ ಪ್ರಯತ್ನ ನಡೆಸಿದವು. ಅಂಥಾ ಶಿಫಾರಸುಗಳನ್ನು ಅನುಷ್ಠಾನಗೊಳಿಸುವ ಪ್ರಯತ್ನವೂ ನಡೆಯುತ್ತಾ ಬಂದಿದೆ. ವಿವಿಧ ವರ್ಗಗಳ ಹಿತಾಸಕ್ತಿಯನ್ನು ಇವು ಗಮನದಲ್ಲಿರಿಸಿ ಕೊಂಡಿದ್ದರೂ ಅವಕ್ಕೆ ವಿರೋಧವೂ ವ್ಯಕ್ತವಾಗಿರುವುದು ಕಂಡುಬರುತ್ತದೆ. ಇದಕ್ಕೆ ಇರುವ ಕಾರಣಗಳು ಹಲವಾರು. ಅಂಥಾ 'ವಿಶಿಷ್ಟ ಕಾರಣಗಳನ್ನು' ನಮ್ಮ ಚರಿತ್ರೆ ವಿವರಿಸಲೆತ್ನಿಸುತ್ತದೆ. ಭಾರತದ ಗತ ಮತ್ತು ಪ್ರಸಕ್ತ ಪರಿಸ್ಥಿತಿಗಳನ್ನು ಅವಲೋಕಿಸಿದರೆ, ಸಾಮಾಜಿಕ ಸಮಸ್ಯೆಗೂ ಮೀರಿದ ಆರ್ಥಿಕ ಮತ್ತು ಶೈಕ್ಷಣಿಕ ಸಮಸ್ಯೆಗಳು ಎದುರಾಗುತ್ತವೆ. ಇವುಗಳ ಶಾಶ್ವತ ಪರಿಹಾರ ರಾಜಕೀಯ ಶಕ್ತಿಯೊಂದರಿಂದಲೇ ಸಾಧ್ಯ; ಜಾಗೃತ ಸ್ಥಿತಿ ತಲುಪಿದ ಜನಸಮುದಾಯಗಳು ಈ ಮೂಲಕ ತಮ್ಮ ಹಕ್ಕುಬಾಧ್ಯತೆಗಳನ್ನು ಸಮರ್ಥವಾಗಿ ಸಾಧಿಸಬಲ್ಲವೆಂಬ ಅಭಿಪ್ರಾಯವೂ ಇದೆ. ಈಚಿನ ದಶಕಗಳಲ್ಲಿ ಕರ್ನಾಟಕದಲ್ಲಿ ನಡೆದ ವಿದ್ಯಮಾನಗಳೂ ಇದನ್ನೆ ಸಮರ್ಥಿಸುವಂತಿವೆ. ಶಿಕ್ಷಣ ಮತ್ತು ಸಾರ್ವಜನಿಕ ಕ್ಷೇತ್ರಗಳಲ್ಲಿಯ ಹುದ್ದೆಗಳ ಮೀಸಲಾತಿಯಿಂದಲೇ ಹಿಂದುಳಿದ ವರ್ಗಗಳ ಮತ್ತು ದಲಿತರ ಅಭಿವೃದ್ಧಿ ಸಾಧ್ಯವೆನ್ನುವುದಾದರೆ, ರಾಜಕೀಯ ಶಕ್ತಿ ಗಳಿಕೆಯಿಂದ ಮಾತ್ರವೇ ಅದನ್ನು ಸಂಪೂರ್ಣ ಈಡೇರಿಸಿಕೊಳ್ಳಬಹುದೆಂಬ ಅರಿವು ಈ ಎಲ್ಲ ಸಮುದಾಯಗಳಲ್ಲೂ ಮನೆಮಾಡಿ ಕೊಂಡಂತಿದೆ.

ಚರಿತ್ರೆಯಾರಂಭ ಕಾಲದಿಂದಲೂ ವರ್ಗ ಮತ್ತು ಜಾತಿ ಸಂಘರ್ಷಗಳು ನಡೆಯುತ್ತಲೇ ಬಂದುದನ್ನು ಈಗಾಗಲೇ ಗಮನಿಸಲಾಗಿದೆ. ರಾಜಪ್ರಭುತ್ವ ಮರೆಯಾಗಿ ಪ್ರಜಾಪ್ರಭುತ್ವ ನೆಲೆಗೊಂಡಿದ್ದರೂ ಸಂಘರ್ಷಗಳು ಕೊನೆಗಂಡಿಲ್ಲ. ಆದರೆ ಇಂಥಾ ಸಂಘರ್ಷಗಳು ಹೊಸ ಸ್ವರೂಪ ಪಡೆದು ಮತ್ತೆ ವ್ಯವಸ್ಥಿತವಾಗಿ ನಡೆಯತೊಡಗಿರುವುದು ಗಮನಾರ್ಹ. ಸ್ವಾತಂತ್ರ್ಯ ಪೂರ್ವಕಾಲದ ಅಂತ್ಯೋದಯ ತತ್ವವನ್ನು ಸಾಕಾರಗೊಳಿಸುವ ನಿಟ್ಟಿನಲ್ಲಿ ಸರ್ಕಾರಗಳೂ ಯಥಾಶಕ್ತಿ ಶ್ರಮಿಸಿವೆ; ಶ್ರಮಿಸುತ್ತಲಿವೆ. ಜನಪರವಾದ ಪ್ರಜಾಸತ್ತೆಗಳು ಕ್ರಿಯಾಶೀಲ

ವಾದಾಗಲೆಲ್ಲ ಜೀವಪರವಾದ ಕಾನೂನು - ಆಜ್ಞೆ - ಆದೇಶಗಳು ಜಾರಿಗೆ ಬಂದಿವೆ. ಅಂಥವನ್ನು ವಿರೋಧಿಸುವಲ್ಲಿ ಅಷ್ಟೆ ವ್ಯವಸ್ಥಿತ ಪ್ರಯತ್ನಗಳೂ ನಡೆದಿವೆ. ಭಾರತದ ಪ್ರಾಚೀನ ಮತ್ತು ಮಧ್ಯಕಾಲೀನ ಚಾರಿತ್ರಿಕ ಮತ್ತು ಸಾಮಾಜಿಕ ಸಂದರ್ಭ-ಸನ್ನಿವೇಶಗಳನ್ನು ಪುನರುಜ್ಜೀವಗೊಳಿಸುವ ಉದ್ದೇಶಗಳು ಅವುಗಳಲ್ಲಿವೆ. ಇಲ್ಲಿ ಪ್ರಸ್ತಾಪಿಸಿರುವ ವಿವಿಧ ಆಯೋಗಗಳು ಮಂಡಿಸಿರುವ ಅಂಶಗಳಿಂದ ಇದು ಇನ್ನಷ್ಟು ದೃಢಪಡುತ್ತದೆ.

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಈವರೆಗೆ ನೇಮಿಸಿರುವ ಆಯೋಗಗಳು ಮತ್ತು ಅವು ಸಲ್ಲಿಸಿದ ವರದಿಗಳನ್ನು ಕುರಿತು ಇಲ್ಲಿ ಪ್ರಸ್ತಾಪಿಸಿದೆ. ಅಂದರೆ ಅಖಿಲ ಭಾರತ ಮತ್ತು ಅಖಿಲ ಕರ್ನಾಟಕ ಮಟ್ಟದ ಆಯೋಗಗಳ ವರದಿಗಳ ಸ್ಥೂಲನೋಟ ಇಲ್ಲಿ ದೊರಕುತ್ತದೆ. ಹಾಗೆಯೇ, ಕರ್ನಾಟಕ ಕುರಿತಂತೆ ರಾಜಪ್ರಭುತ್ವ ಅವಧಿಯ ಮೈಸೂರು ರಾಜ್ಯ ಸರ್ಕಾರ ನೇಮಿಸಿದ ಆಯೋಗದಿಂದ ಪ್ರಾರಂಭಿಸಿ ಏಕೀಕರಣೋತ್ತರ ಕರ್ನಾಟಕದ ವಿವಿಧ ಆಯೋಗಗಳವರೆಗೆ ಇಲ್ಲಿ ಅವಲೋಕಿಸಿದೆ. ಹಿಂದುಳಿದ ವರ್ಗಗಳು ಮತ್ತು ದಲಿತ ಸಮುದಾಯಗಳಿಗೆ ಸಂಬಂಧಿಸಿದಂತೆ ಈ ಶತಮಾನದ ಆರಂಭದಿಂದಲೂ ಇದ್ದ ಎಲ್ಲ ದೃಷ್ಟಿ-ಧೋರಣೆಗಳನ್ನು ಒಂದೆಡೆ ಸಂಗ್ರಹಿಸಿ ಅವುಗಳನ್ನು ಪರಾಮರ್ಶಿಸುವುದೇ ಇಲ್ಲಿಯ ಉದ್ದೇಶ. ರಾಜ್ಯ ಸರ್ಕಾರ ನೇಮಿಸಿದ ಆಯೋಗಗಳ ವರದಿಗಳನ್ನು ಮೊದಲು ಪರಿಶೀಲಿಸಿದ ನಂತರ ಕೇಂದ್ರ ಸರ್ಕಾರ ನೇಮಿಸಿದ ಆಯೋಗಗಳ ಬಗೆಗೂ ಗಮನಿಸಬಹುದಾಗಿದೆ.

### ೩.೧. ಸರ್ ಲೆಸ್ಲೀ ಮಿಲ್ಲರ್ ಸಮಿತಿ (೧೯೧೮)

'ಮಿಲ್ಲರ್ ಆಯೋಗ' ವೆಂತಲೇ ಪ್ರಸಿದ್ಧಿ ಪಡೆದ ಸರ್ ಲೆಸ್ಲೀ ಸಿ. ಮಿಲ್ಲರ್ ಸಮಿತಿ ಅಸ್ತಿತ್ವಕ್ಕೆ ಬಂದುದು ೧೯೧೮ ಆಗಸ್ಟ್ ತಿಂಗಳಲ್ಲಿ. ಅದೇ ವರ್ಷ ಜೂನ್ ತಿಂಗಳಲ್ಲಿ ಪ್ರಜಾಮಿತ್ರ ಮಂಡಲಿ ಪ್ರತಿನಿಧಿಗಳ ನಿಯೋಗ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರನ್ನು ಭೇಟಿ ಮಾಡಿ ಸಲ್ಲಿಸಿದ 'ಜ್ಞಾಪನಪತ್ರ'ದ ಫಲವಾಗಿ ಈ ಆಯೋಗ ರಚನೆಗೊಂಡಿತು. ರಾಜ್ಯ ಮುಖ್ಯ ನ್ಯಾಯಾಲಯದ ಪ್ರಮುಖ ನ್ಯಾಯಾಧೀಶ ಸರ್ ಲೆಸ್ಲೀ ಮಿಲ್ಲರ್ ಅಧ್ಯಕ್ಷರಾಗಿದ್ದ ಈ ಆಯೋಗದ ಇತರ ಗಣ್ಯ ಸದಸ್ಯರೆಂದರೆ ಶ್ರೀಕಂಠೇಶ್ವರ ಅಯ್ಯರ್, ಎಂ. ಬಸವಯ್ಯ, ಗುಲಾಮ್ ಅಹಮ್ಮದ್ ಕಲಾಮಿ, ಎಂ. ಮುತ್ತಣ್ಣ ಮತ್ತು ರಂಗೈಯಂಗಾರ್.

ಮಿಲ್ಲರ್ ಸಮಿತಿ ತನ್ನ ವರದಿಯನ್ನು ೧೯೧೯ ಆಗಸ್ಟ್‌ನಲ್ಲಿ ಸರ್ಕಾರಕ್ಕೆ ಸಲ್ಲಿಸಿತು. ಮಿಲ್ಲರ್ ಅವರು ತಮ್ಮ ವರದಿಯಲ್ಲಿ ಸ್ಪಷ್ಟಪಡಿಸಿದ ಪ್ರಮುಖ ಅಂಶವೆಂದರೆ, ಬ್ರಾಹ್ಮಣರನ್ನು ಬಿಟ್ಟು ಉಳಿದವರೆಲ್ಲರೂ ಹಿಂದುಳಿದ ಜನಾಂಗದವರು ಎಂಬುದು. ಹಿಂದುಳಿದ ವರ್ಗಗಳಿಗೆ ಮೀಸಲಾತಿ ನೀಡುವ ಬಗೆಗೆ ಮಿಲ್ಲರ್ ಶಿಫಾರಸು ಮಾಡಿದ್ದರು. ಇದರಿಂದ ಶಿಕ್ಷಣ ಮತ್ತು ಸರ್ಕಾರಿ ಉದ್ಯೋಗಗಳ ಮೀಸಲಾತಿ ಹಿಂದುಳಿದ ವರ್ಗಗಳಿಗೆ ಸಹಜವಾಗಿಯೇ ದಕ್ಕುವಂತಾಯಿತು. ಇದು ೧೯೫೮ರ ವರೆಗೂ ಜಾರಿಯಲ್ಲಿದ್ದುದನ್ನು ಗಮನಿಸಬಹುದು.

ಈ ಸಮಿತಿ ೧೯೧೧ರ ಜನಗಣತಿ ವರದಿ ಆಧಾರದ ಮೇರೆಗೆ ಶೇ. ೫ಕ್ಕೂ ಕಡಿಮೆ ಸಾಕ್ಷರತೆ ಹೊಂದಿದ್ದ ಎಲ್ಲ ಜಾತಿಗಳನ್ನೂ ಹಿಂದುಳಿದ ಸಮುದಾಯಗಳೆಂದು ಪರಿಗಣಿಸಿತು. ರಾಜ್ಯದ ಜನಸಂಖ್ಯೆಯನ್ನು ಬ್ರಾಹ್ಮಣರು ಮತ್ತು ಇತರರು ಎಂದು ಮುಖ್ಯವಾಗಿ

ವಿಭಾಗಿಸಿ, ಬ್ರಾಹ್ಮಣರನ್ನು ಹೊರತುಪಡಿಸಿದಂತೆ ಇತರರನ್ನು ಹಿಂದುಳಿದ ವರ್ಗಗಳೆಂದು ಈ ಸಮಿತಿ ಗುರುತಿಸಿತು. ಈ ಸಮಿತಿಯ ಶಿಫಾರಸುಗಳಲ್ಲಿ ಮುಖ್ಯವಾದುವೆಂದರೆ, ಸರ್ಕಾರದ ೧/೨ ಭಾಗದಷ್ಟು ಉನ್ನತದರ್ಜೆಯ ಹುದ್ದೆಗಳನ್ನು ಮತ್ತು ೨/೩ ಭಾಗದಷ್ಟು ಕೆಳದರ್ಜೆಯ ಹುದ್ದೆಗಳನ್ನು ಏಳುವರ್ಷದ ಅವಧಿಯೊಳಗೆ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಂದ ತುಂಬಬೇಕು; ಇದು ಸಾಧ್ಯವಾಗುವಂತೆ ಮಾಡಲು ಆಡಳಿತದಲ್ಲಿ ಸೇವೆ ಸಲ್ಲಿಸಬಯಸುವ ಅಭ್ಯರ್ಥಿಗಳ ಗರಿಷ್ಠ ವಯೋಮಿತಿಯನ್ನು ೨೫ ರಿಂದ ೨೮ ವರ್ಷಗಳಿಗೆ ಹೆಚ್ಚಿಸಬೇಕು; ಗ್ರಾಮೀಣ ಪ್ರದೇಶಗಳಲ್ಲಿ ಶಾಲೆಗಳನ್ನು ತೆರೆಯಲು ಹಾಗೂ ಹಿಂದುಳಿದ ವರ್ಗಗಳಿಗೆ ವಿದ್ಯಾರ್ಥಿವೇತನ ನೀಡಲು ೨ ಲಕ್ಷ ರೂಪಾಯಿಗಳನ್ನು ಆಯವ್ಯಯದಲ್ಲಿ ಒದಗಿಸಬೇಕು, ಇತ್ಯಾದಿ.

ತಮ್ಮ ಅಧ್ಯಯನದಲ್ಲಿ ೧೯೧೬ ರಿಂದ ೧೯೧೮ - ಈ ಮೂರು ವರ್ಷಗಳ ಅಂಕಿ-ಸಂಖ್ಯೆಗಳನ್ನು ತುಲನಾತ್ಮಕವಾಗಿ ಪರಿಶೀಲಿಸಿದ ಮಿಲ್ಲರ್, ೧೯೧೮ರ ವೇಳೆಗೆ ಬ್ರಾಹ್ಮಣ ಶಿಕ್ಷಿತರು ಸರ್ಕಾರದಲ್ಲಿ ಹೊಂದಿದ್ದ ಹುದ್ದೆಗಳು ಶೇ. ೯೪ ರಷ್ಟು ಎಂಬುದನ್ನು ತೋರಿಸಿಕೊಟ್ಟರು. ಮಿಲ್ಲರ್ ಸಿದ್ಧಪಡಿಸಿದ ಈ ಕೆಳಕಂಡ ಕೋಷ್ಟಕ ಈ ಅಂಶವನ್ನು ಸ್ಪಷ್ಟಪಡಿಸುತ್ತದೆ :

| | ೧೯೧೬ | | ೧೯೧೭ | | ೧೯೧೮ | |
|---|---|---|---|---|---|---|
| ವೇತನ ಶ್ರೇಣಿ | ಬ್ರಾಹ್ಮಣರು | ಬ್ರಾಹ್ಮಣೇತರರು | ಬ್ರಾಹ್ಮಣರು | ಬ್ರಾಹ್ಮಣೇತರರು | ಬ್ರಾಹ್ಮಣರು | ಬ್ರಾಹ್ಮಣೇತರರು |
| ರೂ. ೫೦ ರಿಂದ ೧೦೦- | ೬೮ | ೩೨ | ೭೨ | ೨೮ | ೭೪ | ೨೬ |
| ರೂ. ೧೦೦ ರಿಂದ ೨೫೦- | ೮೨ | ೧೮ | ೮೨ | ೧೮ | ೮೨ | ೧೮ |
| ರೂ. ೨೫೦ ರಿಂದ ೪೫೦- | ೬೯ | ೩೧ | ೭೮ | ೨೨ | ೭೬ | ೨೪ |
| ರೂ. ೪೫೦ ರಿಂದ ೮೦೦- | ೬೨ | ೩೮ | ೬೪ | ೩೬ | ೬೭ | ೩೩ |
| ರೂ. ೮೦೦ ಕ್ಕೂ ಅಧಿಕ- | ೮೨ | ೧೮ | ೭೬ | ೨೪ | ೭೧ | ೨೯ |

ಈ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸಮಿತಿ ಪ್ರತಿವರ್ಷವೂ ಪ್ರತಿಯೊಂದು ಶ್ರೇಣಿಯಲ್ಲೂ ಸಾಧ್ಯವಾದಷ್ಟು ಮಟ್ಟಿಗೆ ಮೀಸಲಾತಿಯನ್ನು ಅನುಸರಿಸಿ ಅಸಮತೋಲನ ಸರಿಪಡಿಸುವಂತೆ ಸೂಚಿಸಿತು. ಗ್ರಾಮೀಣ ಪ್ರದೇಶಗಳಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಆದ್ಯತೆ ನೀಡಬೇಕೆಂದು ಹಾಗೂ ಹೆಚ್ಚು ಹೆಚ್ಚು ಶಾಲೆಗಳನ್ನು ತೆರೆಯಬೇಕೆಂದು ಸಲಹೆ ಮಾಡಿತು. ಸರ್ಕಾರಿ ವಿದ್ಯಾರ್ಥಿನಿಲಯಗಳಲ್ಲಿ ಇದ್ದ ೫೨೨ ವಿದ್ಯಾರ್ಥಿಗಳಲ್ಲಿ ಕೇವಲ ೮೭ (ಶೇ. ೧೭) ವಿದ್ಯಾರ್ಥಿಗಳು ಮಾತ್ರ ಬ್ರಾಹ್ಮಣೇತರರು ಇದ್ದುದನ್ನು ಗಂಭೀರವಾಗಿ ಪರಿಗಣಿಸಿದ ಸಮಿತಿ, ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಹೆಚ್ಚು ಆದ್ಯತೆ ನೀಡಲು ಮತ್ತು ತಾಲ್ಲೂಕು ಮಟ್ಟದಲ್ಲಿ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಿ ಗ್ರಾಮೀಣ ವಿದ್ಯಾರ್ಥಿಗಳು ಪ್ರೌಢಶಿಕ್ಷಣ ಪಡೆದುಕೊಳ್ಳಲು ನೆರವಾಗಬೇಕೆಂದು ಹೇಳಿತು. ಪ್ರತಿಯೊಂದು ಶಾಲೆ ಮತ್ತು ಕಾಲೇಜುಗಳಲ್ಲಿ ಹಾಗೂ ಪ್ರತಿಯೊಂದು ಹಂತದಲ್ಲಿ ಅರ್ಧದಷ್ಟು ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು ಇರತಕ್ಕದ್ದೆಂದು ಸಮಿತಿ ಸೂಚಿಸಿದುದು ಗಮನಾರ್ಹ. ಸರ್ಕಾರಿ ನೌಕರಿಗಳನ್ನು ಪಡೆಯುವಲ್ಲಿ ಅಭ್ಯರ್ಥಿಯೊಬ್ಬ ವಿಶ್ವವಿದ್ಯಾಲಯದ ಪದವಿ ಹೊಂದಿರುವುದು ಅಪೇಕ್ಷಣೀಯವಾದರೂ

ಅದು ತೀರಾ ಅಗತ್ಯವೆಂದು ಭಾವಿಸುವುದು ಸಲ್ಲ ಎಂಬ ಸಮಿತಿಯ ಅಭಿಪ್ರಾಯವೂ ಇಲ್ಲಿ ಪರಿಗಣನಾರ್ಹ. ಮಿಲ್ಲರ್ ಸಮಿತಿ ತಾತ್ವಿಕವಾಗಿ ಅರ್ಹತೆ ಮತ್ತು ಸಾಮಾಜಿಕ ನ್ಯಾಯಗಳ ನಡುವಣ ಸಂಘರ್ಷಕ್ಕೆ ಸೂಕ್ತ ನಿವಾರಣೋಪಾಯ ಸೂಚಿಸಲು ಪ್ರಯತ್ನಿಸಿತೆನ್ನುವುದು ನಿಜ. ಯುಗಗಳಿಂದಲೂ ಅನಕ್ಷರಸ್ಥರಾಗಿ, ದಾರಿದ್ರ್ಯದಿಂದ ನರಳಿ, ಜಾತಿವ್ಯವಸ್ಥೆಯಲ್ಲಿ ಕನಿಷ್ಠ ಸ್ಥಾನ ಪಡೆದು ಅಪಮಾನಿತರಾದ ಜನರ ಸಾಮಾಜಿಕ ಪರಿಸ್ಥಿತಿ ಸುಧಾರಿಸಲು ಮಿಲ್ಲರ್ ಸಮಿತಿ ನೆರವಾಯಿತು.

ಮಿಲ್ಲರ್ ವರದಿಯ ಶಿಫಾರಸುಗಳನ್ನು ಸರ್ಕಾರ ೧೯೨೧ ಮೇ ತಿಂಗಳಲ್ಲಿ ಕಾರ್ಯಗತಗೊಳಿಸಿತು; ಮೈಸೂರು ಸಂಸ್ಥಾನ ಮದರಾಸು ಪ್ರಾಂತದೊಂದಿಗೆ ಭಾರತದಲ್ಲಿ ಮೀಸಲಾತಿ ನೀಡಿದ ಮೊದಲ ರಾಜ್ಯಗಳಿಗೆ ಸೇರಿದುದೆಂಬ ಹೆಗ್ಗಳಿಕೆಗೆ ಈ ಮೂಲಕ ಪಾತ್ರವಾಯಿತು. ಆದರೆ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಗಳನ್ನು ಬೇಕಿದ್ದರೆ ಹಿಂದುಳಿದ ವರ್ಗಗಳಿಗೆ ರದ್ದುಪಡಿಸಬಹುದೆಂಬ ಹಾಗೂ ಸೂಕ್ತ ಅಭ್ಯರ್ಥಿಗಳು ದೊರೆಯದಿದ್ದ ಪಕ್ಷದಲ್ಲಿ ಈ ಹುದ್ದೆಗಳಿಗೆ ಬೇರೆ ರಾಜ್ಯದವರನ್ನು ನೇಮಿಸಿಕೊಳ್ಳತಕ್ಕದ್ದೆಂಬ ಮಿಲ್ಲರ್ ಅವರ ಎರಡು ಶಿಫಾರಸುಗಳನ್ನು ಸರ್ಕಾರ ಕೈಬಿಟ್ಟಿತು. ಹಿಂದುಳಿದ ವರ್ಗಗಳಿಂದ ಕಟು ಟೀಕೆಗಳಿಗೆ ಗುರಿಯಾಗಬಹುದೆಂಬ ಭಯವೇ ಇದಕ್ಕೆ ಮುಖ್ಯ ಕಾರಣ. ನೇಮಕಾತಿ ಸಂಬಂಧದಲ್ಲಿ ಮಿಲ್ಲರ್ ಸಮಿತಿ ಶಿಫಾರಸುಗಳು ಜಾರಿಗೆ ಬರುವ ಬಗೆಗೆ ಖಚಿತಪಡಿಸಿಕೊಳ್ಳುವ ಸಲುವಾಗಿ ಪ್ರತಿನಿಧಿಗಳ ಸಮಿತಿಯೊಂದನ್ನು ರಚಿಸಲಾಯಿತು.

ಮಿಲ್ಲರ್ ಸಮಿತಿ ವರದಿ ಸಹಜವಾಗಿಯೇ ಮೈಸೂರು ಸಂಸ್ಥಾನದ ಸಾರ್ವಜನಿಕ ಆಡಳಿತದಲ್ಲಿ, ಜನಜೀವನದಲ್ಲಿ ಕೆಲವು ಪರಿವರ್ತನೆಗಳನ್ನು ತಂದಿತು. ಬ್ರಾಹ್ಮಣರು ಮಿಲ್ಲರ್ ವರದಿ ಒಪ್ಪಬೇಕೆಂದು ಹಾಗೂ ಅವರು ಹೆಚ್ಚು ಹೆಚ್ಚಾಗಿ ಸ್ವತಂತ್ರ ವೃತ್ತಿ ಕೈಗೊಂಡು ಜೀವನ ಎದುರಿಸಬೇಕೆಂದು ಇದೇ ಸಂದರ್ಭದಲ್ಲಿ ಕರೆಯಿತ್ತವರು ಮೈಸೂರು ಕಾಂಗ್ರೆಸ್‌ನ ಪ್ರಥಮ ಅಧ್ಯಕ್ಷ ಹಾಗೂ ನಿವೃತ್ತ ನ್ಯಾಯಮೂರ್ತಿ ಸೆಟ್ಲೂರ್ ಅವರು. ಬ್ರಾಹ್ಮಣರೂ ಘರ್ಷಣೆಗಿಳಿಯದೆ ಮೀಸಲಾತಿ ಆಜ್ಞೆಯನ್ನು ಒಪ್ಪಿಕೊಂಡುದು ವಿಶೇಷ. ಕೆಲವು ಪತ್ರಿಕೆಗಳು ಈ ನೀತಿಯ ವಿರುದ್ಧ ಟೀಕಾಸ್ತ್ರಗಳನ್ನು ಹೂಡಿದರೆ, 'ದಿ ಮೈಸೂರ್ ಸ್ಟಾರ್' ತನ್ನ ಲೇಖನ ಸರಣಿಯ ಮೂಲಕ ಈ ನೀತಿಯನ್ನು ಸಮರ್ಥವಾಗಿ ಬೆಂಬಲಿಸಿತು. 'ವೃತ್ತಾಂತ ಪತ್ರಿಕೆ'ಯೂ ಮಿಲ್ಲರ್ ಶಿಫಾರಸುಗಳನ್ನು ಶ್ಲಾಘಿಸಿತು. ಸ್ವಾರಸ್ಯದ ಸಂಗತಿಯೆಂದರೆ, ಮೈಸೂರು ಸಂಸ್ಥಾನದ ಆಡಳಿತದಲ್ಲಿ 'ಮೈಸೂರು ಮೈಸೂರಿನವರಿಗೇ' ಎಂದು ಮದರಾಸಿ ಬ್ರಾಹ್ಮಣರ ವಿರುದ್ಧ ಚಳವಳಿ ಆರಂಭಿಸಿದ್ದ ಮೈಸೂರು ಬ್ರಾಹ್ಮಣರು ಮಿಲ್ಲರ್ ಸಮಿತಿ ವರದಿ ಮಂಡನೆಯಾದ ನಂತರ ಬದಲಾದರು. ಮದರಾಸು ಮತ್ತು ಮೈಸೂರು ಬ್ರಾಹ್ಮಣರು ಒಮ್ಮತಕ್ಕೆ ಬಂದು ತಮ್ಮ ನಡುವಣ ಚಳವಳಿಯನ್ನು ಕೈಬಿಟ್ಟರು. ಈ ಎರಡು ಬಣದವರೂ ಜತೆಯಾಗಿ ಮಿಲ್ಲರ್ ಸಮಿತಿ ಶಿಫಾರಸುಗಳನ್ನು ವಿರೋಧಿಸತೊಡಗಿದರು. ೧೯೧೮ರಲ್ಲೆ ಮಿಲ್ಲರ್ ಸಮಿತಿಯ ನೇಮಕಾತಿಯ ವಿರುದ್ಧ ತಳೆದ ನಿಲುವಿನ ಪರಿಣಾಮವೇ 'ಪ್ರತಿಭಾದಮನ ನೀತಿ' ವಿರೋಧಿಸಲು ಹೊರಟ ಎಂ. ವಿಶ್ವೇಶ್ವರಯ್ಯನವರ ರಾಜೀನಾಮೆ ಎಂಬುದನ್ನೂ ಇಲ್ಲಿ ಮರು ಪ್ರಸ್ತಾಪಿಸಬಹುದು.

ಆದರೆ ಈ ವೇಳೆಗಾಗಲೆ ಹಿಂದುಳಿದ ವರ್ಗಗಳಲ್ಲಿಯೂ 'ಜಾತಿಪ್ರಜ್ಞೆ' ಆಳವಾಗಿ ಬೇರುಬಿಟ್ಟಿದ್ದರಿಂದ, ಅದು ರಾಜಕೀಯದ ಮೇಲೂ ತನ್ನ ಪ್ರಭಾವ ಬೀರಲಾರಂಭಿಸಿದ್ದಿತು. ಮೀಸಲಾತಿ ನೀತಿ ಪ್ರಜಾಪ್ರತಿನಿಧಿ ಸಭೆಗೂ ಅನ್ವಯವಾಗಿದ್ದರಿಂದ, ಒಕ್ಕಲಿಗ ಮತ್ತು ಲಿಂಗಾಯಿತ ಜನಾಂಗಗಳು ಹೆಚ್ಚು ಪ್ರಾತಿನಿಧ್ಯ ದೊರಕಿಸಿಕೊಳ್ಳಲು ಸಾಧ್ಯವಾಯಿತು. ಈ ಎರಡು ಪ್ರಮುಖ ಜನಾಂಗಗಳನ್ನು ಎದುರು ಹಾಕಿಕೊಳ್ಳದೆ ಮೀಸಲಾತಿ ಸಂಬಂಧದಲ್ಲಿ ಸ್ವಲ್ಪಮಟ್ಟಿಗೆ ಲಾಭ ಪಡೆದುಕೊಳ್ಳಲೆತ್ನಿಸಿದ ಹಿಂದುಳಿದ, ದಲಿತ ಹಾಗೂ ಅಲ್ಪಸಂಖ್ಯಾತ ವರ್ಗಗಳಲ್ಲಿ ಕುರುಬ, ಅಗಸ, ಉಪ್ಪಾರ, ದೇವಾಂಗ, ಕುಂಬಾರ, ಪಾಂಚಾಳ, ಕಣಿಯ, ಬೇಡ, ಪಾಳೇಗಾರ, ವಡ್ಡ, ಸಾತಾನಿ, ಮುಸ್ಲಿಂ, ಭಾರತೀಯ ಕ್ರೈಸ್ತ ಹಾಗೂ ಕೆಲವು ದಲಿತ ಜಾತಿಗಳು ಮುಖ್ಯವಾದುವು.

೧೯೨೧ರ ಜನಗಣತಿ ವರದಿ ಪ್ರಕಾರ, ಬ್ರಾಹ್ಮಣ, ಲಿಂಗಾಯಿತ ಮತ್ತು ಒಕ್ಕಲಿಗ ಸಮುದಾಯಗಳು ಭೂ ಹಿಡುವಳಿ ಆದಾಯವನ್ನು ಹೆಚ್ಚು ಅನುಭವಿಸುತ್ತಿದ್ದವು. ಸರ್ಕಾರಿ ಹುದ್ದೆಗಳಲ್ಲಿ ಮೇಲ್ದರ್ಜೆ ಅಧಿಕಾರ ಸ್ಥಾನಗಳನ್ನು ಪಡೆದಿದ್ದವರು ಬ್ರಾಹ್ಮಣರು, ಕ್ರೈಸ್ತರು ಮತ್ತು ಮುಸ್ಲಿಮರು. ಕೆಳದರ್ಜೆ ನೌಕರಿಗಳಲ್ಲಿಯೂ ಬ್ರಾಹ್ಮಣರು ಮೊದಲ ಸ್ಥಾನದಲ್ಲಿದ್ದು, ಹೊಲೆಯರು ಮತ್ತು ಮಾದಿಗರು ಕ್ರಮವಾಗಿ ಎರಡನೇ ಮತ್ತು ಮೂರನೇ ಸ್ಥಾನಗಳಲ್ಲಿದ್ದರು. ೬೩,೦೦೦ ಮಂದಿ ಇಂಗ್ಲಿಷ್ ಬಲ್ಲವರಲ್ಲಿ ಶೇ. ೪೪ ರಷ್ಟು ಸುಶಿಕ್ಷಿತ ಬ್ರಾಹ್ಮಣರಿದ್ದರೆ, ಉಳಿದವರಲ್ಲಿ ಶೇ. ೨೬ ರಷ್ಟು ಕ್ರೈಸ್ತರು ಮತ್ತು ಶೇ. ೫ ರಷ್ಟು ಮುಸ್ಲಿಮರಿದ್ದರು. ಉಳಿದ ಎಲ್ಲ ಹಿಂದುಳಿದ ವರ್ಗಗಳಲ್ಲಿಯ ಅಕ್ಷರಸ್ಥರ ಒಟ್ಟು ಪ್ರಮಾಣ ಶೇ. ೪ಕ್ಕಿಂತ ಕಡಿಮೆಯಿದ್ದಿತು. ಇದರಿಂದ ವ್ಯಕ್ತಪಡುವುದೇನೆಂದರೆ, ಶೇ. ೧೦ರಷ್ಟು ಇರುವ ಸಮುದಾಯದಲ್ಲಿ ಇಂಗ್ಲಿಷ್ ಬಲ್ಲವರ ಪ್ರಮಾಣ ಶೇ. ೭೫ ರಷ್ಟು ಇದ್ದಿತು. ಈ ವಿಧದ ಶೈಕ್ಷಣಿಕ ಅರ್ಹತೆ ಇದ್ದುದರಿಂದಲೇ ಬ್ರಾಹ್ಮಣರಿಗೆ ಸರ್ಕಾರಿ ಹುದ್ದೆಗಳಲ್ಲಿ ಆದ್ಯತೆ ದೊರೆಯುವಂತಾದುದು ಸಹಜ. ಹಾಗೆಯೇ, ೧೯೨೭ರಲ್ಲಿ ಕೆಳದರ್ಜೆಯ ನೇಮಕಾತಿಯಲ್ಲಿ ಇತರ ಹಿಂದುಳಿದ ಅಭ್ಯರ್ಥಿಗಳ ಸಂಖ್ಯೆ ಶೇ. ೩೦ ರಿಂದ (೧೯೧೮) ಶೇ. ೪೨ ಕ್ಕೆ (೧೯೨೭) ಏರಿದ್ದರೂ ಸರ್ಕಾರದ ಪತ್ರಾಂಕಿತ ಹುದ್ದೆಗಳ ನೇಮಕಾತಿಯಲ್ಲಿ ಈ ಸಂಖ್ಯೆ ಕಡಿಮೆಯಾಗಿದ್ದುದು ಗಮನಾರ್ಹ.

ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿಯೆಂದರೆ, ೧೯೨೧ ರಿಂದ ಏಳು ವರ್ಷಗಳೊಳಗೆ ಉನ್ನತ ಹುದ್ದೆಯ ಶೇ. ೫೦ ಮತ್ತು ಕೆಳಗಿನ ಹುದ್ದೆಗಳ ೨/೩ ಭಾಗ ಬ್ರಾಹ್ಮಣೇತರರಿಗೆ ಸಿಕ್ಕಬೇಕೆಂದು ಮಿಲ್ಲರ್ ವರದಿಯಲ್ಲಿ ಶಿಫಾರಸು ಮಾಡಲಾಗಿದ್ದರೂ ೧೯೪೧ರ ವರೆಗೂ ಶೇ. ೩೪.೪೫ ಗಜೆಟೆಡ್ ಮತ್ತು ಶೇ. ೪೯.೩೬ ನಾನ್ ಗೆಜೆಟೆಡ್ ಹುದ್ದೆಗಳು ಬ್ರಾಹ್ಮಣರ ಪಾಲಾಗಿದ್ದವು. ಅಲ್ಲದೆ, ಒಕ್ಕಲಿಗರು ಶೇ. ೮.೮ ಮತ್ತು ಶೇ. ೫.೫೦; ಲಿಂಗಾಯಿತರು ಶೇ. ೧೦.೬೩ ಮತ್ತು ಶೇ. ೭.೪೦ ಆಗಿದ್ದರೆ, ಶೋಷಿತ ಜನಾಂಗ ಶೇ. ೪.೫೮ ಮತ್ತು ಶೇ. ೬.೯೫-ಕ್ರಮವಾಗಿ ಈ ಹುದ್ದೆಗಳಲ್ಲಿ ಪಾಲುಹೊಂದಿದ್ದುದು ವ್ಯಕ್ತಪಡುತ್ತದೆ (ಮಣಿಪಾಲ : ೧೯೯೭ : ೪೮). ಮಿಲ್ಲರ್ ಸಮಿತಿ ವರದಿ ಜಾರಿಯ ನಂತರ ಹಿಂದುಳಿದ ವರ್ಗಗಳಲ್ಲೆ ಪ್ರಬಲ ಕೋಮಿನವರಿಗೆ ಗರಿಷ್ಠ ಪ್ರಮಾಣದ ಲಾಭವಾದುದು ಕಂಡುಬರುತ್ತದೆ. ೧೯೩೩ರಲ್ಲಿ ಸಂವಿಧಾನ ಸುಧಾರಣೆ ಕುರಿತು ಬಿಜೇಂದ್ರನಾಥ ಶೀಲ್ ಸಮಿತಿ ಸಲ್ಲಿಸಿದ ವರದಿ ಹಿಂದುಳಿದ ವರ್ಗವಲ್ಲ, ಅಂದರೆ

ಬ್ರಾಹ್ಮಣೇತರರಲ್ಲಿ 'ಬಹುಸಂಖ್ಯಾತ' ಮತ್ತು 'ಅಲ್ಪಸಂಖ್ಯಾತ' ಸಮೂಹಗಳೆಂದು ಪ್ರತ್ಯೇಕವಾಗಿ ಗುರುತಿಸಿತು. ಮಿರ್ಜಾ ಇಸ್ಮಾಯಿಲ್ (೧೯೨೬-೧೯೪೧) ಅವರು ದಿವಾನರಾಗಿದ್ದಾಗ, ಲಿಂಗಾಯಿತರು ಮತ್ತು ಮುಸ್ಲಿಮರನ್ನು ಹೊರತುಪಡಿಸಿದರೆ ಇತರ ಬ್ರಾಹ್ಮಣೇತರ ವರ್ಗದವರಿಗೆ ಸರ್ಕಾರಿ ಹುದ್ದೆಗಳಲ್ಲಿ ಪ್ರಾಮುಖ್ಯತೆ ದೊರೆಯಲಿಲ್ಲವೆಂಬುದನ್ನು; ಮೀಸಲಾತಿ ಬಗೆಗೆ ಪುನರ್ವಿಮರ್ಶಿಸಲು ಒಂದು ಸಮಿತಿ ನೇಮಿಸಬೇಕೆಂದು ಒಕ್ಕಲಿಗ ಮುಖಂಡರು ೧೯೩೦ ರಲ್ಲಿ ಪ್ರಜಾಪ್ರತಿನಿಧಿ ಸಭೆಯಲ್ಲಿ ಒತ್ತಾಯಿಸಿದುದನ್ನು ಇಲ್ಲಿ ಪ್ರಸ್ತಾಪಿಸಬಹುದು. ಆದರೂ ಮಿಲ್ಲರ್ ಆಯೋಗದ ವರದಿ ಹಿಂದುಳಿದವರಲ್ಲಿ ಆತ್ಮವಿಶ್ವಾಸ ಮೂಡಿಸಿದ್ದಂತೂ ದಿಟ.

ಆದರೆ ದಲಿತರಿಗೆ ಸರ್ಕಾರಿ ನೇಮಕಾತಿಗಳಲ್ಲಿ ಇತರ ಹಿಂದುಳಿದವರಿಗಿಂತ ಹೆಚ್ಚಿನ ಆದ್ಯತೆ ನೀಡಬೇಕೆಂದು ಮಿಲ್ಲರ್ ಅವರು ತಮ್ಮ ವರದಿಯಲ್ಲಿ ಶಿಫಾರಸು ಮಾಡಿದ್ದರೂ, ಸರ್ಕಾರಿ ಆಜ್ಞೆಯಲ್ಲಿ ಇದು ಕಾರ್ಯಗತವಾಗಲೇ ಇಲ್ಲವೆಂಬುದು ವಿಷಾದನೀಯ ಸಂಗತಿ. ಚರಿತ್ರಕಾರರು ವ್ಯಾಖ್ಯಾನಿಸುವಂತೆ, ದಲಿತವರ್ಗಗಳ ಅಸಂಘಟಿತ ಮೌನವೇ ಇಂಥಾ ಸ್ಥಿತಿಗೆ ಪ್ರಮುಖ ಕಾರಣ. ಅಲ್ಲದೆ, ಈ ವರ್ಗಗಳಿಗೆ ಸೇರಿದ ಅರ್ಹ ಅಭ್ಯರ್ಥಿಗಳು ಇರಲಿಲ್ಲ ಎಂಬುದನ್ನು ಹಾಗೂ ದಲಿತನೊಬ್ಬ ಮೊದಲು ಮೆಟ್ರಿಕ್ಯುಲೇಷನ್ ಪಾಸುಮಾಡಿದ್ದು ೧೯೧೪ರಲ್ಲಿ ಹಾಗೂ ಪದವಿ ಪಾಸುಮಾಡಿದ್ದು ೧೯೨೫ರಲ್ಲಿ ಎಂಬುದನ್ನು ಇಲ್ಲಿ ಗಮನಿಸಬೇಕು (ಚಂದ್ರಶೇಖರ್: ೧೯೮೩: ೮೦)

ಇಂಥದೇ ನೆಲೆಯಲ್ಲಿ, ತಮ್ಮ ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಮತ್ತು ತಮ್ಮದೇ ಪ್ರಾತಿನಿಧ್ಯ ಪಡೆದುಕೊಳ್ಳಲು ಹಲವಾರು ಹಿಂದುಳಿದ ವರ್ಗಗಳು ಪ್ರಯತ್ನಿಸಿದುದನ್ನು ನೋಡಬಹುದು. ಅಲ್ಪಸಂಖ್ಯಾತರ ಮತ್ತು ಅತಿ ಹಿಂದುಳಿದ ವರ್ಗಗಳ ಹಿತಾಸಕ್ತಿಗಳಿಗೆ ಧಕ್ಕೆ ಒದಗುವ ಪರಿಸ್ಥಿತಿ ಉದ್ಭವಿಸಿದ್ದರಿಂದ, ಈ ಜಾತಿಗಳಲ್ಲಿ ಕೆಲವು ತಮ್ಮ ಹಕ್ಕುಗಳನ್ನು ಸ್ಥಾಪಿಸಲೋಸುಗ ಸಂಘ-ಸಂಸ್ಥೆಗಳನ್ನು ಸ್ಥಾಪಿಸಿಕೊಂಡವು. ಮತ್ತೆ ಕೆಲವು ಪುನರ್ ಸಂಘಟನೆಗೆ ಒಳಗಾದವು. ಉದಾಹರಣೆಗೆ, ಮೈಸೂರ್ ಸ್ಟೇಟ್ ಆರ್ಯ ವೈಶ್ಯರ ಮಹಾಸಂಘ (೧೯೧೫), ಬಲಜಿಗರ ಸಂಘ (೧೯೨೦), ಅಂಜುಮನ್-ಇ-ಇಸ್ಲಾಮಿಕ್ ಅಸೋಸಿಯೇಶನ್ (೧೯೨೨), ದೇವಾಂಗ ಸಂಘ (೧೯೨೪), ತಿಗಳರ ಸಂಘ (೧೯೨೪), ಯಾದವರ ಸಂಘ (೧೯೨೪), ಮರಾಠಾ ಸಮಾಜ (೧೯೨೪), ಇಂಡಿಯನ್ ಕ್ರಿಶ್ಚಿಯನ್ ಅಸೋಸಿಯೇಶನ್ (೧೯೨೪), ಕಣಿಯರ ಸಂಘ (೧೯೨೬), ಮೈಸೂರು ಸೀಮೆಯ ಲಂಬಾಣಿಗರ ಸಂಘ (೧೯೨೭), ಜ್ಯೋತಿನಗರ ವೈಶ್ಯ ಮಹಾಜನ ಸಂಘ (೧೯೨೭) ಮೊದಲಾದುವು ತಮ್ಮ ಜಾತಿ ಜನರ ಸಂಘಟನೆಗೆ ಮುಂದಾದವು.

೧೯೩೬ ಜುಲೈ ವೇಳೆಗೆ, ಮೈಸೂರು ಸಂಸ್ಥಾನದಲ್ಲಿ ಸರ್ಕಾರಿ ನೇಮಕಾತಿಗಳು ಒಳಗೊಂಡ ವಿವಿಧ ಹಿಂದುಳಿದ ಜಾತಿಗಳಿಗೆ ಸಂಬಂಧಿಸಿದ ಕೋಷ್ಟಕವನ್ನು ಈ ಕೆಳಗೆ ತೋರಿಸಿದೆ. ನಾನ್-ಗೆಜೆಟೆಡ್ ಹುದ್ದೆಗಳಿಗೆ ಸಂಬಂಧಿಸಿದಂತೆ ಇಲ್ಲಿಯ ಜಾತಿಗಳಿಗೆ ಸೂಕ್ತ ಪ್ರಾತಿನಿಧ್ಯ ದೊರೆತುದು ವ್ಯಕ್ತಪಟ್ಟರೂ, ಗೆಜೆಟೆಡ್ ಹುದ್ದೆಗಳಲ್ಲಿ ಅರ್ಧದಷ್ಟು ಬ್ರಾಹ್ಮಣವರ್ಗದವರ ಕೈಯಲ್ಲೇ ಇದ್ದುದು ಇಲ್ಲಿ ವ್ಯಕ್ತಪಡುತ್ತದೆ :

| ಜಾತಿಗಳು | ನಾನ್-ಗೆಜೆಟೆಡ್ ನೇಮಕಾತಿಗಳು | | ಗೆಜೆಟೆಡ್ ನೇಮಕಾತಿಗಳು (ರೂ. ೧೦೦ ರಿಂದ ರೂ. ೨೦೦೦ ವರೆಗೆ) | |
|---|---|---|---|---|
| | ಸಂಖ್ಯೆ | ಶೇಕಡ | ಸಂಖ್ಯೆ | ಶೇಕಡ |
| ಬ್ರಾಹ್ಮಣ | ೧೧,೨೨೭ | ೪೯.೬೫ | ೪೬೬ | ೬೧.೩೨ |
| ಬೇಡ | ೧೨೮ | ೧೦.೫೭ | ೨ | ೦.೨೬ |
| ಯಾದವ | ೮೧ | ೦.೩೬ | ೧ | ೦.೧೩ |
| ಕ್ಷತ್ರಿಯ | ೪೦೭ | ೧.೮೦ | ೧೮ | ೨.೩೮ |
| ಕುರುಬ | ೩೧೪ | ೧.೩೪ | ೨ | ೦.೨೬ |
| ಲಿಂಗಾಯಿತ | ೧,೮೪೯ | ೮.೧೭ | ೩೮ | ೫.೦೦ |
| ಮುದಲಿಯಾರ್ | ೪೧೪ | ೧.೮೭ | ೨೧ | ೨.೭೭ |
| ನಾಯ್ಡು | ೨೩೭ | ೧.೦೪ | ೮ | ೧.೦೫ |
| ವೈಶ್ಯ | ೨೧೭ | ೦.೯೬ | ೧೩ | ೧.೭೧ |
| ಬಣಜಿಗ | ೩೯೦ | ೧.೭೨ | ೫ | ೦.೬೩ |
| ಒಕ್ಕಲಿಗ | ೧,೧೬೩ | ೫.೧೪ | ೧೯ | ೨.೫೨ |
| ಇತರ ಸವರ್ಣೀಯರು | ೧,೪೨೩ | ೮.೬೦ | ೩೩ | ೪.೩೪ |
| ಜೈನ | ೧೧೪ | ೦.೫೦ | ೬ | ೦.೭೯ |
| ಮುಸ್ಲಿಂ | ೨,೫೮೦ | ೧೧.೪೧ | ೫೫ | ೭.೨೪ |
| ಕ್ರೈಸ್ತ (ಭಾರತೀಯ) | ೯೫೩ | ೪.೨೧ | ೩೩ | ೪.೩೪ |
| ಇತರ ಜಾತಿಗಳು | ೧೮ | ೦.೦೮ | ೧೦ | ೧.೩೨ |
| ನಿಮ್ನವರ್ಗಗಳು | ೫೮೪ | ೨.೫೮ | ೧ | ೦.೧೩ |
| ಆಂಗ್ಲೊ-ಇಂಡಿಯನ್ ಮತ್ತು ಯೂರೋಪಿಯನ್ | ೧೧೬ | ೦.೫೧ | ೨೯ | ೩.೮೧ |
| ಒಟ್ಟು | ೨೨,೬೧೫ | ೧೦೦ | ೭೬೦ | ೧೦೦ |

ಹಿಂದುಳಿದ ವರ್ಗಗಳ ಸಮಸ್ಯೆ ಕುರಿತು ಅಧ್ಯಯನ ನಡೆಸಿರುವ ಶ್ರೀಮತಿ ಲೀಲಾ ದುಷ್ಕಿನ್ (೧೯೭೪), ವಿವಿಧ ಮೂಲಗಳಿಂದ ಸಂಗ್ರಹಿಸಿದ ಅಂಕಿ-ಅಂಶಗಳನ್ನಾಧರಿಸಿ, ೧೯೧೮ ರಿಂದ ೧೯೫೬ರ ವರೆಗಿನ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಅಧಿಕಾರಿಗಳ ಶೇಕಡವಾರು ಸ್ಥಾನಗಳನ್ನು ಈ ಕೆಳಗಿನ ಕೋಷ್ಟಕದಲ್ಲಿ ತೋರಿಸಿರುವರು :

| ಜಾತಿ | ೧೯೧೮ | ೧೯೩೬ | ೧೯೪೨ | ೧೯೪೯ | ೧೯೫೬ |
|---|---|---|---|---|---|
| ಬ್ರಾಹ್ಮಣ | ೬೪.೮೬ | ೬೧.೩೨ | ೫೪.೫೭ | ೪೧.೨೯ | ೩೪.೯೦ |
| ಕ್ರೈಸ್ತ | ೧೫.೧೪ | ೮.೧೫ | ೭.೮೬ | ೫.೫೩ | ೫.೭೫ |
| ಮುಸ್ಲಿಂ | ೪.೩೨ | ೭.೨೪ | ೭.೫೧ | ೬.೭೯ | ೫.೩೭ |
| ಲಿಂಗಾಯಿತ | ೧.೮೯ | ೫.೦೦ | ೫.೭೮ | ೯.೬೫ | ೧೨.೭೪ |
| ಒಕ್ಕಲಿಗ | ೧.೦೮ | ೨.೫೨ | ೩.೮೨ | ೮.೪೭ | ೯.೮೦ |
| ಒಟ್ಟು | ೮೭.೨೯ | ೮೪.೩೯ | ೭೯.೫೪ | ೭೧.೭೩ | ೬೮.೫೬ |
| ಒಟ್ಟು ಹುದ್ದೆಗಳು | ೩೭೦ | ೭೬೦ | ೮೬೫ | ೧,೪೩೭ | ೧,೫೩೦ |

(ಆಕರ : ಬ್ಯಾಕ್‌ವರ್ಡ್ ಕ್ಲಾಸ್ ಮೂವ್‌ಮೆಂಟ್ ಇನ್ ಕರ್ನಾಟಕ, ಪು. ೬೧).

ಈ ಮೇಲಿನ ಅಂಕಿ-ಅಂಶಗಳ ಪ್ರಕಾರ, ೧೯೧೮ರಲ್ಲಿ ಬ್ರಾಹ್ಮಣರು ಶೇ. ೬೫ರಷ್ಟು ಗೆಜೆಟೆಡ್ ಹುದ್ದೆಗಳನ್ನು ಪಡೆದಿದ್ದರೆ, ೧೯೫೬ರ ವೇಳೆಗೆ ಶೇ. ೩೫ರಷ್ಟನ್ನು ಮಾತ್ರ ಪಡೆದಿದ್ದರು. ಲಿಂಗಾಯಿತ ಮತ್ತು ಒಕ್ಕಲಿಗ ಅಧಿಕಾರಿಗಳ ಸಂಖ್ಯೆ ಏರಿಕೆಯಾದುದು ಕಂಡುಬರುತ್ತದೆ. ೧೯೧೮ ಮತ್ತು ೧೯೫೬ರ ಕಾಲಾವಧಿಯಲ್ಲಿ ಲಿಂಗಾಯಿತ ಮತ್ತು ಒಕ್ಕಲಿಗರಲ್ಲಿ ಶೈಕ್ಷಣಿಕ ಜಾಗೃತಿ ಆದುದು ಸ್ಪಷ್ಟ. ಮಿಲ್ಲರ್ ಆಯೋಗದಿಂದ ಹಿಂದುಳಿದ ವರ್ಗಗಳಲ್ಲಿ ನವೋತ್ಸಾಹ ಮೂಡಿದುದು ಒಂದೆಡೆಯಾದರೆ, ಸರ್ಕಾರಿ ಹುದ್ದೆಗಳನ್ನು ಪಡೆದುಕೊಳ್ಳುವಲ್ಲಿ ಬ್ರಾಹ್ಮಣವರ್ಗ ಕ್ರಮೇಣ ತನ್ನ ಹಿಡಿತ ಸಡಿಲಿಸಿಕೊಂಡುದು ಈ ಕೆಳಗಿನ ಇನ್ನೊಂದು ಕೋಷ್ಟಕ ಸಮರ್ಥಿಸುತ್ತದೆ. ಇಲ್ಲಿಯ ಅಂಕಿ-ಅಂಶಗಳು ೧೯೧೮ ರಿಂದ ೧೯೫೬ರ ವರೆಗೆ (ಆಯ್ದ ವರ್ಷಗಳು) ಮೈಸೂರು ರಾಜ್ಯದ ಆಡಳಿತದಲ್ಲಿ ಗೆಜೆಟೆಡ್ ಮತ್ತು ನಾನ್-ಗೆಜೆಟೆಡ್ ಹುದ್ದೆಗಳ ನೇಮಕಾತಿಗಳಲ್ಲಿ ಬ್ರಾಹ್ಮಣರು ಪಡೆದಿದ್ದ ಪಾಲನ್ನು ಶೇಕಡವಾರು ಪ್ರಮಾಣದಲ್ಲಿ ವಿವರಿಸುತ್ತವೆ :

| | ಗೆಜೆಟೆಡ್ ಹುದ್ದೆಗಳು | | ನಾನ್-ಗೆಜೆಟೆಡ್ ಹುದ್ದೆಗಳು | |
|---|---|---|---|---|
| | ಒಟ್ಟು ಸಂಖ್ಯೆ | ಬ್ರಾಹ್ಮಣರು (ಶೇಕಡವಾರು) | ಒಟ್ಟು ಸಂಖ್ಯೆ | ಬ್ರಾಹ್ಮಣರು (ಶೇಕಡವಾರು) |
| ೧೯೧೮ | ೩೭೦ | ೬೪.೮೬ | ೧೩,೯೪೬ | ೬೯.೬೪ |
| ೧೯೩೬ | ೭೬೦ | ೬೧.೩೨ | ೨೨,೬೧೫ | ೪೯.೬೫ |
| ೧೯೪೭-೪೮ | ೧,೪೩೭ | ೪೩.೧೮ | ೪೪,೦೨೫ | ೩೫.೦೪ |
| ೧೯೫೬ | ೧,೫೩೦ | ೩೪.೯೦ | ೫೭,೫೧೬ | ೨೭.೬೫ |

(ಆಕರ : ಬ್ಯಾಕ್‌ವರ್ಡ್ ಕ್ಲಾಸ್ ಮೂವ್‌ಮೆಂಟ್ ಇನ್ ಕರ್ನಾಟಕ, ಪು. ೬೨).

ಶೈಕ್ಷಣಿಕ ಪ್ರಗತಿಯ ಕಾರಣವಾಗಿ ಹಿಂದುಳಿದ ವರ್ಗಗಳವರು ಚೇತರಿಸಿಕೊಂಡರೆಂದು ಸ್ಪಷ್ಟಪಟ್ಟರೂ ೧೯೪೦-೪೧ ರಲ್ಲಿಯೂ ಈ ಬೆಳವಣಿಗೆ ಸಮಾಧಾನಕರವಾಗಿರಲಿಲ್ಲ. ೧೨,೦೦೦ ಪ್ರೌಢಶಾಲಾ ವಿದ್ಯಾರ್ಥಿಗಳಲ್ಲಿ ಅರ್ಧದಷ್ಟು (೫,೮೬೦) ವಿದ್ಯಾರ್ಥಿಗಳು ಬ್ರಾಹ್ಮಣವರ್ಗದವರಾಗಿದ್ದರೆ, ಲಿಂಗಾಯಿತರು ಶೇ. ೧೦ (೧,೨೧೧), ಒಕ್ಕಲಿಗರು ಶೇ. ೭ (೮೮೦) ಹಾಗೂ ನಿಮ್ನವರ್ಗಗಳವರು ಶೇ. ೪ (೫೪೧)ರಷ್ಟು ಇದ್ದರು. ೧೯೪೭-೪೮ ರಲ್ಲೂ ಈ ಚಿತ್ರ ಅಷ್ಟಾಗಿ ಬದಲಾಗಿರಲಿಲ್ಲ. ೩೩ ಸಾವಿರ ಪ್ರೌಢಶಾಲಾ ವಿದ್ಯಾರ್ಥಿಗಳಲ್ಲಿ ಶೇ. ೪೦ (೧೩,೦೦೦) ಬ್ರಾಹ್ಮಣವರ್ಗದವರಿದ್ದರೆ, ಲಿಂಗಾಯಿತರು ಶೇ. ೧೪ (೪,೬೦೦), ಒಕ್ಕಲಿಗರು ಶೇ. ೧೦ (೩,೫೦೦) ಹಾಗೂ ನಿಮ್ನವರ್ಗದವರು ಶೇ. ೪ (೧,೩೦೦) ಇದ್ದರು. ಏನೇ ಇದ್ದರೂ, ೧೯೪೭ ರ ನಂತರ ಹಿಂದುಳಿದ ಮತ್ತು ದಲಿತ ವರ್ಗಗಳಲ್ಲಿ ತೀವ್ರ ಬದಲಾವಣೆ ಉಂಟಾಯಿತು. ೧೯೬೦-೭೦ರ ವೇಳೆಗೆ ಇದು ಭಿನ್ನ ಸ್ವರೂಪ ತಳೆದುದು ಗಮನಾರ್ಹ. ಒಕ್ಕಲಿಗರು ಮತ್ತು ಲಿಂಗಾಯಿತರಲ್ಲಿ ಜಾಗೃತಿ ಹೆಚ್ಚಿದಂತೆ ಆ ವರ್ಗಗಳವರು ರಾಜಕೀಯ ಶಕ್ತಿಯನ್ನು ತಮ್ಮ ವಶಮಾಡಿಕೊಳ್ಳುವಲ್ಲಿ ಯಶಸ್ವಿಯಾದರು. ಆದರೆ ಇತರ ಹಿಂದುಳಿದ ವರ್ಗಗಳು ಎಂದಿನಂತೆ ಹಿಂದೆ ಬೀಳುವುದರೊಡನೆ ಹೊಸ ಹೋರಾಟಕ್ಕೆ ಸಜ್ಜುಗೊಂಡವು.

## ೩.೨. ಏಕೀಕರಣೋತ್ತರ ಕರ್ನಾಟಕದ ಆಯೋಗಗಳು

ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು ಏಕಾಏಕಿ ಹುಟ್ಟಿಕೊಳ್ಳದೆ, ಶತ-ಶತಮಾನಗಳಿಂದ ನಡೆದುಬಂದ ಮೇಲ್ವರ್ಗದವರ ತಾರತಮ್ಯ, ದೌರ್ಜನ್ಯಗಳ ವಿರುದ್ಧ ಹೋರಾಡಲು ರೂಪಿಸಿಕೊಂಡ ಸಂಘಟಿತ ವ್ಯವಸ್ಥೆಯಾಗಿ ಬೆಳೆದುಬಂದವು. ಹತ್ತಿರ ಹತ್ತಿರ ಎರಡು ಶತಮಾನಗಳ ಇತಿಹಾಸ ಇವುಗಳಿಗಿರುವುದು ಸ್ಪಷ್ಟ. ಕರ್ನಾಟಕದ ಮಟ್ಟಿಗೆ, ಈ ಚಳವಳಿಗಳು ತೀವ್ರಗೊಂಡುದು ಈ ಶತಮಾನದ ಆರಂಭದಲ್ಲಿ. ಮಿಲ್ಲರ್ ಸಮಿತಿ ರಚನೆಯೊಂದಿಗೆ ಈ ಹೋರಾಟಗಳಿಗೆ ಹೊಸ ಆಯಾಮ ದೊರೆಯಿತು. ಸ್ವಾತಂತ್ರ್ಯಾನಂತರ ಹೊಸ ಹುರುಪಿನಿಂದ ಕೂಡಿದ ಹಿಂದುಳಿದ ಸಮುದಾಯಗಳು ಸರ್ಕಾರಗಳ ಮುಂದೆ ತಮ್ಮ ಬೇಡಿಕೆಗಳನ್ನು ಮೇಲಿಂದ ಮೇಲೆ ಸಲ್ಲಿಸತೊಡಗಿದವು. ರಾಜ್ಯ ಸರ್ಕಾರಗಳು ಈ ಬೇಡಿಕೆಗಳನ್ನು ಪುನರ್ವಿಮರ್ಶಿಸುವ ಕೆಲಸಕ್ಕೆ ಕೈಹಚ್ಚಲು ಕಾರಣವಾದುದು ೧೯೫೩ ರಲ್ಲಿ ಕೇಂದ್ರ ಸರ್ಕಾರ ರಚಿಸಿದ ಮೊದಲನೇ ಹಿಂದುಳಿದ ವರ್ಗಗಳ ಆಯೋಗ ಅಥವಾ ಕಾಕಾಸಾಹೇಬ ಕಾಲೇಲ್ಕರ್ ಆಯೋಗ. ಇದು ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು ೧೯೫೫ರಲ್ಲಿ. ಆದರೆ ಈ ಆಯೋಗ ಹಿಂದುಳಿದ ವರ್ಗಗಳೆಂದು ಘೋಷಿಸಲು ಬೇಕಾದ ಮಾನದಂಡವನ್ನು ಮತ್ತು ಯಾವ ಅಂಶಗಳ ಆಧಾರದ ಮೇಲೆ ಹಿಂದುಳಿದಿರುವಿಕೆಯನ್ನು ತೀರ್ಮಾನಿಸಬೇಕೆಂಬುದನ್ನು ನಿರ್ಧರಿಸಲು ಸಾಧ್ಯವಾಗದ್ದರಿಂದ ಕೇಂದ್ರ ಸರ್ಕಾರ ಈ ವರದಿಯನ್ನು ಒಪ್ಪಲಿಲ್ಲ. ಅಲ್ಲದೆ, ರಾಷ್ಟ್ರಮಟ್ಟದಲ್ಲಿ ಹಿಂದುಳಿದ ವರ್ಗಗಳ ಸಮಗ್ರ ಯಾದಿ ಸಿದ್ಧಪಡಿಸುವುದು ಸಾಧ್ಯವಿಲ್ಲವೆಂಬ ತೀರ್ಮಾನವನ್ನೂ ಕೈಗೊಂಡಿತು.

ಈ ಹಿನ್ನೆಲೆಯಲ್ಲಿ, ಕೇಂದ್ರ ಸರ್ಕಾರ ಇತರ ಹಿಂದುಳಿದ ವರ್ಗಗಳಿಗೆ ರಕ್ಷಣೆ ನೀಡಲು ರಾಜ್ಯಗಳು ಸೂಕ್ತ ಆಯೋಗಗಳನ್ನು ರಚಿಸಿಕೊಳ್ಳುವಂತೆ ಆದೇಶಿಸಿತು. ಆಂಧ್ರಪ್ರದೇಶ, ಬಿಹಾರ್, ಗುಜರಾತ್, ಉತ್ತರಪ್ರದೇಶ ಮತ್ತು ತಮಿಳುನಾಡುಗಳು ರಾಜ್ಯಮಟ್ಟದ ಆಯೋಗಗಳನ್ನು ರಚಿಸಿಕೊಂಡವು. ಅಸ್ಸಾಂ, ದೆಹಲಿ, ಹರ್‍ಯಾಣ, ಹಿಮಾಚಲಪ್ರದೇಶ, ಮೇಘಾಲಯ, ಒರಿಸ್ಸಾ, ಪಾಂಡಿಚೆರಿ ಮತ್ತು ರಾಜಸ್ಥಾನಗಳು ಹಾಗೂ ಕೇಂದ್ರಾಡಳಿತ ಪ್ರದೇಶಗಳು ಹಿಂದುಳಿದ ವರ್ಗಗಳ ಪಟ್ಟಿ ಸಿದ್ಧಪಡಿಸಿದವು. ಈ ಎಲ್ಲ ರಾಜ್ಯಗಳು ಸರ್ಕಾರಿ ನೌಕರಿಯಲ್ಲಿ, ಶಿಕ್ಷಣಸಂಸ್ಥೆಗಳಲ್ಲಿ ಶೇ. ೬೭ ರಿಂದ ಶೇ. ೫ (ಪಂಜಾಬಿನಲ್ಲಿ ಮಾತ್ರ)ರ ವರೆಗೆ ಮೀಸಲಾತಿ ನೀಡುವ ಬಗೆಗೆ ಆದೇಶ ಹೊರಡಿಸಿದವು.

ಕರ್ನಾಟಕ ಸರ್ಕಾರ ೧೯೫೮ ಜುಲೈನಲ್ಲಿ ಆದೇಶವೊಂದನ್ನು ಹೊರಡಿಸಿ, ಹಿಂದುಳಿದ ವರ್ಗಗಳು, ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟು ಜನಾಂಗಗಳಿಗೆ ಶಿಕ್ಷಣ ಸಂಸ್ಥೆಗಳಲ್ಲಿ ಶೇ. ೭೫ ರಷ್ಟು ಸ್ಥಾನಗಳನ್ನು ಮೀಸಲಿಡಲು ಸೂಚಿಸಿತು. ಆದರೆ ಈ ಆಜ್ಞೆ ಉಚ್ಚ ನ್ಯಾಯಾಲಯದಿಂದ ಅಸೂರ್ಜಿತಗೊಳಿಸಲ್ಪಟ್ಟಿದ್ದರಿಂದ, ೧೯೫೯ ಜುಲೈನಲ್ಲಿ ಕರ್ನಾಟಕ ಸರ್ಕಾರ ಇನ್ನೊಮ್ಮೆ ಈ ಸಂಬಂಧದಲ್ಲಿ ಆಜ್ಞೆ ಹೊರಡಿಸಿ ಶಿಕ್ಷಣ ಸಂಸ್ಥೆಗಳಲ್ಲಿ ಹಿಂದುಳಿದವರಿಗೆ ಶೇ. ೬೫ ರಷ್ಟು ಮೀಸಲಾತಿ ಇರಬೇಕೆಂದು ಘೋಷಿಸಿತು. ಇದರಲ್ಲಿ ಪರಿಶಿಷ್ಟ ಜಾತಿ-ಜನಾಂಗಗಳೂ ಸೇರಿದ್ದವು. ಇದನ್ನು ಸಹಾ ಉಚ್ಚ ನ್ಯಾಯಾಲಯ ಮಾನ್ಯಮಾಡಲಿಲ್ಲ. ಈ ಎಲ್ಲ ಕಾರಣಗಳಿಂದಾಗಿ ಹಿಂದುಳಿದಿರುವಿಕೆಯ ಸಮಸ್ಯೆಯನ್ನು ಸರಿಯಾಗಿ ಅರಿಯಲು ಕರ್ನಾಟಕ ಸರ್ಕಾರ ೧೯೬೦ರಲ್ಲಿ ಸಮಿತಿಯೊಂದನ್ನು ರಚಿಸಿತು. ಅದಕ್ಕೆ ಅಧ್ಯಕ್ಷರಾಗಿದ್ದವರು ಡಾ. ಆರ್. ನಾಗನಗೌಡ.

## ೩.೩. ಡಾ. ಆರ್. ನಾಗನಗೌಡ ಸಮಿತಿ (೧೯೬೦)

ಕರ್ನಾಟಕ ಸರ್ಕಾರ ಈ ಸಮಿತಿಗೆ ಕೊಟ್ಟ ಹೆಸರು 'ಮೈಸೂರು ಹಿಂದುಳಿದ ವರ್ಗಗಳ ಸಮಿತಿ' ಎಂದು. ಈ ಸಮಿತಿಗೆ ವಿಧಾನಸಭಾ ಸದಸ್ಯ ಡಾ. ಆರ್. ನಾಗನಗೌಡರು ಅಧ್ಯಕ್ಷರಾಗಿದ್ದರಿಂದ ಇದು ಡಾ. ನಾಗನಗೌಡ ಸಮಿತಿಯೆಂದೇ ಹೆಸರಾಯಿತು. ಸಮಾಜದ ಕೆಲವು ವರ್ಗಗಳ ಹಿಂದುಳಿದಿರುವಿಕೆಯ ಕಾರಣಗಳನ್ನು ಪತ್ತೆ ಹಚ್ಚುವ ದಿಸೆಯಲ್ಲಿ ಈ ಸಮಿತಿ ಗಮನ ಹರಿಸಿತು. ಈ ಸಮಿತಿ ಅಧ್ಯಯನ ನಡೆಸಿದುದು ಪ್ರೌಢಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ, ಸರ್ಕಾರಿ ಉದ್ಯೋಗಗಳಲ್ಲಿ ಸರಿಯಾದ ಪ್ರಾತಿನಿಧ್ಯದ ಕೊರತೆ ಹಾಗೂ ಸಾಮಾಜಿಕವಾಗಿ ಹಿಂದುಳಿದಿರುವಿಕೆಯ ಅಂಶಗಳ ಆಧಾರದ ಮೇಲೆ. ಈ ಸಮಿತಿ ತನ್ನ ಮಧ್ಯಂತರ ವರದಿಯನ್ನು ಒಂದು ತಿಂಗಳ ಅಂತರದಲ್ಲಿ, ಅಂದರೆ ಫೆಬ್ರವರಿಯಲ್ಲಿ ಸರ್ಕಾರಕ್ಕೆ ಸಲ್ಲಿಸಿತು. ೧೯೬೧ ಮೇ ತಿಂಗಳಿನಲ್ಲಿ ತನ್ನ ಅಂತಿಮ ವರದಿ ಮಂಡಿಸುವುದರೊಡನೆ ಕೆಲವು ಶಿಫಾರಸುಗಳನ್ನು ಮಂಡಿಸಿತು. ಕೆಲವು ವರ್ಗಗಳನ್ನು 'ಹಿಂದುಳಿದ ವರ್ಗ'ಗಳೆಂದು ಮತ್ತು ಉಳಿದ ವರ್ಗಗಳನ್ನು 'ಅತ್ಯಂತ ಹಿಂದುಳಿದ ವರ್ಗ'ಗಳೆಂದು ಈ ಸಮಿತಿ ವಿಂಗಡಿಸಿತು. ತಾಂತ್ರಿಕ ಸಂಸ್ಥೆಗಳು ಮತ್ತು ಸರ್ಕಾರಿ ನೌಕರಿಗಳಲ್ಲಿ ಹಿಂದುಳಿದ ವರ್ಗಗಳವರನ್ನು ತುಂಬಿಕೊಳ್ಳಲು ಸರ್ಕಾರ ಕೈಗೊಳ್ಳಬೇಕಾದ ಕ್ರಮಗಳ ಬಗೆಗೆ ಪರಿಶೀಲಿಸಿತು.

ಡಾ. ನಾಗನಗೌಡ ಸಮಿತಿ ಹಿಂದುಳಿದ ವರ್ಗಗಳ ಅಧ್ಯಯನ ಕೈಗೊಳ್ಳುವ ಪೂರ್ವದಲ್ಲಿ, ಅಂದರೆ ೧೯೬೦ಕ್ಕೆ ಮೊದಲು ಸರ್ಕಾರದ ಆಡಳಿತದಲ್ಲಿದ್ದ ಪರಿಸ್ಥಿತಿಯನ್ನು ಕೂಲಂಕಷವಾಗಿ ಗಮನಿಸಿತು. ಜಾತಿ-ಶಿಕ್ಷಣ-ಉದ್ಯೋಗ- ಈ ಮೂರು ಅಂಶಗಳ ನಡುವಣ ಪರಸ್ಪರ ಸಂಬಂಧಗಳನ್ನು ಗುರುತಿಸುವುದರೊಡನೆ, ಅದನ್ನು ಈ ಕೆಳಗಿನ ಕೋಷ್ಟಕದಲ್ಲಿ ದಾಖಲಿಸಿದೆ :

| ಜಾತಿ/ಮತ | ೧೯೫೧ರ ಜನಗಣತಿಯ ಶೇಕಡವಾರು | ೧, ೨ ಮತ್ತು ೩ನೇ ದರ್ಜೆ ನೌಕರಿಗಳ ಶೇಕಡವಾರು | ಸಾಕ್ಷರತೆಯ ಅಂದಾಜು ಶೇಕಡವಾರು | ಮೂರು ಪ್ರೌಢಶಾಲೆಗಳಲ್ಲಿ ಒಂದು ಸಾವಿರ ಜನ ಸಂಖ್ಯೆಗೆ ಇದ್ದ ವಿದ್ಯಾರ್ಥಿಗಳ ಪ್ರಮಾಣ |
|---|---|---|---|---|
| | | ೧೯೫೯ | ೧೯೫೧ | ೧೯೫೯ |
| ಬ್ರಾಹ್ಮಣ | ೪.೨೮ | ೨೩.೨೧ | ೯೩.೮ | ೩೮.೮ |
| ಕ್ಷತ್ರಿಯ | ೦.೩೭ | ೧.೨೪ | ೪೨.೦ | ೨೨.೩ |
| ವೈಶ್ಯ | ೦.೬೮ | ೦.೯೨ | ೭೦.೭ | ೨೨.೮ |
| ಲಿಂಗಾಯಿತ | ೧೫.೫೭ | ೧೪.೧೬ | ೨೯.೮ | ೭.೧ |
| ಒಕ್ಕಲಿಗ | ೧೨.೯೮ | ೭.೫೮ | ೧೩.೩ | ೬.೦ |
| ನಿಮ್ನವರ್ಗೇತರ ಹಿಂದೂ ಜಾತಿಗಳು | ೩.೩೩ | ೧೬.೯೬ | - | ೧೨.೧ |
| ಮುಸ್ಲಿಂ | ೧೦.೦೨ | ೧೩.೨೨ | ೩೭.೨ | ೫.೦ |
| ಕ್ರೈಸ್ತ | ೨.೧೪ | ೪.೬೧ | ೬೫.೯ | ೧೮.೪ |
| ಪರಿಶಿಷ್ಟ ಜಾತಿ | ೧೩.೩೧ | ೪.೯೪ | ೪.೬ | ೩.೦ |
| ಪರಿಶಿಷ್ಟ ಪಂಗಡ | ೦.೪೧ | ೦.೦೩ | ೦.೨ | ೧.೪ |
| ರಾಜ್ಯದ ಒಟ್ಟು ಸರಾಸರಿ | ೮೩.೦೯ | ೮೬.೮೭ | ೧೯.೨ | ೬.೯ |

(ಆಕರ : ಬ್ಯಾಕ್‌ವರ್ಡ್ ಮೂವ್‌ಮೆಂಟ್ ಇನ್ ಕರ್ನಾಟಕ, ಪು. ೮೨).

ಡಾ. ನಾಗನಗೌಡ ಸಮಿತಿ ತನ್ನ ವರದಿಯಲ್ಲಿ ಹಿಂದುಳಿದ ವರ್ಗಗಳ ಇಪ್ಪತ್ತು ಗುಂಪುಗಳ ಪಟ್ಟಿ ತಯಾರಿಸಿ, ಅದರಲ್ಲಿ ೯ ಗುಂಪುಗಳನ್ನು ಮೇಲಿನಂತೆ ಹಿಂದುಳಿದ ವರ್ಗಗಳೆಂದು ಹಾಗೂ ಉಳಿದ ೧೧ ವರ್ಗಗಳನ್ನು ಅತ್ಯಂತ ಹಿಂದುಳಿದುವೆಂದು ಗುರುತಿಸಿತು. ಇವುಗಳ ಆಧಾರದ ಮೇಲೆ ತಾಂತ್ರಿಕ ಸಂಸ್ಥೆಗಳಲ್ಲಿರುವ ರಾಜ್ಯದ ಸರಾಸರಿ ಜನಸಂಖ್ಯೆಯಲ್ಲಿ ಶೇ. ೫೦ ಕ್ಕಿಂತ ಕಡಿಮೆ ವಿದ್ಯಾಭ್ಯಾಸ ಮಟ್ಟ ಇರುವ ಜಾತಿ ಗುಂಪುಗಳನ್ನು ಅತ್ಯಂತ ಹಿಂದುಳಿದಿರುವ ವರ್ಗಗಳೆಂದು ಸಮಿತಿ ಗುರುತಿಸಿತು. ತಾಂತ್ರಿಕ ವಿದ್ಯಾಸಂಸ್ಥೆಗಳಲ್ಲಿ ಶೇ. ೨೮ರಷ್ಟು ಹಿಂದುಳಿದ ವರ್ಗಗಳಿಗೆ ಮತ್ತು ಶೇ. ೨೨ ರಷ್ಟು ಅತ್ಯಂತ ಹಿಂದುಳಿದ ವರ್ಗಗಳಿಗೆ ಸ್ಥಾನಗಳನ್ನು ಮೀಸಲಿರಿಸಲು ಶಿಫಾರಸು ಮಾಡಿತು. ಹಾಗೆಯೇ, ಸರ್ಕಾರಿ ನೇಮಕಾತಿಗಳಲ್ಲಿ ಶೇ. ೪೫ರಷ್ಟು ಮೀಸಲಾತಿ ನೀಡಿ, ಅದರಲ್ಲಿ ಶೇ. ೨೧ರಷ್ಟು ಹಿಂದುಳಿದ ವರ್ಗಗಳಿಗೆ ಹಾಗೂ ಶೇ. ೨೪ ರಷ್ಟು ಅತ್ಯಂತ ಹಿಂದುಳಿದ ವರ್ಗಗಳಿಗೆ ಕಾದಿರಿಸಲು ಸಮಿತಿ ಸೂಚಿಸಿತು.

ಕರ್ನಾಟಕ ಸರ್ಕಾರ ೧೯೬೨ ಜುಲೈನಲ್ಲಿ ಡಾ. ನಾಗನಗೌಡ ಸಮಿತಿ ವರದಿಯನ್ನು ಅಂಗೀಕರಿಸಿತು. ಇದನ್ನು ವರಿಷ್ಠ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದರಿಂದ, ೧೯೬೩ರಲ್ಲಿ ಸರ್ಕಾರ ಈ ಮೀಸಲಾತಿಯನ್ನು ತಡೆಹಿಡಿಯಿತು. ಇದಕ್ಕೆ ಮೊದಲು, ೧೯೬೨ ಏಪ್ರಿಲ್‌ನಲ್ಲಿ ಕೇಂದ್ರ ಸರ್ಕಾರ ರಾಜ್ಯ ಸರ್ಕಾರಗಳಿಗೆ ಬರೆದ ಪತ್ರದಲ್ಲಿ, ದೇಶಾದ್ಯಂತ ಏಕರೀತಿಯ ಮೀಸಲಾತಿ ನೀತಿಯನ್ನು ರೂಪಿಸಬೇಕೆಂದು ಸೂಚಿಸಿದ್ದಿತು. ಅಖಿಲ ಭಾರತ ತಾಂತ್ರಿಕ ಶಿಕ್ಷಣ ಮಂಡಲಿಯ ಸಲಹೆಯನ್ನು ರಾಜ್ಯ ಸರ್ಕಾರಗಳ ಗಮನಕ್ಕೆ ತಂದ ಕೇಂದ್ರ ಸರ್ಕಾರ, ಶೇ. ೩.೫ಕ್ಕಿಂತ ಹೆಚ್ಚಿಗೆ ಪರಿಶಿಷ್ಟ ಜಾತಿ ಮತ್ತು ಪಂಗಡಗಳೂ ಸೇರಿದಂತೆ ಹಿಂದುಳಿದ ವರ್ಗಗಳಿಗೆ ಅವಕಾಶ ನೀಡಬಾರದೆಂಬ ಅದರ ಸಲಹೆಯತ್ತ ಗಮನ ಸೆಳೆದಿದ್ದಿತು.

ರಾಜ್ಯ ಸರ್ಕಾರ ೧೯೬೩ ಜುಲೈನಲ್ಲಿ ಮೀಸಲಾತಿ ಕುರಿತು ಹೊಸ ಆಜ್ಞೆ ಹೊರಡಿಸಿತು. ಸಂವಿಧಾನದ ಪರಿಚ್ಛೇದ ೧೫(೪)ರಲ್ಲಿ, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವವರು ಯಾರು ಎಂದು ನಿರ್ಧರಿಸುವುದೇ ಸಮಸ್ಯೆ ಯಾಗಿದೆಯೆಂದು ಈ ಸರ್ಕಾರಿ ಆದೇಶದ ಎರಡನೇ ಕಂಡಿಕೆಯಲ್ಲಿ ಹೇಳಲಾಗಿತ್ತು. ಆದ್ದರಿಂದ ಈ ಬಗೆಯ ವಿಂಗಡಣೆ ಆರ್ಥಿಕ ಮತ್ತು ವೃತ್ತಿಯಾಧಾರಿತವಾಗಿರತಕ್ಕದ್ದೆಂದು ಅದು ನಿರ್ಧರಿಸಿತು. ೧೯೬೩ರ ಆದೇಶ ವ್ಯಕ್ತಿ ಆಧಾರದ ಮೇಲೆ ಮೀಸಲಾತಿಯನ್ನು ನಿರ್ಧರಿಸಿತು. ಆದರೆ ಇದು ಮೆಡಿಕಲ್ ಮತ್ತು ಡೆಂಟಲ್ ಕಾಲೇಜುಗಳ ಆಯ್ಕೆ ಸಮಿತಿಯ ತೀರ್ಮಾನವನ್ನು ಪ್ರಶ್ನಿಸಿ ಅಭ್ಯರ್ಥಿಯೊಬ್ಬರು ಸಲ್ಲಿಸಿದ ರಿಟ್‌ಅರ್ಜಿ ಸಂಬಂಧದಲ್ಲಿ, ೧೯೭೧ ನವೆಂಬರ್‌ನಲ್ಲಿ ಇದು ಉಚ್ಛ ನ್ಯಾಯಾಲಯದ ಮುಂದೆ ವಿಚಾರಣೆಗೆ ಬಂದಿತು. ನ್ಯಾಯಾಧೀಶರು, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದವರಿಗಾಗಿ ಸರ್ಕಾರ ವಿಶೇಷ ಮೀಸಲಾತಿ ಜಾರಿಗೊಳಿಸಬೇಕೆಂದು ಹಾಗೂ ಪ್ರಸ್ತುತ ಸರ್ಕಾರಿ ಆಜ್ಞೆ ಅಪ್ರಾಮಾಣಿಕ ವ್ಯಕ್ತಿಗಳು ಅದನ್ನು ದುರುಪಯೋಗ ಮಾಡಿಕೊಳ್ಳಲು ಸಾಕಷ್ಟು ಅವಕಾಶ ಕಲ್ಪಿಸಿಕೊಟ್ಟಿದೆ ಯೆಂದು ತೀರ್ಪು ಬರೆದರು. ನ್ಯಾಯಾಲಯ ಗಮನಿಸಿದಂತೆ, ಹಿಂದುಳಿದಿರುವಿಕೆಗೆ ಇರುವ ಆಧಾರ ಸ್ಪಷ್ಟವಾಗಿಲ್ಲದಿರುವುದೂ ಕಾರಣವಾಗಿದ್ದಿತು. ಜಾತಿಯಾಗಲಿ, ವೃತ್ತಿಯಾಗಲಿ ಅಥವಾ ಆರ್ಥಿಕ ಸ್ಥಿತಿಯಾಗಲಿ ಹಿಂದುಳಿದಿರುವಿಕೆಯನ್ನು ನಿರ್ಧರಿಸುವಲ್ಲಿ ಸಮಾಧಾನಕರ

ಮಾನದಂಡವಾಗಲಾರದೆಂದು ನ್ಯಾಯಾಲಯ ಅಭಿಪ್ರಾಯಪಟ್ಟಿತು. ಅಲ್ಲದೆ, ಡಾ. ನಾಗನಗೌಡ ಸಮಿತಿ ವರದಿಯ ಮುಖ್ಯ ದೋಷ ವಾದರೂ ವಿವಿಧ ಜಾತಿಗಳ ಜನಸಂಖ್ಯೆಯ ಸರಿಯಾದ ಅಂದಾಜುಗಳಿರಲಿಲ್ಲ ಎಂಬುದು. ಈ ಎಲ್ಲಾ ಕಾರಣಗಳಿಂದಾಗಿ ಇಕ್ಕಟ್ಟಿಗೆ ಸಿಲುಕಿದ ಸರ್ಕಾರ, ಹಿಂದುಳಿದಿರುವಿಕೆಯನ್ನು ನಿರ್ಧರಿಸುವ ನಿರ್ಣಾಯಕ ಅಂಶಗಳ ಬಗೆಗೆ ಸಲಹೆ ಪಡೆಯಲು ಇನ್ನೊಂದು ಸಮಿತಿ ರಚಿಸಲು ನಿರ್ಧರಿಸಿತು. ೧೯೭೨ರಲ್ಲಿ ಅಸ್ತಿತ್ವಕ್ಕೆ ಬಂದ ಆಯೋಗದ ಅಧ್ಯಕ್ಷರಾಗಿ ನೇಮಕಗೊಂಡವರು ಪ್ರಸಿದ್ಧ ನ್ಯಾಯವಾದಿ ಲಕ್ಷ್ಮಣ ಜಿ. ಹಾವನೂರು ಅವರು.

### ೩.೪. ಎಲ್. ಜಿ. ಹಾವನೂರು ಆಯೋಗ (೧೯೭೨)
### (ಕರ್ನಾಟಕ ೧ನೇ ಹಿಂದುಳಿದ ವರ್ಗಗಳ ಆಯೋಗ)

ಹಿಂದುಳಿದವರಿಂದಲೇ ವಂಚನೆಗೆ ಒಳಗಾದ ಇತರ ಹಿಂದುಳಿದ ದುರ್ಬಲವರ್ಗದವರನ್ನು ಒಗ್ಗೂಡಿಸುವ, ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳುವ ಶಕ್ತಿಯನ್ನು ಅವರಲ್ಲಿ ತುಂಬುವ ತೀರಾ ಮಹತ್ವದ ಕಾರ್ಯವನ್ನು ದೇವರಾಜ ಅರಸು ಅವರ ಸರ್ಕಾರ ಹಾವನೂರು ಆಯೋಗದ ರಚನೆಯ ಮೂಲಕ ಸಾಧಿಸಿತೆನ್ನಲಡ್ಡಿಯಿಲ್ಲ. ಕರ್ನಾಟಕ ಏಕೀಕರಣದ ತರುವಾಯ ಮೀಸಲಾತಿಯನ್ನು ಇಡೀ ರಾಜ್ಯಕ್ಕೆ ವಿಸ್ತರಿಸಿದಾಗ ಹಿಂದುಳಿ ದಿರುವಿಕೆಯನ್ನು ಪ್ರಾದೇಶಿಕವಾಗಿ ಸಮರ್ಪಕವಾಗಿ ನಿರ್ಧರಿಸಲಾಗದೆ ಸರ್ಕಾರ ನ್ಯಾಯಾಂಗಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಹಿಂದುಳಿದ ವರ್ಗಗಳು ಮತ್ತು ಪರಿಶಿಷ್ಟ ಜಾತಿ-ಜನಾಂಗದವರಿಗೆ ಮೀಸಲಾತಿ ಪ್ರಕಟಿಸಿ ೧೯೬೩ರಲ್ಲಿ ಹೊರಬಿದ್ದ ಸರ್ಕಾರಿ ಆಜ್ಞೆ ರಾಜಕೀಯವಾಗಿ ಪ್ರಬಲ ಜಾತಿಗಳಾದ ಲಿಂಗಾಯಿತರು ಮತ್ತು ಒಕ್ಕಲಿಗರಿಗೆ ಇನ್ನಷ್ಟು ಅನುಕೂಲ ಮಾಡಿಕೊಟ್ಟಿತು. ಇದರಿಂದ ಇತರ ಹಿಂದುಳಿದ ದುರ್ಬಲವರ್ಗಗಗಳು, ಅಲ್ಪಸಂಖ್ಯಾತ ಸಮುದಾಯಗಳು ಹತಾಶೆಯ ಸ್ಥಿತಿಗೆ ತಲುಪಿದಾಗ ಡಿ. ದೇವರಾಜ ಅರಸು ಸಾರಥ್ಯದ ಸರ್ಕಾರ ಈ ವರ್ಗಗಳ ಪಾಲಿಗೆ ಆತ್ಮವಿಶ್ವಾಸ ಕುದುರಿಸುವ ಪ್ರೇರಕ ಶಕ್ತಿಯಾಯಿತು.

ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿಯೆಂದರೆ, ಹಿಂದುಳಿದ ವರ್ಗಗಳಿಗೆ ಪರ ಮತ್ತು ವಿರೋಧವಾದ ವಾದ-ವಿವಾದಗಳಿದ್ದುದು; ಈ ವರ್ಗಗಳು ಸಮಾನತೆಗಾಗಿ ಸುದೀರ್ಘ ಹೋರಾಟ ನಡೆಸಿದುದು; ಬೇರೆ ಬೇರೆ ಹಂತಗಳಲ್ಲಿ ಮೀಸಲಾತಿ ಚಳವಳಿಗಳು ನಡೆದುದು; ೧೯೬೩ರಲ್ಲಿ ಮೀಸಲಾತಿ ಬಗೆಗೆ ಹೊರಡಿಸಲಾದ ಸರ್ಕಾರಿ ಆದೇಶದ ನಂತರ ಹಿಂದುಳಿದ ವರ್ಗಗಳ ದೃಢೀಕರಣದ ಸೂಚನೆಗಳಿದ್ದುದು; ಮುಖ್ಯವಾಗಿ, ಹಿಂದುಳಿದ ವರ್ಗಗಳ ಚಳವಳಿಗೆ ನಿರ್ದಿಷ್ಟ ರೂಪ ನೀಡಲು ವಿವಿಧ ಜಾತಿಗಳಿಗೆ ಸೇರಿದ ರಾಜಕೀಯ ಮತ್ತು ಕಾನೂನು ವ್ಯಕ್ತಿಗಳು ಕಾರಣರಾದುದು - ಇಂಥಾ ಚಳವಳಿಗಳು ಮತ್ತು ಪ್ರಯತ್ನಗಳು ಸಹಾ ೧೯೭೨ರಲ್ಲಿ ಹಾವನೂರು ಆಯೋಗದ ರಚನೆಗೆ ಕಾರಣವಾದವು. ಹೀಗಾಗಿ ಈ ಆಯೋಗದ ರಚನೆ ಹಿಂದುಳಿದ ವರ್ಗಗಳ ಹೋರಾಟಕ್ಕೆ ಸಂಬಂಧಿಸಿದಂತೆ ಪ್ರಮುಖ ಚಾರಿತ್ರಿಕ ಘಟನೆಯೆನಿಸಿತು.

೧೯೭೨ ಆಗಸ್ಟ್‌ನಲ್ಲಿ ಆದ ಹಾವನೂರು ಆಯೋಗದ ರಚನೆ ಹಿಂದುಳಿದವರ ಕಲ್ಯಾಣಕ್ಕಾಗಿ ನಡೆದ ಮೊದಲ ಪ್ರಾಮಾಣಿಕ ಪ್ರಯತ್ನವೆಂಬ ಸಾರ್ವತ್ರಿಕ ಮನ್ನಣೆ

ಗಳಿಸಿದಂಥದು. ಹೆಸರಾಂತ ನ್ಯಾಯವಾದಿ ಎಲ್. ಜಿ. ಹಾವನೂರರು ಅಧ್ಯಕ್ಷರಾಗಿದ್ದ ಈ ಆಯೋಗದಲ್ಲಿ ವೈ. ರಾಮಚಂದ್ರ, ಕೆ. ಆರ್. ಶ್ರೀನಿವಾಸಲುನಾಯ್ಡು, ಕೆ. ಎಂ. ನಾಗಣ್ಣ, ಎ. ಮಸಣಶೆಟ್ಟಿ, ಧರಮ್‌ಸಿಂಗ್ ಮತ್ತು ಪಿ. ಟಿ. ಹಬೀಬ್ ಅವರು ಸದಸ್ಯರಾಗಿದ್ದರು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳನ್ನು ಹೊರತುಪಡಿಸಿ ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿರುವ ಮತ್ತು ಇತರ ಹಿಂದುಳಿದ ವರ್ಗಗಳನ್ನು ನಿರ್ಧರಿಸುವ ನಿರ್ಣಾಯಕ ಅಂಶಗಳ ಬಗೆಗೆ ಸಲಹೆ ನೀಡುವುದು; ಈ ವರ್ಗಗಳ ಬಗೆಗೆ ವಿವರವಾಗಿ ಅಧ್ಯಯನ ನಡೆಸಿ ಇವುಗಳ ಉನ್ನತಿಗಾಗಿ ಸರ್ಕಾರ ಕೈಗೊಳ್ಳಬೇಕಾದ ಕ್ರಮಗಳ ಬಗೆಗೆ ಶಿಫಾರಸು ಮಾಡುವುದು; ಹಿಂದುಳಿದ ವರ್ಗಗಳ ಪಟ್ಟಿ ತಯಾರಿಸುವುದು; ಈ ವರ್ಗಗಳಿಗೆ ಕಲ್ಪಿಸಬೇಕಾದ ಮೀಸಲಾತಿ ಪ್ರಮಾಣದ ಬಗೆಗೆ ಸಲಹೆ ನೀಡುವುದು, ಇತ್ಯಾದಿಯನ್ನು ಸೂಚಿಸಿ ಸರ್ಕಾರ ಆದೇಶ ಹೊರಡಿಸಿತು. ಒಟ್ಟು ಮೂರು ವರ್ಷಗಳ ಕಾಲಾವಧಿ ತೆಗೆದುಕೊಂಡ ಆಯೋಗ ತನ್ನ ವರದಿಯನ್ನು ಸರ್ಕಾರಕ್ಕೆ ಒಪ್ಪಿಸಿದುದು ೧೯೭೫ ನವೆಂಬರ್‌ನಲ್ಲಿ.

ಹಾವನೂರು ವರದಿಯು ಸಿದ್ಧತೆ ಅತ್ಯಂತ ವ್ಯವಸ್ಥಿತವಾಗಿ ನಡೆದುದು ವಿಶೇಷಾಂಶ ಗಳಲ್ಲೊಂದು. ೪೨೫ ಪರಿಶೀಲಕರು ೩,೫೫,೦೦೦ ವ್ಯಕ್ತಿಗಳಿಂದ ಆಯೋಗದ ವರದಿಗೆ ಆಧಾರವಾದ ಅಂಕಿ-ಅಂಶಗಳನ್ನು ಸಂಗ್ರಹಿಸಿದರು. ೨೦೦ ಜಾತಿಗಳ ವಿವರವನ್ನು ಈ ವರದಿ ಪಡೆದುಕೊಂಡಿತು. ೪೦೦ ಸಾಕ್ಷಿದಾರರು ತಮ್ಮ ಅಭಿಪ್ರಾಯ ನೀಡಿದರು. ಮುಖ್ಯ ವರದಿ ಸಹಿತ ಸರ್ಕಾರಿ ಆದೇಶಗಳು, ನ್ಯಾಯಾಲಯದ ಆದೇಶಗಳು, ಅನುಬಂಧಗಳು, ಜನಸಂಖ್ಯೆ ಹಾಗೂ ಶೈಕ್ಷಣಿಕ ವಿವರಗಳು, ವಿವಿಧ ಜಾತಿಗಳಿಗೆ ಸಂಬಂಧಿಸಿದ ಸರ್ಕಾರಿ ಸೇವೆಯಲ್ಲಿನ ಪ್ರಾತಿನಿಧ್ಯದ ವಿವರಗಳು, ಸಾಮಾಜಿಕ ಮತ್ತು ಶೈಕ್ಷಣಿಕ ಸಮೀಕ್ಷೆಯ ವಿವರಗಳು ಸುಮಾರು ೨೦೦೦ ಪುಟಗಳಲ್ಲಿ ಅಡಕಗೊಂಡಿವೆ. ಸಮೀಕ್ಷೆಗೆ ಪ್ರಶ್ನಾವಳಿಗಳನ್ನೂ ಉಪಯೋಗಿಸಲಾಯಿತು. ಜನರ ಸಮಾಜೋ-ಆರ್ಥಿಕ ಸ್ಥಿತಿ-ಗತಿಗಳನ್ನು ಅಧ್ಯಯನ ನಡೆಸಲು ೧೯೩ ರಷ್ಟು ಗ್ರಾಮಗಳನ್ನು, ೧೮೫ರಷ್ಟು ನಗರ ಪ್ರದೇಶಗಳನ್ನು ಈ ಆಯೋಗ ತನ್ನ ವ್ಯಾಪ್ತಿಗೆ ಸೇರಿಸಿಕೊಂಡಿತು. ಒಟ್ಟು ಜನಸಂಖ್ಯೆಯಲ್ಲಿ ೩,೫೫,೦೦೦ದಷ್ಟನ್ನು, ಅಂದರೆ ಶೇ. ೧.೧೮ರಷ್ಟನ್ನು ತನ್ನ ಸಮೀಕ್ಷೆಯಲ್ಲಿ ಬಳಸಿಕೊಂಡಿತು. ಹಾವನೂರು ಆಯೋಗಕ್ಕೆ ಮನವಿ ಸಲ್ಲಿಸಿದ ಜಾತಿಗಳು ಹಾಗೂ ಮನವಿ ಪತ್ರಗಳ ಸಂಖ್ಯೆ (ಕಂಸದಲ್ಲಿ) ಇಂತಿವೆ : ರಾಜಪೂತ (೭೫), ಬೇಡ (೪೭), ಮುಸ್ಲಿಂ (೩೯), ಗಾಣಿಗ (೩೫), ವಿಶ್ವಕರ್ಮ (೨೦), ಗೊಲ್ಲ (೨೦), ದರ್ಜಿ (೧೯), ಬಲಿಜ (೧೦), ಬ್ರಾಹ್ಮಣ (೫), ಒಕ್ಕಲಿಗ (೬), ಮೇದ (೭೦), ಕುಂಬಾರ (೪೫), ನಾಯಿಂದ (೩೫), ಅಗಸ (೩೪), ಈಡಿಗ (೨೦), ಬಂಜಾರ (೧೯), ಮರಾಠ (೧೩), ಕ್ರೈಸ್ತ (೭), ಲಿಂಗಾಯಿತ (೪) ಹಾಗೂ ವೈಶ್ಯ (೧).

ಹಾವನೂರು ಆಯೋಗವು ಭಾರತೀಯ ಸಮಾಜ ಪರಿಶಿಷ್ಟ ಜಾತಿ ಮತ್ತು ವರ್ಗಗಳು ಹಾಗೂ ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿರುವ ವರ್ಗಗಳಿಂದ ಕೂಡಿದೆ ಯೆಂಬುದನ್ನು; ಪರಿಶಿಷ್ಟ ಜಾತಿ ಮತ್ತು ವರ್ಗಗಳಂತೆ ಇತರ ಅನೇಕ ವರ್ಗಗಳು ಅನ್ಯಾಯ ಹಾಗೂ ಶೋಷಣೆಗೆ ಒಳಗಾಗಿರುವುದನ್ನು ಎತ್ತಿ ತೋರಿಸಿದೆ. ಈ ವರ್ಗಗಳು ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ತಾರತಮ್ಯಕ್ಕೆ ಒಳಪಟ್ಟಿರುವುದನ್ನು ಗುರುತಿಸಿದೆ.

ಸಮಾಜದಲ್ಲಿ ಮುಂದುವರೆದ ಜನರ ಮನೋಭಾವ ಮತ್ತು ಸರ್ಕಾರದ ನಿರಾಸಕ್ತಿಗಳನ್ನು ಪ್ರಮುಖವಾಗಿ ಪ್ರಸ್ತಾಪಿಸಿದೆ. ಹಿಂದುಳಿದ ವರ್ಗಗಳನ್ನು ನಿಶ್ಚಯಿಸುವ ನಿಟ್ಟಿನಲ್ಲಿ ಈ ಆಯೋಗ ಚಾರಿತ್ರಿಕ, ನ್ಯಾಯಿಕ ಹಾಗೂ ಸಾಂವಿಧಾನಿಕ ವಿವರಗಳನ್ನು ವಿಶ್ಲೇಷಿಸಿದೆ. ಹಿಂದುಳಿದ ವರ್ಗಗಳ ಮೀಸಲಾತಿಗೆ ಸಂಬಂಧಿಸಿದಂತೆ ವಿವಿಧ ನ್ಯಾಯಾಲಯಗಳ ತೀರ್ಮಾನಗಳನ್ನು ಆದ್ಯಂತವಾಗಿ ಪರಿಶೀಲಿಸಿದೆ. ಹಿಂದುಳಿದ ವರ್ಗಗಳ ಮೀಸಲಾತಿಯಲ್ಲಿ ನ್ಯಾಯಾಲಯದ ಆದೇಶಗಳ ವಿಶ್ಲೇಷಣೆ ಹಾವನೂರು ಆಯೋಗದ ಪ್ರಮುಖ ಭಾಗವೆಂಬುದು ಗಮನಾರ್ಹ. ಇದು ರಾಜ್ಯದ ಸುಮಾರು ೧೭೧ ಜಾತಿಗಳ ಸಾಮಾಜಿಕ ಹಾಗೂ ಶೈಕ್ಷಣಿಕ ಸ್ಥಿತಿ - ಗತಿಗಳ ವಾಸ್ತವ ಚಿತ್ರಣ ನೀಡುತ್ತದೆ.

ಆಯೋಗ ತಾನು ಸಂಗ್ರಹಿಸಿದ ವಿಪುಲ ಮಾಹಿತಿ ಆಧಾರದ ಮೇಲೆ ಕಂಡುಕೊಂಡ ಸಂಗತಿಯೆಂದರೆ, ವಿವಿಧ ಜಾತಿಗಳ ಸಾಮಾಜಿಕ ಹಾಗೂ ಶೈಕ್ಷಣಿಕ ಹಿಂದುಳಿದಿರುವಿಕೆಗೆ ಈ ಮುಂದಿನ ಕೆಲವು ಅಂಶಗಳು ಪ್ರಮುಖ ಕಾರಣವಾಗಿವೆ ಎಂಬುದು. ಅವುಗಳೆಂದರೆ, ರಾಜ್ಯದ ಜನಸಂಖ್ಯೆಯಲ್ಲಿ ಬಹುಪಾಲು ಗ್ರಾಮೀಣ ಹಾಗೂ ಸಂಪರ್ಕರಹಿತ ಪ್ರದೇಶಗಳಲ್ಲಿ ವಾಸಿಸುತ್ತಿರುವುದು; ಕಡಿಮೆ ಆರ್ಥಿಕಾನುಕೂಲ ಹೊಂದಿರುವುದು; ಕಡಿಮೆ ಆದಾಯ ತರುವ ಉದ್ಯೋಗಗಳನ್ನು ಅವಲಂಬಿಸಿರುವುದು; ಮುಂದುವರೆದ ಜಾತಿಗಳ ಅಸಹಕಾರ ಮತ್ತು ತಾರತಮ್ಯ; ಕಡಿಮೆ ಅಂತಸ್ತು ಮತ್ತು ಕೀಳರಿಮೆಯ ಸಮಸ್ಯೆ; ಸುತ್ತಲೂ ಆವರಿಸಿರುವ ಕಟ್ಟುನಿಟ್ಟಾದ ಸಾಮಾಜಿಕ ನಿಷೇಧಗಳು; ಸಾಮಾಜಿಕ ಸ್ಥಾನ-ಮಾನಗಳು ತಪ್ಪಿಹೋಗಿರುವುದು; ಗ್ರಾಮೀಣ ಪ್ರದೇಶಗಳಲ್ಲಿ ಶೈಕ್ಷಣಿಕ ಸಂಸ್ಥೆಗಳು ಸ್ಥಾಪಿತವಾಗದೇ ಇರುವುದು; ತಮ್ಮದೇ ವಿದ್ಯಾರ್ಥಿನಿಲಯಗಳ ಸ್ಥಾಪನೆಗೆ ಅಗತ್ಯ ಸಂಪನ್ಮೂಲಗಳ ಕೊರತೆ; ಶಿಕ್ಷಣ ಸಂಸ್ಥೆಗಳು ಮತ್ತು ವಿದ್ಯಾರ್ಥಿನಿಲಯಗಳನ್ನು ಆರಂಭಿಸಲು ಸರ್ಕಾರದ ಅನಾಸಕ್ತಿ; ಖಾಸಗಿ ಶಾಲೆಗಳನ್ನು ಪ್ರಾರಂಭಿಸುವಲ್ಲಿ ಮುಂದುವರೆದ ಮತ್ತು ಹಿಂದುಳಿದ ಜನಾಂಗಗಳ ನಡುವೆ ಶೈಕ್ಷಣಿಕ ಅಸಮಾನತೆ ಹೆಚ್ಚಿಸಿರುವ ಸರ್ಕಾರದ ನೀತಿ; ನೌಕರಿ ಮತ್ತು ಶಿಕ್ಷಣದಲ್ಲಿ ಪ್ರತಿಭೆಯನ್ನು ಮಾತ್ರವೇ ಪರಿಗಣಿಸುವ ಸರ್ಕಾರದ ನೀತಿ; ಶಾಲೆಗಳನ್ನು ಮಧ್ಯದಲ್ಲಿ ತ್ಯಜಿಸುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳ ಸಮಸ್ಯೆ; ಮುಂದುವರೆದ ಜನಾಂಗಗಳ ಅಸಹಕಾರ ಮತ್ತು ಪ್ರೋತ್ಸಾಹಿಸದೇ ಇರುವ ಮನೋಭಾವ; ಪ್ರಸಕ್ತ ಶಿಕ್ಷಣ ವ್ಯವಸ್ಥೆ ಹಿಂದುಳಿದ ವರ್ಗಗಳಿಗೆ ಸಹಕಾರಿಯಾಗದೇ ಇರುವುದು; ಹಿಂದುಳಿದ ವಿದ್ಯಾರ್ಥಿಗಳಿಗೆ ಕಡ್ಡಾಯ ಶಿಕ್ಷಣದ ವೈಫಲ್ಯ, ಇತ್ಯಾದಿ.

ಹಾವನೂರು ಆಯೋಗವು ಹಿಂದುಳಿದ ವರ್ಗಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಿತು: ೧. ಹಿಂದುಳಿದ ಸಮುದಾಯಗಳು, ೨. ಹಿಂದುಳಿದ ಜಾತಿಗಳು, ಹಾಗೂ ೩. ಹಿಂದುಳಿದ ಬುಡಕಟ್ಟುಗಳು. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ. ೧೪ ರಷ್ಟು ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟುಗಳ ಜೊತೆಗೆ ಶೇ. ೪೪.೫೨ರಷ್ಟು ಜನಸಂಖ್ಯೆಯನ್ನು 'ಇತರ ಹಿಂದುಳಿದ ವರ್ಗ'ಗಳೆಂದು ನಿರ್ಧರಿಸಿತು. ಈ ಆಯೋಗದ ಶಿಫಾರಸುಗಳಲ್ಲಿ, ಭಾರತೀಯ ಸಂವಿಧಾನದ ಪರಿಚ್ಛೇದ ೧೫(೪) ಹಾಗೂ ೧೬(೪)ರ ಪ್ರಕಾರ ಜಾತಿಗಳು, ಸಮುದಾಯಗಳು ಹಾಗೂ ಬುಡಕಟ್ಟುಗಳನ್ನು ಹಿಂದುಳಿದ ಪಂಗಡಗಳೆಂದು ಪರಿಗಣಿಸಬೇಕು; ಅವುಗಳಿಗೆ ವಿದ್ಯಾಸಂಸ್ಥೆಗಳಲ್ಲಿ ಹಾಗೂ ಸರ್ಕಾರಿ

ಹುದ್ದೆಗಳಲ್ಲಿ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳನ್ನು ಬಿಟ್ಟು) ಶೇ. ೩೨ ರಷ್ಟು ಮೀಸಲಾತಿ ದೊರಕಿಸಬೇಕು. ಈ ಮೀಸಲಾತಿ ಪ್ರಮಾಣ ಈ ಕೆಳಕಂಡ ಕೋಷ್ಟಕದಲ್ಲಿರುವಂತೆ ಹಂಚಿಕೆಯಾಗಬೇಕೆಂದು ಶಿಫಾರಸು ಮಾಡಲಾಗಿದ್ದಿತು:

**ಪರಿಚ್ಛೇದ ೧೫(೪) ಪ್ರಕಾರ ಮೀಸಲಾತಿ**

| ವರ್ಗಗಳು | ಜನಸಂಖ್ಯೆ (ಶೇಕಡವಾರು) | ಮೀಸಲಾತಿ ಪ್ರಮಾಣ |
|---|---|---|
| ೧. ಹಿಂದುಳಿದ ಕೋಮುಗಳು | ೨೨.೦೩ | ಶೇ. ೧೬ |
| ೨. ಹಿಂದುಳಿದ ಜಾತಿಗಳು | ೧೪.೪೯ | ಶೇ. ೧೦ |
| ೩. ಹಿಂದುಳಿದ ಬುಡಕಟ್ಟುಗಳು | ೮.೦೦ | ಶೇ. ೬ |
| ಒಟ್ಟು | ೪೪.೫೨ | ಶೇ. ೩೨ |

**ಪರಿಚ್ಛೇದ ೧೬(೪) ಪ್ರಕಾರ ಮೀಸಲಾತಿ**

| | | |
|---|---|---|
| ೧. ಹಿಂದುಳಿದ ಕೋಮುಗಳು | ೧೯.೨೦ | ಶೇ. ೧೬ |
| ೨. ಹಿಂದುಳಿದ ಜಾತಿಗಳು | ೧೪.೪೭ | ಶೇ. ೧೦ |
| ೩. ಹಿಂದುಳಿದ ಬುಡಕಟ್ಟುಗಳು | ೮.೦೦ | ಶೇ. ೬ |
| ಒಟ್ಟು | ೪೧.೬೭ | ಶೇ. ೩೨ |

ಹಾವನೂರು ಆಯೋಗ ಮಾಡಿರುವ ಶಿಫಾರಸಿನ ಪ್ರಕಾರ, ಈ ನಿರ್ದಿಷ್ಟ ವರ್ಗಗಳಿಗೆ ಮೀಸಲಾಗಿರುವ ಸ್ಥಾನಗಳು ಮತ್ತು ಹುದ್ದೆಗಳಿಗೆ ಈ ವರ್ಗದ ಅರ್ಹ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಖಾಲಿ ಸ್ಥಾನಗಳನ್ನು ಇತರ ವರ್ಗಗಳಿಂದ ಭರ್ತಿ ಮಾಡಬಹುದು. ಹಿಂದುಳಿದ ವರ್ಗಗಳ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಪರಿಶಿಷ್ಟ ಜಾತಿ - ವರ್ಗಗಳಿಂದ ಭರ್ತಿ ಮಾಡಬಹುದು. ಒಂದು ವೇಳೆ ಈ ಯಾವುದೇ ಗುಂಪುಗಳ ಅಭ್ಯರ್ಥಿಗಳು ದೊರೆಯದೆ ಹೋದಾಗ ಮಾತ್ರ ಈ ವರ್ಗಗಳಿಗೆ ಮೀಸಲಾದ ಸ್ಥಾನಗಳು ಹಾಗೂ ಹುದ್ದೆಗಳನ್ನು ಸಾಮಾನ್ಯವರ್ಗದವರಿಂದ ಭರ್ತಿ ಮಾಡಬಹುದು; ಈ ಮೀಸಲಾತಿಯನ್ನು ಆಯ್ಕೆ ಮತ್ತು ಬಡ್ತಿಗಳಿಗೂ ಅನ್ವಯಿಸಬೇಕು. ಈ ಹಿಂದುಳಿದ ವರ್ಗಗಳಿಗೆ ಸೇರಿದ ಪ್ರತಿನಿಧಿಗಳು ಅಭ್ಯರ್ಥಿಗಳ ಆಯ್ಕೆ ಸಮಿತಿಯಲ್ಲಿರಬೇಕು. ಹಿಂದುಳಿದ ವರ್ಗಗಳು ಅಭ್ಯರ್ಥಿಗಳು ಸಾಮಾನ್ಯ ಕ್ಷೇತ್ರ(ಮೆರಿಟ್ ಪೂಲ್)ದಿಂದ ಆಯ್ಕೆಯಾದಲ್ಲಿ, ಅವರ ಆಯ್ಕೆ ಮೀಸಲು ಸ್ಥಾನಗಳಿಗೆ ಹೊರತಾದುವೆಂದು ಪರಿಗಣಿಸಬೇಕು. ಹಿಂದುಳಿದವರ ನೇಮಕಕ್ಕೆ ಸಂಬಂಧಿಸಿದಂತೆ ನೌಕರಿಗೆ ಸೇರುವಾಗಲಾಗಲಿ, ನಿವೃತ್ತಿ ಹೊಂದುವಾಗಲಾಗಲಿ ಅವರ ಕನಿಷ್ಠ ವಯೋಮಿತಿಯನ್ನು ಇತರರಿಗಿಂತ ಐದು ವರುಷ ಹೆಚ್ಚಿಸಲ್ಪಡಬೇಕು. ಹಿಂದುಳಿದ ವರ್ಗ, ಪರಿಶಿಷ್ಟ ಜಾತಿ - ಪಂಗಡ - ಬುಡಕಟ್ಟುಗಳ ಅಭ್ಯರ್ಥಿಗಳು ಇತರರೊಡನೆ ಸ್ಪರ್ಧಿಸುವಂತಾಗಲು ಅವರಿಗೆ ವಿಶ್ವವಿದ್ಯಾಲಯಗಳಲ್ಲಿ ಅಥವಾ ಇತರ ಸಂಸ್ಥೆಗಳಲ್ಲಿ ವಿಶೇಷವಾಗಿ ಬೋಧಿಸುವ ಕಾರ್ಯವನ್ನು ಸರ್ಕಾರ ಕೈಗೊಳ್ಳಬೇಕು. ಮೀಸಲಾತಿ ಸರ್ಕಾರಿ

ಸೇವಾಸಂಸ್ಥೆಗಳಲ್ಲಿ ಮಾತ್ರವಲ್ಲದೆ, ಅರೆ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು, ನಗರಸಭೆಗಳು ಹಾಗೂ ಅನುದಾನ ಪಡೆಯುವ ವಿದ್ಯಾಸಂಸ್ಥೆಗಳಿಗೂ ಅನ್ವಯಿಸಬೇಕು; ನೇಮಕಾತಿ ಸಂದರ್ಭದಲ್ಲಿ ಆಯ್ಕೆ ಸಮಿತಿ ನಿರ್ದಿಷ್ಟ ಪಡಿಸಿದ ಹಿಂದುಳಿದ ಕೋಮು, ಜಾತಿ ಹಾಗೂ ಬುಡಕಟ್ಟುಗಳ ಪ್ರತಿನಿಧಿಗಳನ್ನು ಹೊಂದಿರಬೇಕು. ಈ ವರ್ಗಗಳಿಗೆ ಮೀಸಲಾತಿ ಕನಿಷ್ಠ ೧೦ ವರ್ಷಗಳವರೆಗೆ ಇರಬೇಕು ಹಾಗೂ ಆ ನಂತರ ಇದನ್ನು ಪರಾಮರ್ಶಿಸಬೇಕು. ಪ್ರಾಥಮಿಕ ಶಾಲೆಗಳು ಮತ್ತು ಇತರ ಶಿಕ್ಷಣ ಸಂಸ್ಥೆಗಳ ದಾಖಲಾತಿ ಪುಸ್ತಕದಲ್ಲಿ ವಿದ್ಯಾರ್ಥಿಗಳ ಜಾತಿ ನಮೂದು ಹೊಂದಿರುವ ಕಾಲಂ ಇರಬೇಕು ಹಾಗೂ ಮುಖ್ಯಸ್ಥರು ಉದ್ಯೋಗಿಗಳ ಜಾತಿ ಬಗೆಗೆ ನಮೂದುಮಾಡಬೇಕು. ಸಾಕಷ್ಟು ಸಂಖ್ಯೆಯ ಉಚಿತ ವಿದ್ಯಾರ್ಥಿನಿಲಯಗಳನ್ನು ಸರ್ಕಾರ ಪ್ರಾರಂಭಿಸಬೇಕು. ಪಂಚಾಯತ್ ಕೇಂದ್ರಗಳಲ್ಲಿ ಹಾಗೂ ಕಾಲೇಜುಗಳಿರುವ ಪ್ರತಿಯೊಂದು ಪಟ್ಟಣದಲ್ಲೂ ಕನಿಷ್ಠ ಒಂದೊಂದು ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಬೇಕು. ಈ ವಿದ್ಯಾರ್ಥಿನಿಲಯಗಳಲ್ಲಿ ಪೋಷಕರ ಆದಾಯ ವಾರ್ಷಿಕ ರೂ. ೬,೦೦೦ ಕ್ಕಿಂತ ಕಡಿಮೆಯಿರುವ ವಿದ್ಯಾರ್ಥಿಗಳಿಗೆ ಪ್ರವೇಶವಿರಬೇಕು. ಶುಲ್ಕ ರಿಯಾಯಿತಿ, ವಿದ್ಯಾರ್ಥಿನಿಲಯ ಸೌಲಭ್ಯ ಹಾಗೂ ವಿದ್ಯಾರ್ಥಿವೇತನಗಳು ಈ ಗುಂಪುಗಳಿಗೆ ದೊರಕಬೇಕು. ವೈದ್ಯಕೀಯ, ತಾಂತ್ರಿಕ, ಕೃಷಿ ಮತ್ತು ಇತರ ತಾಂತ್ರಿಕ ವಿಷಯಗಳಲ್ಲಿ ಉನ್ನತ ಹಾಗೂ ವಿಶೇಷ ವ್ಯಾಸಂಗಕ್ಕಾಗಿ ವಿದೇಶಗಳಲ್ಲಿ ತರಬೇತು ಪಡೆಯಲು ಈ ವರ್ಗಗಳ ಒಂದು ನೂರು ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ನೀಡಬೇಕು. ಹಿಂದುಳಿದ ಪ್ರತಿನಿಧಿಗಳಿಂದ ಕೂಡಿದ 'ಹಿಂದುಳಿದ ವರ್ಗಗಳ ಸಲಹಾ ಮಂಡಳಿ'ಯೊಂದು ಅಸ್ತಿತ್ವಕ್ಕೆ ಬರಬೇಕು. ಹಿಂದುಳಿದ ವರ್ಗಗಳ ಪ್ರತ್ಯೇಕ ನಿರ್ದೇಶನಾಲಯವೊಂದು ರಚನೆಗೊಳ್ಳಬೇಕು. ಈ ವರ್ಗಗಳ ಆರ್ಥಿಕ ಉನ್ನತಿಗಾಗಿ ಪ್ರತ್ಯೇಕ ಹಣಕಾಸು ನಿಗಮವೊಂದು ಸ್ಥಾಪನೆಗೊಳ್ಳಬೇಕು. ಇವೆಲ್ಲದರ ಜೊತೆ ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಬುಡಕಟ್ಟುಗಳು ಹಾಗೂ ಇತರ ಹಿಂದುಳಿದ ವರ್ಗಗಳ ಸಮಸ್ಯೆಗಳನ್ನು ಅಧ್ಯಯನ ಮಾಡಲು, ಉನ್ನತಿಗೆ ಅಗತ್ಯ ಕ್ರಮಗಳನ್ನು ಸೂಚಿಸಲು ಸಂಶೋಧನ ಸಂಸ್ಥೆಯೊಂದನ್ನು ರಚಿಸಬೇಕು, ಇತ್ಯಾದಿ.

ಹಾವನೂರು ಆಯೋಗ ವ್ಯಕ್ತಪಡಿಸಿದ ಇತರ ಅಂಶಗಳಲ್ಲಿ ಕೆಲವನ್ನು ಗಮನಿಸುವುದಾದರೆ, ಆಯೋಗ ಲಿಂಗಾಯಿತ, ಮುಸ್ಲಿಂ ಹಾಗೂ ಕ್ರೈಸ್ತರನ್ನು ಹಿಂದುಳಿದವರೆಂದು ಪರಿಗಣಿಸಿಲ್ಲ. ಮಹಿಳೆಯರಿಗೆ ಉಚಿತ ಶಿಕ್ಷಣ, ವಸತಿನಿಲಯಗಳ ಸೌಲಭ್ಯ, ಉನ್ನತ ಶಿಕ್ಷಣದಲ್ಲಿ ಸ್ಥಾನಗಳನ್ನು ಮೀಸಲಿಡುವುದು ಮೊದಲಾದುವುಗಳ ಬಗೆಗೆ ಸಾಮಾನ್ಯ ಶಿಫಾರಸು ಮಾಡಿದೆ. ಸಂವಿಧಾನದ ೧೫(೪) ಮತ್ತು ೧೬(೪) ಅನುಚ್ಛೇದಗಳಲ್ಲಿ ವಿಶೇಷ ಸವಲತ್ತು ಹೊಂದಿಲ್ಲದ ಅಲೆಮಾರಿ ಮತ್ತು ಕ್ರಿಮಿನಲ್ ಬುಡಕಟ್ಟುಗಳಲ್ಲಿ ಕೆಲವು ಪರಿಶಿಷ್ಟ ಜಾತಿ ಮತ್ತು ವರ್ಗಗಳಿಗಿಂತಲೂ ಹಿಂದುಳಿದಿವೆಯೆಂಬುದನ್ನು ಆಯೋಗ ಗುರುತಿಸಿದೆ. ಸಾಂಪ್ರದಾಯಿಕ ವೃತ್ತಿಗಳನ್ನು ಅಭಿವೃದ್ಧಿಗೊಳಿಸುವುದರೊಡನೆ ಹಿಂದುಳಿದ ವರ್ಗಗಳ ಆರ್ಥಿಕ ಹಿಂದುಳಿದಿರುವಿಕೆಯನ್ನು ಪರಿಹರಿಸಬಹುದೆಂಬ ಆಯೋಗದ ಸೂಚನೆ ಮಹತ್ವದ್ದೆನಿಸಿದೆ. ಸಾರ್ವಜನಿಕ ಆರೋಗ್ಯ, ಗ್ರಾಮೀಣ ವಸತಿ ಹಾಗೂ ಗ್ರಾಮೀಣ ನೀರು ಪೂರೈಕೆಗಳಲ್ಲಿ ಸುಧಾರಣೆ ಅಗತ್ಯವೆಂಬುದನ್ನು; ಇದರಿಂದ ಹಿಂದುಳಿದ ವರ್ಗಗಳ ಕಲ್ಯಾಣ ಮಾತ್ರವಲ್ಲ ಸಮಾಜದ ಎಲ್ಲ ವರ್ಗಗಳ ಯೋಗಕ್ಷೇಮದ ದೃಷ್ಟಿಯಿಂದಲೂ ಇದು ಅಗತ್ಯವೆಂಬುದನ್ನು ಆಯೋಗ ಒತ್ತಿ ಹೇಳಿದೆ.

ಸೂಕ್ತ ವಿಮರ್ಶೆ - ಪರಾಮರ್ಶೆಗಳ ನಂತರ ರಾಜ್ಯ ಸರ್ಕಾರ ಹಾವನೂರು ಆಯೋಗದ ಎಲ್ಲಾ ಶಿಫಾರಸುಗಳನ್ನು ಮಾನ್ಯ ಮಾಡಿತು. ಈ ಸಂಬಂಧದ ಸರ್ಕಾರಿ ಆದೇಶ ೧೯೭೭ ಫೆಬ್ರವರಿ ೨೨ ರಂದು ಹೊರಬಿದ್ದಿತು. ಆದರೆ ಈ ಆದೇಶಕ್ಕೆ ೧೯೭೮ ಮೇ ಮತ್ತು ಜೂನ್ ತಿಂಗಳುಗಳಲ್ಲಿ ತಿದ್ದುಪಡಿ ಆದೇಶಗಳನ್ನು ಹೊರಡಿಸಲಾಯಿತು. ಆ ಪ್ರಕಾರ, ಮುಸ್ಲಿಮರನ್ನು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿಸುವುದು. ಎರಡನೇ ಸಂತತಿ (ಜನರೇಶನ್)ವರೆಗಿನ ಪರಿಶಿಷ್ಟ ಜಾತಿ-ವರ್ಗಗಳಿಂದ ಮತಾಂತರಗೊಂಡ ಕ್ರೈಸ್ತರನ್ನು ಹಿಂದುಳಿದ ಜಾತಿಗಳ ಪಟ್ಟಿಯಲ್ಲಿ ಸೇರಿಸುವುದು. ೧೫(೪) ಮತ್ತು ೧೬(೪) ಅನುಚ್ಛೇದಗಳ ಅನ್ವಯ ಮೀಸಲಾತಿ ಹಾಗೂ ಇತರ ಸೌಲಭ್ಯಗಳನ್ನು ಪಡೆಯುವಲ್ಲಿ ಪೋಷಕರ ಆದಾಯ ಮಿತಿಯನ್ನು ರೂ. ೮,೦೦೦ಕ್ಕೆ (ಆ ನಂತರ ರೂ. ೧೦,೦೦೦ಕ್ಕೆ) ನಿಗದಿಗೊಳಿಸುವುದು. ಹಿಂದುಳಿದ ಸಮುದಾಯದ ಮೀಸಲಾತಿ ಪ್ರಮಾಣ ಶೇ. ೧೬ ರಿಂದ ಶೇ. ೨೦ಕ್ಕೆ ಹೆಚ್ಚಿಸುವುದು. ಹಿಂದುಳಿದ ವಿಶೇಷ ವರ್ಗಕ್ಕೆ (ಬಡತನ ಹಾಗೂ ಕೆಳಮಟ್ಟದ ಉದ್ಯೋಗ ಅವಲಂಬಿಸಿದವರಿಗೆ) ಮೀಸಲಾತಿಯನ್ನು ಶೇ. ೫ ಕ್ಕೆ (ಆ ನಂತರ ಶೇ. ೧೫ ಕ್ಕೆ) ನಿಗದಿಪಡಿಸುವುದು, ಇತ್ಯಾದಿ.

ರಾಜ್ಯ ಸರ್ಕಾರ ನಿಗದಿಪಡಿಸಿದ ಮೀಸಲಾತಿಯ ಒಟ್ಟು ಪ್ರಮಾಣ ಶೇ. ೬೮. ವಿವಿಧ ಹಿಂದುಳಿದ ಕೋಮು-ವರ್ಗಗಳವರಿಗೆ ಮೀಸಲಿಟ್ಟ ಶೇಕಡವಾರು ಸ್ಥಾನಗಳ ಸಂಖ್ಯೆಯನ್ನು ಈ ಕೆಳಗಿನ ಕೋಷ್ಟಕದಲ್ಲಿ ತೋರಿಸಿದೆ :

| | ವರ್ಗಗಳು | ಮೀಸಲಾತಿ ಪ್ರಮಾಣ |
|---|---|---|
| ೧. | ಹಿಂದುಳಿದ ಕೋಮು | ಶೇ. ೨೦ |
| ೨. | ಹಿಂದುಳಿದ ಜಾತಿ | ಶೇ. ೧೦ |
| ೩. | ಹಿಂದುಳಿದ ಬುಡಕಟ್ಟು | ಶೇ. ೫ |
| ೪. | ವಿಶೇಷ ವರ್ಗ | ಶೇ. ೫ |
| | ಕೇಂದ್ರ ಸರ್ಕಾರದ ಆದೇಶದಂತೆ ಮೀಸಲಾತಿ ಹೊಂದಿರುವ ಗುಂಪುಗಳು : | |
| ೫. | ಪರಿಶಿಷ್ಟ ಜಾತಿ | ಶೇ. ೧೫ |
| ೬. | ಪರಿಶಿಷ್ಟ ಬುಡಕಟ್ಟು | ಶೇ. ೩ |
| ೭. | ರಕ್ಷಣಾ ದಳಗಳ ನಿವೃತ್ತ ಸಿಬ್ಬಂದಿ | ಶೇ. ೧೦ |
| | ಒಟ್ಟು | ಶೇ. ೬೮ |

ಹಾವನೂರು ಆಯೋಗ ನಿಗದಿಪಡಿಸಿದ ಶೇ. ೬೮ ರಷ್ಟು ಮೀಸಲಾತಿ ವಿರುದ್ಧ ಅನೇಕ ಪ್ರತಿಭಟನೆಗಳು ನಡೆದವು; ನ್ಯಾಯಾಲಯದ ತೀರ್ಪುಗಳು ಹೊರಬಿದ್ದವು. ಲಿಂಗಾಯಿತ ಜಾತಿಯ ಕೆಲವು ಉಪಜಾತಿಗಳನ್ನು ಹಿಂದುಳಿದ ವರ್ಗಕ್ಕೆ ಸೇರಿಸಿದ ಆಯೋಗ, ಬಹುಸಂಖ್ಯಾತ ಉಪಜಾತಿಗಳನ್ನು ಕೈಬಿಟ್ಟಿತು. ಒಕ್ಕಲಿಗರನ್ನು ಹಿಂದುಳಿದ ಸಮಾಜದವರೆಂದು (ಬಿ.ಸಿ.ಎಂ.) ಪರಿಗಣಿಸಿ, ಅವರ ರಾಜಕೀಯ ಭಾಗಿದಾರರೆನಿಸಿದ ಲಿಂಗಾಯಿತರನ್ನು ಅತಿ ಮುಂದುವರೆದವರೆಂದು ಘೋಷಿಸಿತು. ಪರಿಣಾಮವಾಗಿ, ಲಿಂಗಾಯಿತ ಸಮಾಜ

ವಿಭಜಿಸಲ್ಪಟ್ಟಿತಲ್ಲದೆ, ಇದೇ ಕಾರಣಕ್ಕಾಗಿಯೇ ಒಕ್ಕಲಿಗರು ಮತ್ತು ಲಿಂಗಾಯಿತರ ನಡುವೆ ಬಿರುಕುಂಟಾಯಿತು. ಅಲ್ಲದೆ, ಲಿಂಗಾಯಿತರು ಮತ್ತು ಇತರ ಹಿಂದುಳಿದ ಜಾತಿಗಳ ನಡುವೆ ಅನೇಕ ವಿವಾದಗಳು ಹುಟ್ಟಿಕೊಂಡವು. ಆದರೆ ತಮ್ಮ ಮುಖ-ಚಹರೆಗಳನ್ನು ದೀರ್ಘಕಾಲದಿಂದಲೂ ಮರೆಯಲ್ಲಿರಿಸಿಕೊಂಡು ಅಪಮಾನ- ರೋಷಗಳಿಂದ ಒಳಗೇ ಕುದಿಯುತ್ತಿದ್ದ ಹಾಗೂ ಆವರೆಗೆ ಹರಡಿ ಚಲ್ಲಾಪಿಲ್ಲಿಯಾಗಿದ್ದ ಸಣ್ಣಪುಟ್ಟ ಹಿಂದುಳಿದ ವರ್ಗಗಳು ಒಂದುಗೂಡಿ ಸೆಟೆದುನಿಂತವು; ಪ್ರಜ್ಞಾವಂತಿಕೆಯಿಂದ ಸಂಘಟಿತವಾದವು; ತಮ್ಮಲ್ಲಿ ನಾಯಕತ್ವದ ಹುರುಪನ್ನು ತುಂಬಿಕೊಂಡವು.

ಆಯೋಗದ ಶಿಫಾರಸುಗಳ ವಿರುದ್ಧ ಲಿಂಗಾಯಿತರು ಸಂಘಟಿಸಿದ ತೀವ್ರ ಚಳವಳಿ ಮತ್ತು ಪ್ರತಿಭಟನೆಗಳು ಹಿಂದುಳಿದ ವರ್ಗಗಳ ಹೋರಾಟಕ್ಕೆ ನಿರೀಕ್ಷಿಸಿದಷ್ಟು ಹಾನಿಯನ್ನುಂಟುಮಾಡುವಲ್ಲಿ ಅಷ್ಟಾಗಿ ಯಶಸ್ವಿಯಾಗಲಿಲ್ಲ. ಆದರೆ ಲಿಂಗಾಯಿತ ಮುಖಂಡರು ಈ ವರದಿ ಅವೈಜ್ಞಾನಿಕವೆಂದು ಜರೆದರು. ಕಳಂಕಪೂರ್ಣವಾದ ಮಾರ್ಗವನ್ನು ಅನುಸರಿಸಿದ ಆಯೋಗದ ಧೋರಣೆ ಅನಾರೋಗ್ಯಕರವಾದುದೆಂದು, ಸಂಕುಚಿತ ದೃಷ್ಟಿಯದೆಂದು, ಅಸಂಗತಗಳ ಕಂತೆಯೆಂದು ನಾನಾ ರೀತಿಯಲ್ಲಿ ಟೀಕಿಸಿದರು. ಈ ವರದಿ ರಾಜ್ಯಾಂಗಕ್ಕನುಗುಣವಾಗಿಲ್ಲವೆಂಬ ಅಭಿಪ್ರಾಯವೂ ವ್ಯಕ್ತವಾಯಿತು. ಬ್ರಾಹ್ಮಣ ಮುಖಂಡರು ಸಹಾ ಹಾವನೂರು ವರದಿ ಸಂವಿಧಾನಬಾಹಿರವೆಂದರು. ಈ ಆದೇಶಗಳು ನ್ಯಾಯಸಮ್ಮತವಲ್ಲವೆಂದು, ಮುಂದುವರೆದ ಜನಾಂಗಗಳಿಗೆ ಅಲ್ಪಸಂಖ್ಯೆಯಲ್ಲಿ ಸ್ಥಾನಗಳನ್ನು ಮೀಸಲಾಗಿಡಲಾಗಿದೆಯೆಂದು ಆರೋಪಿಸಿ, ಸರ್ವೋಚ್ಚ ನ್ಯಾಯಾಲಯದಲ್ಲಿ ಈ ವರದಿಯನ್ನು ಜಾರಿಗೊಳಿಸಿದ ಸರ್ಕಾರಿ ಆದೇಶಗಳನ್ನು ರಿಟ್‌ಅರ್ಜಿಗಳ ಮೂಲಕ ಪ್ರಶ್ನಿಸಲಾಯಿತು.

ಆಯೋಗದ ಶಿಫಾರಸುಗಳ ಜಾರಿ ತಡೆಗೆ ಸಲ್ಲಿಸಲಾದ ರಿಟ್‌ಅರ್ಜಿಗಳನ್ನು ಪರಿಶೀಲಿಸಿದ ಸರ್ವೋಚ್ಚ ನ್ಯಾಯಾಲಯ, ಹಿಂದುಳಿದಿರುವಿಕೆಯನ್ನು ಗುರುತಿಸಲು ಜಾತಿ ಮತ್ತು ಆರ್ಥಿಕ ಸ್ಥಿತಿ-ಗತಿಗಳೇ ಮಾನದಂಡವಾಗಿರಬೇಕೆಂದು ಒಮ್ಮತದ ತೀರ್ಪು ನೀಡಿತು. ನ್ಯಾಯಾಲಯ ತನ್ನ ತೀರ್ಪಿನಲ್ಲಿ ಹೇಳಿದುದು ಹೀಗೆ: "ಕೇವಲ ಜಾತಿಯಿಂದ ಒಬ್ಬ ವ್ಯಕ್ತಿ ಹಿಂದುಳಿದ ವರ್ಗಕ್ಕೆ ಸೇರಿದ್ದಾನೆ ಎಂಬುದನ್ನು ತೀರ್ಮಾನಿಸುವುದು ನ್ಯಾಯಬದ್ಧವಲ್ಲ. ಅಂಥಾ ಒಂದು ತೀರ್ಮಾನ ವ್ಯಕ್ತಿಯ ಬಡತನ, ಉದ್ಯೋಗ ಮತ್ತು ಪ್ರಚಲಿತ ಪರಿಸರಗಳಿಂದಾಗಬೇಕು. ಅಸಮಂಜಸವಾದ, ಮಿತಿಮೀರಿದ ಅಥವಾ ಅಳತೆಗೆಟ್ಟ ಮೀಸಲಾತಿಗಳಿರದಂತೆ ಎಚ್ಚರ ವಹಿಸಬೇಕಾದದ್ದು ಸರ್ಕಾರದ ಕರ್ತವ್ಯ. ಏಕೆಂದರೆ ಇದು ಒಂದು ವಿಸ್ತಾರವಾದ ಕ್ಷೇತ್ರದ ಸ್ಪರ್ಧಾತ್ಮಕ ಮನೋಭಾವವನ್ನು ಬದಿಗೊತ್ತುತ್ತದೆ. ಅಲ್ಲದೆ, ಕಾರ್ಮಿಕರಲ್ಲಿ ಬಹಳಷ್ಟು ಅಸಂತೋಷಕ್ಕೆ ಕಾರಣವಾಗಿ ಆಡಳಿತವನ್ನು ಕುಂಠಿತಗೊಳಿಸುತ್ತದೆ. ಶೇ. ೬೮ ಸ್ಥಾನಗಳನ್ನು ಮೀಸಲಾಗಿರಿಸುವ ಸರ್ಕಾರ ಹಿಂದುಳಿದವರ ಕಲ್ಯಾಣ ಸಾಧನೆಯ ಹುರುಪಿನಲ್ಲಿ ಸಮಾಜದ ಉಳಿದವರ ಪ್ರಗತಿಯನ್ನು ತುಚ್ಛೀಕರಿಸುವುದು ಕಾನೂನು ಬಾಹಿರ ಹಾಗೂ ಭಾರತದ ಸಂವಿಧಾನದ ವಿಧಿಗೆ ವಿರೋಧವಾಗಿದೆ. ಆದ್ದರಿಂದ ಹಿಂದುಳಿದ ವರ್ಗ ಹಾಗೂ ಇತರ ವರ್ಗಗಳ ಹಕ್ಕುಗಳ ನಡುವಿನ ಸಮತೋಲನದ ಪ್ರಯತ್ನ ನಡೆಸಬೇಕು. ಅಲ್ಲದೆ, ಸರ್ವಕಾರ್ಯಗಳಲ್ಲಿಯೂ ಆಡಳಿತ ದಕ್ಷತೆಯನ್ನು ಕಡೆಗಣಿಸುವುದು ಸೂಕ್ತವಲ್ಲ.

ಒಟ್ಟು ಮೀಸಲು ಸ್ಥಾನ ಶೇ. ೫೦ನ್ನು ಮೀರಬಾರದು. ಶೇ. ೫೦ಕ್ಕಿಂತ ಎಷ್ಟು ಕಡಿಮೆ ಇರಬೇಕು ಎನ್ನುವುದನ್ನು ಪ್ರಚಲಿತ ಪರಿಸರಗಳನ್ನು ಪರಿಗಣಿಸಿ ತೀರ್ಮಾನಿಸಬೇಕು.''

ಹಿಂದುಳಿದ ವರ್ಗಗಳವರು ಹಾವನೂರು ಆಯೋಗದ ವರದಿಯನ್ನು 'ಹಿಂದುಳಿದವರ ಮ್ಯಾಗ್ನಕಾರ್ಟ್' ಎಂದು ಅಭಿಮಾನದಿಂದ ಕರೆದರು. 'ಹಿಂದುಳಿದ ವರ್ಗಗಳ ಭಗವದ್ಗೀತೆ'ಯೆಂತಲೂ ವ್ಯಾಖ್ಯಾನಿಸಲಾಯಿತು. ಮುಂದುವರೆದ ಮೇಲ್ಜಾತಿಗಳನ್ನು ಬಿಟ್ಟು ಉಳಿದ ಅಲ್ಪಸಂಖ್ಯಾತ ಹಿಂದುಳಿದ ವರ್ಗದ, ಜಾತಿಯ ಜನರಿಗೆ ಶೇ. ೫೫ ರಷ್ಟು ಮೀಸಲು ವ್ಯವಸ್ಥೆ ಜಾರಿಗೆ ಬಂದುದರಿಂದ ಸಹಜವಾಗಿಯೇ ಇತರ ಹಿಂದುಳಿದ ವರ್ಗಗಳವರು ಸಂತೋಷಗೊಂಡರು. ಎಲ್. ಜಿ. ಹಾವನೂರು ನಾಯಕತ್ವದ ಹಿಂದುಳಿದ ವರ್ಗಗಳ ಆಯೋಗ ನೀಡಿದ ವರದಿಯನ್ನು ಯಥಾವತ್ತು ಜಾರಿಗೆ ತಂದ ಡಿ. ದೇವರಾಜ ಅರಸು ಸರ್ಕಾರ ಭಾರತದ ಚರಿತ್ರೆಯಲ್ಲಿಯೇ ಪವಾಡವೊಂದನ್ನು ಸಾಧಿಸಿತೆಂದು ವರ್ಣಿಸಲಾಯಿತು. ಇಂದು ಇತರ ವರ್ಗದವರೆಲ್ಲ ಹಿಂದುಳಿದವರೆಂದು ಹೇಳಿಕೊಳ್ಳಲು ಹಾಗೂ ಉತ್ತಮ ಜಾತಿಯವರೆಲ್ಲ ಶೂದ್ರರಾಗಲು ಹವಣಿಸುತ್ತಿದ್ದರೆ ಅದಕ್ಕೆ ಹಾವನೂರರು ಬರೆದ 'ಭಗವದ್ಗೀತೆ'ಯ ಅನುಷ್ಠಾನವೇ ಕಾರಣವೆನ್ನಲಾಯಿತು. ಸೈದ್ಧಾಂತಿಕ ನಿಲುವುಗಳನ್ನು ವಿರೋಧಿಸುವ ಪಟ್ಟಭದ್ರರನ್ನು ಪ್ರತ್ಯೇಕಿಸಿ ಅವರ ಆಟ ನಡೆಯದಂತೆ ಮಾಡಿ ದುರ್ಬಲರ ಪರವಾದ ಕ್ರಾಂತಿಕಾರಕ ಸುಧಾರಣೆಗಳನ್ನು ಜಾರಿಗೆ ತಂದವರು ದೇವರಾಜ ಅರಸು ಅವರೆಂದು ಪ್ರಶಂಸಿಸಲಾಯಿತು.

ಹಾವನೂರು ವರದಿಯ ಸಮರ್ಥಕರು ವರದಿ ವಿರುದ್ಧ ಬಂದ ಎಲ್ಲ ಟೀಕೆ-ಟಿಪ್ಪಣಿಗಳಿಗೆ ಸೂಕ್ತವಾಗಿ ಉತ್ತರಿಸಲು ಪ್ರಯತ್ನಿಸಿದರು. ಹಾವನೂರು ವರದಿ ಶಿಫಾರಸಿನಂತೆ ಮೀಸಲಾತಿ ಪ್ರಮಾಣ ಶೇ. ೫೦ನ್ನು ಮೀರಿರುವುದು ಸರ್ವೋಚ್ಚ ನ್ಯಾಯಾಲಯ ನಿರ್ಣಯದ ವಿರುದ್ಧವಾಗುತ್ತದೆಂಬ ಆಪಾದನೆಗೆ ಉತ್ತರವಾಗಿ ಜಮ್ಮು ಮತ್ತು ಕಾಶ್ಮೀರ ಸರ್ಕಾರದ ಮೀಸಲಾತಿ ಶೇ. ೬೦ ರಷ್ಟಿರುವುದನ್ನು ಗಮನಿಸಿಲ್ಲವೇಕೆ ಎಂಬ ಪ್ರಶ್ನೆಯನ್ನು ಮುಂದಿಟ್ಟರು. ವರದಿಯ ಶಿಫಾರಸುಗಳನ್ನು ಜಾರಿಗೆ ತರುವಾಗ ಸರ್ಕಾರದ ಆಜ್ಞೆಯಲ್ಲಿ ಮಾತ್ರ ಮೀಸಲಾತಿ ಶೇ. ೫೦ನ್ನು ಮೀರುತ್ತದೆ. ಆದ್ದರಿಂದ ಅದಕ್ಕೆ ಹಾವನೂರು ವರದಿ ಭಾಗಿಯಲ್ಲ; ಸರ್ಕಾರದ ಆಜ್ಞೆಯೇ ತಪ್ಪೆಂದು ಹೇಳಬಹುದೇ ವಿನಾ ಹಾವನೂರು ವರದಿಯನ್ನಲ್ಲ. ಇಂತಿಷ್ಟೇ ಶೇಕಡವಾರು ಮೀಸಲಾತಿ ಇರಬೇಕೆಂದು ನಿರ್ಣಯಿಸುವ ಅಧಿಕಾರವನ್ನು ನ್ಯಾಯಾಂಗಕ್ಕೆ ಕೊಟ್ಟವರು ಯಾರು? ಯಾವ ಆಧಾರದಿಂದ ನ್ಯಾಯಾಂಗ ಇದನ್ನು ನಿರ್ಣಯಿಸುತ್ತದೆ? - ಎಂದು ನ್ಯಾಯಾಂಗದ ಮೇಲೆಯೇ ಹರಿಹಾಯ್ದರು. ದೇವರಾಜ ಅರಸು ಅವರು ಒಂದು ಹೆಜ್ಜೆ ಮುಂದೆ ಹೋಗಿ 'ಜಾತಿವಾರು ಮೀಸಲಾತಿ' ಯನ್ನು ಮಾಡಿಯೇ ಬಿಡಬೇಕು; ಅದರಿಂದಾಗಿ ಕೇಂದ್ರ ಸರ್ಕಾರ ಹಾಗೂ ಸರ್ವೋಚ್ಚ ನ್ಯಾಯಾಲಯಗಳ ವಿರುದ್ಧ ನಡೆಯುವ ವಾದ-ವಿವಾದಗಳಲ್ಲಿ ನಿಜಸಂಗತಿಗಳು ಇಡೀ ದೇಶಕ್ಕೆ ಗೊತ್ತಾಗಿ ಎಲ್ಲ ಹಿಂದುಳಿದ ಜಾತಿಗಳವರು ಹೋರಾಟಕ್ಕೆ ಸಿದ್ಧರಾಗುವುದರಲ್ಲಿ ಸಂದೇಹವೇ ಇಲ್ಲವೆಂತಲೂ ಆಶಿಸಿದರು.

ಇಷ್ಟಾದರೂ, ಆ ವೇಳೆಗೆ, ಮುಂಬರಲಿದ್ದ ಲೋಕಸಭಾ ಚುನಾವಣೆಗಳ ಹಿನ್ನೆಲೆಯಲ್ಲಿ ಹಾವನೂರು ವರದಿಯನ್ನು ತರಾತುರಿಯಿಂದ ಅನುಷ್ಠಾನಗೊಳಿಸಲಾಯಿತು; ಹಾಗೂ

ಇದು ಜನತೆಯ ಮತ ಗಳಿಸಿಕೊಳ್ಳಲು ಹರಡಿದ ಜಾಲವೇ ವಿನಾ ಒಟ್ಟು ಜನಸಮುದಾಯದ ಕ್ಷೇಮದ ಕಳಕಳಿಯಿಂದಲ್ಲವೆಂಬ ಆರೋಪವನ್ನು ದೇವರಾಜ ಅರಸು ಸರ್ಕಾರದ ಮೇಲೆ ಹೊರಿಸಲಾಯಿತು. ಕೇವಲ ತಮ್ಮ ಅಧಿಕಾರವನ್ನು ಭದ್ರಪಡಿಸಿಕೊಳ್ಳಲು ಜನಾಂಗ ಭೇದ ಮಾಡಿದ ಸಮಯಸಾಧಕರೆಂದು ಅರಸು ಅವರನ್ನು ಟೀಕಿಸಲಾಯಿತು. ಆದರೆ ಚುನಾವಣೆಯಲ್ಲಿ ಪ್ರಬಲ ಕೋಮುಗಳ ಪ್ರಾಬಲ್ಯ ಅಳಿದು ಸಮಾನ ರಾಜಕೀಯ ಶಕ್ತಿಯೊಂದು ಎದ್ದುನಿಂತುದನ್ನು ಯಾರಿಂದಲೂ ನಿರಾಕರಿಸಲಾಗಲಿಲ್ಲ. ಹಿಂದುಳಿದವರ ಅಭಿವೃದ್ಧಿಗಾಗಿ, ಶಿಕ್ಷಣಕ್ಕಾಗಿ ಅನೇಕ ಕಾರ್ಯಕ್ರಮಗಳನ್ನು ರೂಪಿಸಿ ಆ ವರ್ಗದ ಜನರು ಹೊಸ ಬದುಕು ಪಡೆದು ನವೋತ್ಸಾಹದಿಂದ ಬದುಕುವಂತೆ ಹಾಗೂ ಎಲ್ಲರ ಸರಿಸಮನಾಗಿ ಓಡಾಡುವಂತೆ ಮಾಡುವಲ್ಲಿ ಅರಸು ಯಶಸ್ವಿಯಾದುದು ನಿಜ. ವರ್ಗ ಸಂಘರ್ಷಕ್ಕೆ ಕರೆಕೊಟ್ಟ ಅರಸು, ಸಮಾಜದಲ್ಲಿ ತಿರಸ್ಕರಿಸಲ್ಪಟ್ಟ, ಹಿಂದೆ ತಳ್ಳಲ್ಪಟ್ಟ ಜಾತಿಯವರು, ಅಸ್ಪೃಶ್ಯರು ಅಧಿಕಾರದ ಅವಕಾಶ ಪಡೆದು ಗೌರವದಿಂದ ಸಮಾನವಾಗಿ ಬದುಕಲು, ಆತ್ಮವಿಶ್ವಾಸದಿಂದ ಸೆಟೆದು ನಿಂತುಕೊಳ್ಳಲು ತಕ್ಕ ವಾತಾವರಣ ಸೃಷ್ಟಿಸಿದರು. ಹಿಂದುಳಿದ ವರ್ಗಗಳ ಜಾಗೃತಿಯ ಮಟ್ಟಿಗೆ, ದೇವರಾಜ ಅರಸು ಅವರಲ್ಲಿದ್ದ ದೂರದೃಷ್ಟಿಯೇ ಕಾರಣ ಎಂಬುದನ್ನಂತೂ ಒಪ್ಪಲೇ ಬೇಕಾಗುತ್ತದೆ.

### ೩.೫. ಟಿ. ವೆಂಕಟಸ್ವಾಮಿ ಆಯೋಗ (೧೯೮೩)
### (ಕರ್ನಾಟಕ ೨ನೇ ಹಿಂದುಳಿದ ವರ್ಗಗಳ ಆಯೋಗ)

ಸರ್ವೋಚ್ಚ ನ್ಯಾಯಲಯ ೧೯೭೯ರಲ್ಲಿ ಹಾವನೂರು ಆಯೋಗದ ವಿರುದ್ಧವಾಗಿ ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ, ರಾಜ್ಯ ಸರ್ಕಾರ ನ್ಯಾಯಾಲಯಕ್ಕೆ ಮುಚ್ಚಳಿಕೆಯೊಂದನ್ನು ನೀಡಿತು. ಅದರ ಪ್ರಕಾರ, ಸರ್ಕಾರವು ಕರ್ನಾಟಕ ೨ನೇ ಹಿಂದುಳಿದ ವರ್ಗಗಳ ಆಯೋಗವನ್ನು ನ್ಯಾಯವಿಧಾಯಕ ಸಭೆಯ ನಿವೃತ್ತ ಕಾರ್ಯದರ್ಶಿ ಟಿ. ವೆಂಕಟ ಸ್ವಾಮಿಯವರ ಅಧ್ಯಕ್ಷತೆಯಲ್ಲಿ ರಚಿಸಿತು. ಡಾ. ಎಸ್. ಭೀಮಪ್ಪ, ಡಾ. ಕೆ. ಹೆಚ್. ಚೆಲುವರಾಜು, ಎಂ. ವಿ. ಸೂರಾಚಾರಿ, ವಿದ್ಯಾಧರ ಗುರೂಜಿ, ಪ್ರೊ. ಜಾನ್ ಬಿ. ಕುಟಿನೊ, ಎಮ್. ಬಷೀರುದ್ದೀನ್, ಅಮ್ಮೆಂಬಳ ಬಾಲಪ್ಪ, ಆರ್. ಎಸ್. ನಾಯ್ಕ್, ಪ್ರೊ. ಎ. ಎಮ್. ಧರ್ಮಲಿಂಗಂ, ವಿ. ಡಿ. ವೀರಕ್ಯಾತಯ್ಯ ಇವರೇ ಮೊದಲಾದ ೧೫ ಸದಸ್ಯರನ್ನೊಳಗೊಂಡ ಈ ಆಯೋಗ ಅಸ್ತಿತ್ವಕ್ಕೆ ಬಂದುದು ೧೯೮೩ ಏಪ್ರಿಲ್‌ನಲ್ಲಿ. ಇದು ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು ೧೯೮೬ ಮಾರ್ಚ್‌ನಲ್ಲಿ.

ರಾಜ್ಯದಲ್ಲಿಯ ಹಿಂದುಳಿದ ವರ್ಗಗಳ ಸ್ಥಿತಿ-ಗತಿಗಳ ಬಗೆಗೆ ವೈಜ್ಞಾನಿಕ ಮತ್ತು ವಾಸ್ತವಿಕ ಅಧ್ಯಯನ ನಡೆಸಿ ಅವುಗಳ ಬಗೆಗೆ ನಿರ್ದಿಷ್ಟ ಕ್ರಮಗಳನ್ನು ಸೂಚಿಸುವ ಉದ್ದೇಶದಿಂದ ಈ ಆಯೋಗವನ್ನು ರಚಿಸಲಾಯಿತು. ಆಯೋಗವು ಸರ್ಕಾರಿ ಮತ್ತು ಇತರ ಸ್ವಾಯತ್ತ ಸಂಸ್ಥೆಗಳಿಂದ ಅಭಿಪ್ರಾಯ ಸಂಗ್ರಹಿಸುವುದರೊಡನೆ ಅಗತ್ಯ ವಿಷಯಗಳ ಬಗೆಗೆ ಚರ್ಚಿಸಿತು. ಜಿಲ್ಲಾ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಭೂ ಒಡೆತನ, ಮನೆ ಮಾಲಿಕತ್ವ, ಆದಾಯ, ಪರಿಸರ, ಗ್ರಾಮೀಣ ಅಥವಾ ನಾಗರಿಕ ವಾತಾವರಣ ಮುಂತಾಗಿ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕವಾದ ೧೭ ಸೂಚಕಗಳನ್ನು ಜನರ

ಹಿಂದುಳಿದಿರುವಿಕೆಯನ್ನು ನಿರ್ಧರಿಸುವಲ್ಲಿ ನಿರ್ಣಾಯಕ ಸೂತ್ರವಾಗಿಟ್ಟುಕೊಂಡು ಅಧ್ಯಯನ ಮತ್ತು ಪರಿಶೀಲನೆ ನಡೆಸಿತು. ಈ ಆಯೋಗ ತನ್ನ ಸಮೀಕ್ಷೆಯಲ್ಲಿ ೬೮ ಹಿಂದೂ ಜಾತಿಗಳನ್ನು ಗುರುತಿಸಿ ೧೯೮೪ ರಲ್ಲಿದ್ದಂತೆ ಅವುಗಳ ಜನಸಂಖ್ಯೆಯನ್ನು ಅಂದಾಜು ಮಾಡಿತು.

ಅಲ್ಲದೆ, ಈ ಆಯೋಗ ೧೯೭೭ ರಿಂದ ೧೯೮೫ರ ವರೆಗಿನ ಒಟ್ಟು ೯ ವರ್ಷಗಳ ಅವಧಿಯಲ್ಲಿ, ಜನಸಂಖ್ಯೆಗನುಗುಣವಾಗಿ ವಿವಿಧ ಹಿಂದುಳಿದ ವರ್ಗಗಳಿಗೆ, ಪರಿಶಿಷ್ಟ ಜಾತಿ-ಪಂಗಡಗಳಿಗೆ, ಅಲ್ಪಸಂಖ್ಯಾತರಿಗೆ ಸಾರ್ವಜನಿಕ ಸೇವೆಗಳಲ್ಲಿ ದೊರೆತ ಪ್ರಾತಿನಿಧ್ಯ ಕುರಿತು ಅಂಕಿ-ಅಂಶಗಳನ್ನು ಸಂಗ್ರಹಿಸಿತು. ಈ ಆಯೋಗ ಸಿದ್ಧಪಡಿಸಿದ ಕೋಷ್ಟಕಗಳಲ್ಲಿ ಎರಡನ್ನು ಮಾತ್ರ ಇಲ್ಲಿ ಉದಾಹರಣೆಗಾಗಿ ನೀಡಲಾಗಿದೆ. ಈ ಕೋಷ್ಟಕಗಳು ಮೇಲ್ಕಂಡ ಅವಧಿಯಲ್ಲಿ ಸರ್ಕಾರಿ ಸೇವೆಯಲ್ಲಿದ್ದ ಹಿಂದುಳಿದ ವರ್ಗಗಳು ಮತ್ತು ಇತರ ಜಾತಿ-ಜನಾಂಗಗಳ ಶೇಕಡವಾರು ಪ್ರಾತಿನಿಧ್ಯವನ್ನು ತೋರಿಸುತ್ತವೆ. ಇವುಗಳಲ್ಲಿ ಮೊದಲನೇ ಕೋಷ್ಟಕ (ಕೋಷ್ಟಕ-ಅ) ೧೯೭೭ ರಿಂದ ೧೯೮೪ರ ವರೆಗಿನ ನೇರ ನೇಮಕಾತಿಗೊಂಡ ಕರ್ನಾಟಕ ಆಡಳಿತ ಸೇವಾ ಹಿರಿಯ ಅಧಿಕಾರಿಗಳ ಜಾತಿವಾರು ಪ್ರಾತಿನಿಧ್ಯವನ್ನು ಒಳಗೊಂಡಿದೆ. ಎರಡನೇ ಕೋಷ್ಟಕ (ಕೋಷ್ಟಕ-ಆ) ೧೯೭೮ ರಿಂದ ೧೯೮೫ರ ವರೆಗಿನ ರಾಜ್ಯದ ವಿಧಾನಸಭೆ, ವಿಧಾನಪರಿಷತ್ ಮತ್ತು ಲೋಕಸಭಾ ಸದಸ್ಯರ ಜಾತಿವಾರು ಪ್ರಾತಿನಿಧ್ಯವನ್ನು ಒಳಗೊಂಡಿದೆ :

## ಕೋಷ್ಟಕ - ಅ

| ಕ್ರಮಸಂಖ್ಯೆ | ಧರ್ಮ | ಜಾತಿಗಳು | ೧೯೭೭ | ೧೯೭೮ | ೧೯೮೦ | ೧೯೮೨ | ೧೯೮೩ | ೧೯೮೪ | ಒಟ್ಟು | ಒಟ್ಟು-ಶೇಕಡವಾರು | ೧೯೮೪ರ SEES ಪ್ರಕಾರ ಒಟ್ಟು ಜನ ಸಂಖ್ಯೆ - ಶೇಕಡವಾರು |
|---|---|---|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ |
| ೧. | ಹಿಂದೂ | ಅಗಸ | - | - | - | ೧ | - | - | ೧ | ೧.೦೧ | ೧.೦೦ |
| ೨. | ಹಿಂದೂ | ಬಲಿಜ | - | - | - | ೧ | - | - | ೧ | ೧.೦೧ | ೧.೩೩ |
| ೩. | ಹಿಂದೂ | ಬೆಸ್ತ | - | ೧ | ೧ | - | - | - | ೨ | ೨.೦೨ | ೨.೮೦ |
| ೪. | ಹಿಂದೂ | ಬ್ರಾಹ್ಮಣ | ೫ | ೧ | ೨ | - | ೪ | ೧ | ೧೩ | ೧೩.೧೩ | ೩.೮೧ |
| ೫. | ಹಿಂದೂ | ದೇವಾಂಗ | - | - | ೧ | - | - | - | ೧ | ೧.೦೧ | ೦.೭೪ |
| ೬. | ಹಿಂದೂ | ಗೊಲ್ಲ | - | - | - | - | ೨ | - | ೨ | ೨.೦೨ | ೧.೪೬ |
| ೭. | ಹಿಂದೂ | ಕೊಡಗರು | - | - | ೧ | - | - | ೧ | ೨ | ೨.೦೨ | ೦.೨೩ |
| ೮. | ಹಿಂದೂ | ಕುರುಬ | - | - | ೧ | - | ೩ | ೧ | ೫ | ೫.೦೫ | ೬.೯೨ |
| ೯. | ಹಿಂದೂ | ಲಿಂಗಾಯಿತ/ ವೀರಶೈವ | ೨ | ೨ | ೩ | ೪ | ೩ | - | ೧೪ | ೧೪.೧೫ | ೧೬.೯೨ |
| ೧೦. | ಹಿಂದೂ | ಮುದಲಿಯಾರ್ | ೧ | - | - | - | - | - | ೧ | ೧.೦೧ | ೦.೪೮ |

| | | | | | | | | | | | |
|---|---|---|---|---|---|---|---|---|---|---|---|
| ೧೧. | ಹಿಂದೂ | ಪ.ಜಾತಿ | - | ೩ | ೧ | ೩ | ೫ | ೧ | ೧೩ | ೧೩.೧೩ | ೧೫.೮೬ |
| ೧೨. | ಹಿಂದೂ | ಪ.ಪಂಗಡ | - | ೧ | - | ೧ | ೧ | - | ೩ | ೩.೦೩ | ೨.೩೨ |
| ೧೩. | ಹಿಂದೂ | ಅರಸ್ | - | ೧ | - | - | - | - | ೧ | ೧.೦೧ | ೦.೦೮ |
| ೧೪. | ಹಿಂದೂ | ವೈಶ್ಯ | - | - | - | - | ೧ | - | ೧ | ೧.೦೧ | ೦.೭೭ |
| ೧೫. | ಹಿಂದೂ | ವಿಶ್ವಕರ್ಮ/ ಪಾಂಚಾಳ | ೧ | ೧ | - | - | ೧ | - | ೩ | ೩.೦೩ | ೧.೯೬ |
| ೧೬. | ಹಿಂದೂ | ಒಕ್ಕಲಿಗ | ೨ | ೩ | ೨ | ೫ | ೫ | ೨ | ೧೯ | ೧೯.೧೯ | ೧೧.೬೮ |
| ೧೭. | ಸಿ.ಎನ್.ಕೆ. | ಸಿ.ಎನ್.ಕೆ. | - | - | ೧ | - | - | ೫ | ೬ | ೬.೦೬ | ೦.೬೮ |
| ಇತರ ಧರ್ಮಗಳು | | | | | | | | | | | |
| ೧೮. | ಕ್ರೈಸ್ತ | ಕ್ರೈಸ್ತ | ೧ | - | - | - | ೧ | - | ೨ | ೨.೦೨ | ೧.೮೯ |
| ೧೯. | ಜೈನ | ಜೈನ | - | - | ೧ | - | - | - | ೧ | ೧.೦೧ | ೦.೮೪ |
| ೨೦. | ಮುಸ್ಲಿಂ | ಮುಸ್ಲಿಂ | ೧ | ೨ | ೧ | - | ೨ | ೨ | ೮ | ೪.೦೮ | ೧೦.೯೭ |
| | | ಒಟ್ಟು | ೧೩ | ೧೫ | ೧೫ | ೧೫ | ೨೮ | ೧೩ | ೯೯ | ೧೦೦.೦೦ | ೮೨.೨೪ |

(ಆಕರ : ರಿಪೋರ್ಟ್ ಆಫ್ ದಿ ಸೆಕಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಕಮೀಷನ್, ಸಂಪುಟ ೩, ಪು. ೧೬೪).

## ಕೋಷ್ಟಕ - ಆ

| ಕ್ರಮಸಂಖ್ಯೆ | ಧರ್ಮ | ಜಾತಿ | ಎಂ.ಎಲ್.ಎ. ಸಂಖ್ಯೆ | | | ಎಂ.ಎಲ್.ಸಿ. ಸಂಖ್ಯೆ | | ಎಂ.ಪಿ. ಸಂಖ್ಯೆ | | | ಒಟ್ಟು | ಒಟ್ಟು-ಶೇಕಡಾವಾರು | ೧೯೮೫ರSEES ಪ್ರಕಾರ ಜನಸಂಖ್ಯೆ - ಶೇಕಡವಾರು |
|---|---|---|---|---|---|---|---|---|---|---|---|---|---|
| | | | ೧೯೭೮ | ೧೯೮೩ | ೧೯೮೫-೮೯ | ೧೯೭೮ | ೧೯೮೩ | ೧೯೭೭ | ೧೯೮೦ | ೧೯೮೫-೮೯ | | | |
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ೧೩ | ೧೪ |
| ೧. | ಹಿಂದೂ | ಬಲಿಜ | ೨ | ೩ | ೧ | ೧ | ೧ | - | - | - | ೮ | ೦.೯೨ | ೧.೩೩ |
| ೨. | ಹಿಂದೂ | ಬೇಡ | ೪ | ೧ | ೨ | ೨ | - | ೧ | ೧ | - | ೧೧ | ೧.೨೮ | ೨.೭೫ |
| ೩. | ಹಿಂದೂ | ಬೆಸ್ತ | ೩ | ೧ | ೩ | - | - | - | - | - | ೭ | ೦.೮೨ | ೨.೮೦ |
| ೪. | ಹಿಂದೂ | ಬ್ರಾಹ್ಮಣ | ೧೬ | ೧೬ | ೧೧ | ೧೦ | ೮ | ೪ | ೨ | ೩ | ೭೦ | ೮.೧೭ | ೩.೮೧ |
| ೫. | ಹಿಂದೂ | ಬಂಟ | ೫ | ೬ | ೬ | - | ೧ | - | - | - | ೧೮ | ೨.೧೦ | ೦.೮೩ |
| ೬. | ಹಿಂದೂ | ದರ್ಜೆ | ೧ | - | - | - | - | - | - | - | ೧ | ೦.೧೨ | ೦.೩೩ |
| ೭. | ಹಿಂದೂ | ದೇವಾಡಿಗ | ೧ | ೧ | ೧ | - | - | - | - | - | ೩ | ೦.೩೫ | ೦.೨೯ |
| ೮. | ಹಿಂದೂ | ಗೊಲ್ಲ | ೨ | ೨ | ೩ | - | - | - | - | - | ೭ | ೦.೮೨ | ೧.೪೬ |
| ೯. | ಹಿಂದೂ | ಹಾಲವಕ್ಕಿ-ವಕ್ಕಲ್ | - | - | ೧ | - | - | - | - | - | ೧ | ೦.೧೨ | ೦.೧೯ |
| ೧೦. | ಹಿಂದೂ | ಈಡಿಗ | ೬ | ೮ | ೧೧ | ೨ | ೧ | ೧ | ೩ | ೩ | ೩೫ | ೪.೦೮ | ೨.೫೪ |
| ೧೧. | ಹಿಂದೂ | ಕಮ್ಮ | ೧ | ೧ | ೨ | - | - | - | - | - | ೪ | ೦.೪೭ | ೦.೨೫ |
| ೧೨. | ಹಿಂದೂ | ಕೊಡಗರು | ೧ | ೧ | - | ೨ | ೨ | - | - | - | ೬ | ೦.೭೦ | ೦.೨೩ |
| ೧೩. | ಹಿಂದೂ | ಕ್ಷತ್ರಿಯ | ೧ | ೧ | ೨ | - | - | - | - | - | ೪ | ೦.೪೭ | ೦.೪೪ |

| | | | | | | | | | | | | | |
|---|---|---|---|---|---|---|---|---|---|---|---|---|---|
| ೧೪. | ಹಿಂದೂ | ಕುಂಬಾರ | ೧ | ೧ | ೧ | - | - | - | - | - | ೩ | ೦.೩೫ | ೦.೭೦ |
| ೧೫. | ಹಿಂದೂ | ಕುರುಬ | ೭ | ೯ | ೫ | ೩ | ೧ | - | ೧ | ೨ | ೨೭ | ೩.೨೭ | ೬.೯೨ |
| ೧೬. | ಹಿಂದೂ | ಲಿಂಗಾಯಿತ/ ವೀರಶೈವ | ೫೩ | ೬೬ | ೬೪ | ೧೨ | ೧೦ | ೮ | ೪ | ೬ | ೨೨೩ | ೨೬.೦೨ | ೧೬.೯೨ |
| ೧೭. | ಹಿಂದೂ | ಮರಾಠಾ | ೭ | ೧೧ | ೫ | - | ೧ | ೧ | ೧ | - | ೨೭ | ೩.೦೩ | ೩.೨೦ |
| ೧೮. | ಹಿಂದೂ | ಮುದಲಿಯಾರ್ | ೧ | ೧ | ೧ | - | - | - | - | - | ೩ | ೦.೩೫ | ೦.೪೮ |
| ೧೯. | ಹಿಂದೂ | ನಾಯಿಂದ | - | - | ೧ | - | - | - | - | - | ೧ | ೦.೧೨ | ೦.೬೦ |
| ೨೦. | ಹಿಂದೂ | ನೇಯ್ಗೆ | ೧ | - | - | - | - | - | - | - | ೧ | ೦.೧೨ | ೦.೬೫ |
| ೨೧. | ಹಿಂದೂ | ಪಟ್ಟೆಗಾರ್ | ೧ | ೧ | - | - | - | - | - | - | ೨ | ೦.೨೩ | ೦.೦೪ |
| ೨೨. | ಹಿಂದೂ | ರಾಜಪೂತ | ೧ | ೧ | ೧ | - | - | - | - | - | ೩ | ೦.೩೫ | ೦.೧೫ |
| ೨೩. | ಹಿಂದೂ | ಪ.ಜಾತಿ | ೩೫ | ೩೩ | ೩೩ | ೩ | ೩ | ೪ | ೪ | ೫ | ೧೨೦ | ೧೪.೦೦ | ೧೫.೮೬ |
| ೨೪. | ಹಿಂದೂ | ಪ.ಪಂಗಡ | ೪ | ೫ | ೬ | ೧ | ೧ | - | - | - | ೧೭ | ೧.೯೮ | ೨.೮೨ |
| ೨೫. | ಹಿಂದೂ | ತಿಗಳ | ೧ | - | - | - | - | - | - | - | ೧ | ೦.೧೨ | ೦.೬೦ |
| ೨೬. | ಹಿಂದೂ | ಉಪ್ಪಾರ | - | - | ೧ | ೧ | - | - | - | - | ೨ | ೦.೨೩ | ೧.೩೧ |
| ೨೭. | ಹಿಂದೂ | ಅರಸ್ | ೨ | ೧ | - | - | - | - | - | ೧ | ೪ | ೦.೪೭ | ೦.೦೮ |
| ೨೮. | ಹಿಂದೂ | ವೈಶ್ಯ | ೨ | - | - | ೨ | ೧ | - | ೧ | - | ೬ | ೦.೭೦ | ೦.೭೭ |
| ೨೯. | ಹಿಂದೂ | ವಿಶ್ವಕರ್ಮ/ಪಾಂಚಾಳ | ೧ | - | - | - | - | - | - | - | ೧ | ೦.೧೨ | ೧.೯೬ |
| ೩೦. | ಹಿಂದೂ | ಒಕ್ಕಲಿಗ | ೪೨ | ೪೮ | ೪೯ | ೧೧ | ೬ | ೭ | ೬ | ೫ | ೧೭೪ | ೨೦.೩೦ | ೧೧.೬೮ |
| **ಇತರ ಧರ್ಮಗಳು** | | | | | | | | | | | | | |
| ೩೧. | ಕ್ರೈಸ್ತ | ಕ್ರೈಸ್ತ | ೩ | ೩ | ೩ | ೨ | ೨ | - | ೨ | ೧ | ೧೬ | ೧.೮೭ | ೧.೮೯ |
| ೩೨. | ಜೈನ | ಜೈನ | ೩ | ೨ | ೩ | - | - | - | - | - | ೮ | ೦.೯೩ | ೦.೮೪ |
| ೩೩. | ಮುಸ್ಲಿಂ | ಮುಸ್ಲಿಂ | ೧೭ | ೨ | ೯ | ೪ | ೪ | ೨ | ೩ | ೨ | ೪೩ | ೫.೦೨ | ೧೦.೯೭ |
| | | ಒಟ್ಟು | ೨೨೫ | ೨೨೫ | ೨೨೫ | ೫೬ | ೪೨ | ೨೮ | ೨೮ | ೨೮ | ೮೫೭ | ೧೦೦.೦೦ | ೯೫.೬೯ |

(ಆಕರ : ರಿಪೋರ್ಟ್ ಆಫ್ ದಿ ಸೆಕಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಕಮೀಷನ್, ಸಂಪುಟ ೩, ಪು. ೭೧).

ವೆಂಕಟಸ್ವಾಮಿ ಆಯೋಗವು ಬ್ರಾಹ್ಮಣ ಮತ್ತು ವೈಶ್ಯರಲ್ಲದೆ ಲಿಂಗಾಯಿತ, ಒಕ್ಕಲಿಗ, ಬಲಿಜ, ದೇವಾಂಗ, ನೇಯ್ಗಿ, ಗಾಣಿಗ, ಮರಾಠಾ, ವಿಶ್ವಕರ್ಮ ಮುಂತಾದ ಜಾತಿಗಳನ್ನು ಶಿಕ್ಷಣ ಮತ್ತು ನೇಮಕಾತಿ - ಈ ಎರಡು ಉದ್ದೇಶಗಳಿಗೂ ಹಿಂದುಳಿದ ವರ್ಗಗಳೆಂದು ಪರಿಗಣಿಸಲಿಲ್ಲ. ಇದರಿಂದ ಬಡತನ ರೇಖೆಗಿಂತ ಕೆಳಮಟ್ಟದಲ್ಲಿ ಜೀವನ ನಡೆಸುತ್ತಿರುವ ಶೇ. ೨೫ಕ್ಕೂ ಹೆಚ್ಚು ಜನರು ಸೌಲಭ್ಯಗಳಿಂದ ವಂಚಿತರಾದರೆಂಬ ಟೀಕೆ ವ್ಯಕ್ತವಾಯಿತು. ಆಯೋಗ ಆಗಲೇ ಇದ್ದ ಹಿಂದುಳಿದ ವರ್ಗಗಳ ಯಾದಿಯಿಂದ ಕೆಲವು ಜಾತಿ - ಕೋಮುಗಳನ್ನು ಕೈಬಿಟ್ಟಿದ್ದರಿಂದ ತೀವ್ರ ಆಕ್ಷೇಪಣೆಗೆ ಗುರಿಯಾಯಿತು.

ಇತರ ಅಂಶಗಳನ್ನು ಪರಿಗಣಿಸದೆ ಜಾತಿಗಷ್ಟೆ ಆದ್ಯತೆ ನೀಡಿದುದು ಸಹಾ ಸಮಂಜಸವೆನಿಸಲಿಲ್ಲ. ಸುಮಾರು ೪೦೦ ಜಾತಿಗಳು, ಉಪಜಾತಿಗಳು, ಸಮೂಹಗಳು ಮತ್ತು ಅವುಗಳ ಪರ್ಯಾಯಗಳಿಂದ ಹಿಂದುಳಿದ ವರ್ಗಗಳನ್ನು ನಿರ್ಧರಿಸುವಾಗ ಆಯೋಗ ಜಾತಿ ಮತ್ತು ವರ್ಗಗಳ ನಡುವಣ ಮೂಲ ವ್ಯತ್ಯಾಸವನ್ನು ಅಲಕ್ಷಿಸಿದೆಯೆಂದು ದೂರಲಾಯಿತು. ಎಲ್ಲ ಜಾತಿ ಮತ್ತು ಸಮುದಾಯಗಳಲ್ಲಿ ಅಸ್ತಿತ್ವದಲ್ಲಿರುವ ವರ್ಗ-ರಚನೆಯನ್ನು ಸರ್ವೋಚ್ಛ ನ್ಯಾಯಾಲಯವು ಸಾಮಾಜಿಕ ಹಿಂದುಳಿದಿರುವಿಕೆಯನ್ನು ನಿರ್ಧರಿಸುವ ಸಂಬಂಧದಲ್ಲಿ ಸಮಂಜಸ ವಿವರಣೆಗಳನ್ನು ನೀಡಿದಾಗ್ಯೂ ಆಯೋಗ ಅವನ್ನು ಆಧಾರವಾಗಿ ತೆಗೆದುಕೊಂಡಿಲ್ಲವೆಂದು ಆಕ್ಷೇಪಿಸಲಾಯಿತು.

ಆಯೋಗದ ಶಿಫಾರಸುಗಳಿಂದ ಧಕ್ಕೆಗೊಳಗಾದ ಜಾತಿಗಳವರು ಪ್ರಬಲವಾಗಿ ವಿರೋಧಿಸಿದರಲ್ಲದೆ, ಚಳವಳಿಮಾರ್ಗವನ್ನೂ ತುಳಿದರು. ಈ ಚಳವಳಿ ಸುಮಾರು ಒಂದು ವರ್ಷ ಕಾಲ ನಡೆದುದು ಗಮನಾರ್ಹ. ಸರ್ಕಾರವು ವೆಂಕಟಸ್ವಾಮಿ ಆಯೋಗದ ವರದಿಯನ್ನು ಜಾರಿಗೊಳಿಸದೆ ತಡೆಹಿಡಿಯಿತು. ಸರ್ಕಾರ ಈ ವರದಿಯನ್ನು ಅಂಗೀಕರಿಸದಿರಲು ನೀಡಿದ ಕಾರಣವೆಂದರೆ, ಹಿಂದುಳಿದಿರುವಿಕೆಯನ್ನು ನಿರ್ಧರಿಸುವಲ್ಲಿ ಸರ್ವೋನ್ನತ ನ್ಯಾಯಾಲಯ ನೀಡಿದ್ದ ಮಾರ್ಗದರ್ಶನದ ಸೂತ್ರಗಳನ್ನು ಆಯೋಗ ಉಪಯೋಗಿಸಿಕೊಂಡಿಲ್ಲ ಎನ್ನುವುದು. ಈ ಆಯೋಗ ಸಾಮಾಜಿಕ ನ್ಯಾಯದ ದೃಷ್ಟಿಯಿಂದ ತೀರಾ ಹಿಂದುಳಿದವರನ್ನು ಗುರುತಿಸಲು ಹಾಗೂ ಬಡತನದ ರೇಖೆಗಿಂತ ತೀರಾ ಕೆಳಗಿರುವವರನ್ನು ಪತ್ತೆಹಚ್ಚಲು ಪ್ರಾಮಾಣಿಕವಾಗಿ ಪ್ರಯತ್ನಿಸಿತೆಂಬುದನ್ನು ನಿರಾಕರಿಸುವಂತಿಲ್ಲ. ಏನೇ ಇದ್ದರೂ ವೆಂಕಟಸ್ವಾಮಿ ಆಯೋಗದ ವರದಿಯನ್ನು ತಿರಸ್ಕರಿಸಿದ ಸರ್ಕಾರ ಇನ್ನೊಂದು ಹೊಸ ಆಯೋಗ ರಚಿಸಲು ಮುಂದಾಯಿತು. ಮೂರು ವರ್ಷಗಳ ಅವಧಿಗೆ ಮೀರದಂತೆ ನ್ಯಾಯಮೂರ್ತಿ ಓ. ಚಿನ್ನಪ್ಪರೆಡ್ಡಿ ಏಕವ್ಯಕ್ತಿ ಆಯೋಗವನ್ನು ರಚಿಸಿತು.

ಈ ಹೊಸ ಆಯೋಗ ತನ್ನ ವರದಿ ಸಿದ್ಧಪಡಿಸಿ ಸಲ್ಲಿಸುವವರೆಗಿನ ಕಾಲಾವಧಿಯಲ್ಲಿ ಜಾರಿಗೊಳಿಸುವ ಸಲುವಾಗಿ ಸರ್ಕಾರ ೧೯೮೬ ಅಕ್ಟೋಬರ್‌ನಲ್ಲಿ ಮಧ್ಯಾವಧಿ ಆದೇಶವೊಂದನ್ನು ಹೊರಡಿಸಿತು. ಈ ಆದೇಶದ ಪ್ರಕಾರ, ಈ ಕೆಳಗಿನ ಕೋಷ್ಟಕದಲ್ಲಿರುವಂತೆ ಹಿಂದುಳಿದ ವರ್ಗಗಳನ್ನು ೫ ಗುಂಪುಗಳಾಗಿ ವಿಂಗಡಿಸಲಾಯಿತು. ಮೀಸಲಾತಿ ಶೇಕಡಾಂಶವನ್ನು ಸಂವಿಧಾನದ ೧೫(೪) ಮತ್ತು ೧೬(೪) ಅನುಚ್ಛೇದಗಳಿಗನುಗುಣವಾಗಿ ಇಲ್ಲಿ ತೋರಿಸಲಾಗಿದೆ :

| ಹಿಂದುಳಿದ ವರ್ಗಗಳು | ಎಲ್ಲ ಮೂಲಗಳಿಂದ ಕುಟುಂಬದ ವಾರ್ಷಿಕ ಆದಾಯ | ಶೇಕಡವಾರು ೧೫(೪) | ಮೀಸಲಾತಿ ೧೬(೪) |
|---|---|---|---|
| 'ಎ' ಗುಂಪು | ಆದಾಯ ಮಿತಿ ಇಲ್ಲ | ೫ | ೫ |
| 'ಬಿ' ಗುಂಪು | ರೂ. ೧೦,೦೦೦ ವರೆಗೆ | ೧೫ | ೧೩ |
| 'ಸಿ' ಗುಂಪು | ರೂ. ೧೦,೦೦೦ ವರೆಗೆ | ೧೬ | ೧೬ |
| 'ಡಿ' ಗುಂಪು | ರೂ. ೧೦,೦೦೦ ವರೆಗೆ | ೯ | ೧೧ |
| 'ಇ' ಗುಂಪು (ಹಿಂದುಳಿದ ವಿಶೇಷ ಗುಂಪು) | ರೂ. ೮,೦೦೦ ವರೆಗೆ | ೫ | ೫ |

## ೩.೬. ಓ. ಚಿನ್ನಪ್ಪರೆಡ್ಡಿ ಆಯೋಗ (೧೯೮೮)
## (ಕರ್ನಾಟಕ ೩ನೇ ಹಿಂದುಳಿದ ವರ್ಗಗಳ ಆಯೋಗ)

ಹಿಂದುಳಿದ ವರ್ಗಗಳ ಕ್ಷೇಮಾಭಿವೃದ್ಧಿಗಾಗಿ ರಾಜ್ಯ ಸರ್ಕಾರ ರಚಿಸಿದ ಮೂರನೇ ಆಯೋಗವೇ ನ್ಯಾಯಮೂರ್ತಿ ಓ. ಚಿನ್ನಪ್ಪರೆಡ್ಡಿ ಆಯೋಗ. ಇದು ಏಕವ್ಯಕ್ತಿ ಆಯೋಗ. ೧೯೮೮ ಮಾರ್ಚ್‌ನಲ್ಲಿ ಇದನ್ನು ರಚಿಸಲಾಯಿತು. ಈ ಆಯೋಗದ ಉದ್ದೇಶವಾದರೂ ಪರಿಶಿಷ್ಟ ಜಾತಿ-ಜನಾಂಗಳನ್ನು ಹೊರತುಪಡಿಸಿ ಉಳಿದ ಸಮುದಾಯಗಳಲ್ಲಿ ಸಾಮಾಜಿಕ ವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿರುವಿಕೆಯನ್ನು ಪರಿಗಣಿಸಲು ಬಳಸಬಹುದಾದ ಮಾನದಂಡಗಳನ್ನು ನಿರ್ಧರಿಸುವ ಸಂಬಂಧದಲ್ಲಿ ಸಲಹೆಗಳನ್ನು ನೀಡಲು; ಹಿಂದುಳಿದ ಜನವರ್ಗಗಳ ಬದುಕಿನ ಸ್ಥಿತಿ-ಗತಿಗಳ ಬಗೆಗೆ ವಸ್ತುನಿಷ್ಠ ಮತ್ತು ವೈಜ್ಞಾನಿಕ ಸ್ವರೂಪದ ಅಧ್ಯಯನ ಕೈಗೊಳ್ಳಲು; ಶಿಕ್ಷಣ ಸಂಸ್ಥೆಗಳನ್ನು ಪ್ರವೇಶಿಸುವಲ್ಲಿ ಈ ವರ್ಗಗಳವರಿಗೆ ಇರುವ ತೊಡಕುಗಳು; ಸಾಮಾನ್ಯ ಸೇವೆಗಳಲ್ಲಿ ಇರುವ ಪ್ರಾತಿನಿಧ್ಯ; ವ್ಯಾಪಾರ- ವಾಣಿಜ್ಯ-ಕೈಗಾರಿಕೆ- ಮಾರುಕಟ್ಟೆ ಹಾಗೂ ಸಹಕಾರ ಕ್ಷೇತ್ರಗಳು; ಗ್ರಾಮೀಣ ಸಾಲ ಸೌಲಭ್ಯ, ಅನುದಾನಗಳು; ಮುಖ್ಯವಾಗಿ, ಹಿಂದುಳಿದವರಿಗೆ ನಿಗದಿಗೊಳಿಸಬೇಕಾದ ಮೀಸಲಾತಿ ಪ್ರಮಾಣ; ಹಿಂದಿನ ಮೀಸಲಾತಿಯನ್ನು ಮುಂದುವರೆಸುವ ಹಾಗೂ ಪರಿಷ್ಕರಿಸುವ ಅವಶ್ಯಕತೆ ಬಗೆಗಿನ ಪರಿಶೀಲನೆ, ಇತ್ಯಾದಿ ಕುರಿತು ಅಧ್ಯಯನ ನಡೆಸುವುದಾಗಿದ್ದಿತು. ಈ ಆಯೋಗ ೮೫ ಸಂಸ್ಥೆಗಳು, ೨೧ ಲೋಕಸಭಾ ಸದಸ್ಯರು, ೨೫ ಪ್ರಮುಖ ವ್ಯಕ್ತಿಗಳು, ೫೨೩ ಹಳ್ಳಿಗಳು, ೧೬,೦೦೦ ಶಾಲಾ-ಕಾಲೇಜುಗಳು, ಸರ್ಕಾರಿ ಮತ್ತು ಅರೆ-ಸರ್ಕಾರಿ ಸಂಘ-ಸಂಸ್ಥೆಗಳು, ಸಾರ್ವಜನಿಕ ಕೈಗಾರಿಕೋದ್ಯಮಗಳು - ಇನ್ನೂ ಎಷ್ಟೋ ಮೂಲಗಳಿಂದ ಮಾಹಿತಿ ಸಂಗ್ರಹಿಸಿಕೊಂಡಿತು. ಮೀಸಲಾತಿ ಕುರಿತು ನ್ಯಾಯಾಲಯಗಳಲ್ಲಿ ಜರುಗಿದ ಪ್ರಮುಖ ಪ್ರಕರಣಗಳ ಚರ್ಚೆಗಳನ್ನು ಆದ್ಯಂತವಾಗಿ ಅಧ್ಯಯನ ನಡೆಸಿತು.

೧೯೯೦ ಏಪ್ರಿಲ್‌ನಲ್ಲಿ ಸರ್ಕಾರಕ್ಕೆ ಸಲ್ಲಿಸಲ್ಪಟ್ಟ ಚಿನ್ನಪ್ಪರೆಡ್ಡಿ ಆಯೋಗದ ವರದಿ, ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದವರೆಂದು ಕಂಡುಬಂದಂಥ ಜಾತಿಗಳನ್ನು ಮೂರು ಪ್ರವರ್ಗಗಳಾಗಿ ವಿಂಗಡಿಸಿತು. ಅದರಂತೆ, ೧ನೇ ಪ್ರವರ್ಗದಲ್ಲಿ ಪರ್ಯಾಯ ಜಾತಿಗಳ ಸಹಿತ ಒಟ್ಟು ೫೨ ಜಾತಿಗಳನ್ನು; ೨ನೇ ಪ್ರವರ್ಗದಲ್ಲಿ ಪರ್ಯಾಯ ಜಾತಿಗಳ

ಸಹಿತ ಒಟ್ಟು ೧೪ ಜಾತಿಗಳನ್ನು; ಹಾಗೂ ೩ನೇ ಪ್ರವರ್ಗದಲ್ಲಿ ಹೆಚ್ಚು ಆದಾಯವಿಲ್ಲದ ಔದ್ಯೋಗಿಕ ಗುಂಪಿನ ಜನಾಂಗದವರನ್ನು ಗುರುತಿಸಲಾಯಿತು. ಈ ಮೂರೂ ಪ್ರವರ್ಗಗಳಿಗೆ ನಿಗದಿಪಡಿಸಿದ ಮೀಸಲಾತಿ ಪ್ರಮಾಣವೆಂದರೆ, ಪ್ರವರ್ಗ-೧ಕ್ಕೆ ಶೇ. ೫; ಪ್ರವರ್ಗ-೨ ಕ್ಕೆ ಶೇ. ೨೮ ಮತ್ತು ಪ್ರವರ್ಗ-೩ಕ್ಕೆ ಶೇ. ೫. ಹಿಂದುಳಿದ ವರ್ಗಗಳವರಿಗೆ ಶಿಫಾರಸು ಮಾಡಲಾದ ಮೀಸಲಾತಿ ಸೌಲಭ್ಯಗಳನ್ನು ಬಳಸಿಕೊಳ್ಳುವಲ್ಲಿ ಆಗಬಹುದಾದ ವಂಚನೆಯನ್ನು ತಡೆಗಟ್ಟಲು ಆಯೋಗ ಮತ್ತೆ ಕೆಲವು ಶಿಫಾರಸುಗಳನ್ನು ಮಾಡಿತು. ಅವುಗಳೆಂದರೆ, ಹಿಂದುಳಿದ ಜಾತಿಗಳು ತಮ್ಮ ವಾಸಸ್ಥಳದ ವ್ಯಾಪ್ತಿಯಲ್ಲಿರುವ ತಹಸಿಲ್ದಾರರಿಂದ ಪ್ರಮಾಣಪತ್ರ ಪಡೆದುಕೊಳ್ಳಬೇಕು; ನೇಮಕಾತಿಯ ಮೊದಲ ಹಂತ ಮತ್ತು ಮೊದಲ ಹಂತದ ಮುಂಬಡ್ತಿಗೂ ಮೀಸಲಾತಿ ನಿಯಮಗಳು ಅನ್ವಯಗೊಳ್ಳಬೇಕು; ಮೀಸಲಾತಿಯನ್ನು ನವೀಕರಿಸುವ ಹಾಗೂ ಹಿಂದುಳಿದ ವರ್ಗಗಳ ಪ್ರತಿಯೊಂದು ಜಾತಿಯ ಅಭಿವೃದ್ಧಿಗಳ ಪರಿಶೀಲನೆಗಾಗಿ ಶಾಶ್ವತ ಸಮಿತಿಯೊಂದನ್ನು ರಚಿಸಬೇಕು; ಪ್ರತಿವರ್ಷವೂ ಮೀಸಲಾತಿ ಮುಂದುವರಿಕೆ ಅಥವಾ ಪರಿಷ್ಕರಣೆ ಬಗೆಗೆ ಪರಿಶೀಲನೆ ನಡೆಸಿ ಅಗತ್ಯ ಕ್ರಮ ಕೈಗೊಳ್ಳಬೇಕು; ಶಿಕ್ಷಣ, ನೌಕರಿ ಮತ್ತು ಬಡತನ - ಇವುಗಳನ್ನು ಆಯಾ ಜಾತಿಯ ಒಟ್ಟು ಜನಸಂಖ್ಯೆ ಯೊಂದಿಗೆ ತುಲನಾತ್ಮಕ ಅಧ್ಯಯನ ನಡೆಸಿ ಪ್ರಗತಿ ಕಂಡಂಥ ಜಾತಿಗಳನ್ನು ಹಿಂದುಳಿದ ವರ್ಗಗಳ ಪಟ್ಟಿಯಿಂದ ತೆಗೆದು ಹಾಕಬೇಕು, ಇತ್ಯಾದಿ. ವಯಸ್ಕರ ಶಿಕ್ಷಣ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣಗಳ ಪ್ರಗತಿ ತೃಪ್ತಿಕರವಾಗಿಲ್ಲವೆಂಬುದನ್ನು ಆಯೋಗ ತನ್ನ ವರದಿಯಲ್ಲಿ ಹೇಳಿತಲ್ಲದೆ, ಕೆಲವು ಸಲಹೆಗಳನ್ನೂ ನೀಡಿತು.

ಚಿನ್ನಪ್ಪರೆಡ್ಡಿ ಆಯೋಗದ ವರದಿ ಸರ್ಕಾರಕ್ಕೆ ಒಪ್ಪಿಸಲ್ಪಟ್ಟದು ೧೯೯೦ ಏಪ್ರಿಲ್‌ನಲ್ಲಾದರೂ ವಿಧಾನಸಭೆಯ ಮುಂದೆ ಮಂಡಿಸಲ್ಪಟ್ಟುದು ಜೂನ್ ತಿಂಗಳಲ್ಲಿ. ೧೯೯೨ರ ವರೆಗೆ ಈ ವರದಿಯ ಅನುಷ್ಠಾನದ ಬಗೆಗೆ ಚರ್ಚೆಗಳು ಮಾತ್ರ ನಡೆದುವಲ್ಲದೆ, ಸರ್ಕಾರ ಯಾವುದೇ ಆದೇಶ ಹೊರಡಿಸುವಲ್ಲಿ ಸಫಲವಾಗಲಿಲ್ಲ. ಸರ್ಕಾರ ಈ ವರದಿಯನ್ನು ೧೯೯೩ ಜೂನ್‌ನಲ್ಲಿ ಒಪ್ಪಿಕೊಳ್ಳುವ ವೇಳೆಗೆ, ಕೇಂದ್ರ ಸರ್ಕಾರ ರಚಿಸಿದ ೨ನೇ ಹಿಂದುಳಿದ ವರ್ಗಗಳ ಆಯೋಗ ಅಥವಾ ಬಿ. ಪಿ. ಮಂಡಲ್ ಆಯೋಗದ ವರದಿಯನ್ನು (೧೯೮೦) ಜಾರಿಗೊಳಿಸುವ ಬಗೆಗೆ ಸರ್ವೋಚ್ಚ ನ್ಯಾಯಾಲಯ ೧೯೯೨ ನವೆಂಬರ್‌ನಲ್ಲಿ ತನ್ನ ತೀರ್ಪು ನೀಡಿಯಾಗಿತ್ತು. ಮಂಡಲ್ ವರದಿಯನ್ನು ಗಮನಿಸಿದ ರಾಜ್ಯ ಸರ್ಕಾರ, ಚಿನ್ನಪ್ಪರೆಡ್ಡಿ ಆಯೋಗ ಮತ್ತು ಹಿಂದಿನ ಇತರ ಆಯೋಗಗಳ ವರದಿಗಳಲ್ಲಿ ಸೂಕ್ತವಾದ ಕೆಲವು ಬದಲಾವಣೆಗಳನ್ನು ಹಾಗೂ ಕೆಲವು ಸೇರ್ಪಡೆಗಳನ್ನು ಮಾಡುವ ಅಗತ್ಯವನ್ನು ಮನಗಂಡಿತು. ಕೆಲವು ಜಾತಿಗಳು ತಮ್ಮನ್ನು ಹಿಂದುಳಿದ ವರ್ಗಗಳ ಯಾದಿಗೆ ಸೇರಿಸಬೇಕೆಂದು ಒತ್ತಾಯಿಸಿದ್ದರಿಂದ ಹಾಗೂ ಆ ಸಂಬಂಧದ ೨೦೦ಕ್ಕೂ ಹೆಚ್ಚು ಮನವಿಗಳು ಸರ್ಕಾರದ ಮುಂದೆ ಇದ್ದುದರಿಂದ, ಸರ್ಕಾರ ಮೀಸಲಾತಿ ವಿಸ್ತರಣೆ ಕುರಿತು ಮರು ಪರಿಶೀಲಿಸ ಬೇಕಾಯಿತು. ಮಂಡಲ್ ಆಯೋಗ ವರದಿಯ ಪ್ರಭಾವದ ಬಿಸಿ ರಾಜ್ಯ ಸರ್ಕಾರಕ್ಕೂ ತಟ್ಟಿದುದು ಸ್ಪಷ್ಟ.

ಚಿನ್ನಪ್ಪರೆಡ್ಡಿ ಆಯೋಗ ತನ್ನ ವರದಿಯಲ್ಲಿ ಸೂಚಿಸಿದ್ದ ಮೂರು ಪ್ರವರ್ಗಗಳೊಡನೆ ವೀರಶೈವ - ಲಿಂಗಾಯಿತ, ಕ್ರೈಸ್ತ, ಮರಾಠಾ, ಕೊಡವ, ಬಂಟ, ಒಕ್ಕಲಿಗ ಮುಂತಾದ ಗ್ರಾಮೀಣ ಹಿಂದುಳಿದ ವರ್ಗಗಳಿಗೂ ಮೀಸಲಾತಿ ನೀಡುವ ಬಗೆಗೆ ಸರ್ಕಾರ ಗಮನ ಹರಿಸಿತು. ೧೯೯೪ ಏಪ್ರಿಲ್‌ನಲ್ಲಿ ಸರ್ಕಾರ ಪ್ರತಿ ಜಾತಿ, ಮತ ಮತ್ತು ಬುಡಕಟ್ಟುಗಳ ಸಾಮಾಜಿಕ ಮತ್ತು ಶೈಕ್ಷಣಿಕ ಹಿಂದುಳಿದಿರುವಿಕೆ, ಬಡತನದ ಹಂತ, ಜೀವನ ರೀತಿ, ಹವ್ಯಾಸ ಮತ್ತು ಪದ್ಧತಿ ಮುಂತಾದುವನ್ನು ಗಮನದಲ್ಲಿರಿಸಿ ಮೀಸಲಾತಿ ನಿಯಮ ಕುರಿತ ಆದೇಶ ಹೊರಡಿಸಿತು. ಆದರೆ ಪ್ರವರ್ಗ ಬದಲಾವಣೆ ಹಾಗೂ ಮೀಸಲಾತಿ ಪ್ರಮಾಣದ ಹೆಚ್ಚಳಗಳಿಗೆ ಸಂಬಂಧಿಸಿದಂತೆ ಕೆಲವು ಜಾತಿಗಳವರು ಮನವಿಪತ್ರಗಳನ್ನು ಸಲ್ಲಿಸಿದ್ದರಿಂದ ಸರ್ಕಾರ ತನ್ನ ಆದೇಶವನ್ನು ಮಾರ್ಪಡಿಸಲು ನಿರ್ಧರಿಸಿತು. ೧೯೯೪ ಜುಲೈನಲ್ಲಿ ಹಿಂದುಳಿದ ವರ್ಗಗಳಿಗೆ ನಿಗದಿಪಡಿಸಲಾದ ಮೀಸಲಾತಿ ಪ್ರಮಾಣವನ್ನು ಶೇ. ೫೬ಕ್ಕೆ ಹಾಗೂ ಮತ್ತೊಮ್ಮೆ ಶೇ. ೭೩ಕ್ಕೆ ಹೆಚ್ಚಿಸಿ ಸರ್ಕಾರ ಇನ್ನೊಂದು ಆದೇಶ ಹೊರಡಿಸಿತು. ಆದರೆ ಹೆಚ್ಚಿಸಲಾದ ಈ ಮೀಸಲಾತಿ ಪ್ರಮಾಣದ ಔಚಿತ್ಯವನ್ನು ಪ್ರಶ್ನಿಸಿ ಸರ್ವೋಚ್ಚ ನ್ಯಾಯಾಲಯ ದಲ್ಲಿ ದಾವೆ ಹೂಡಲಾಯಿತು. ಈ ಕುರಿತು ವಿಚಾರಣೆ ನಡೆಸಿದ ಸರ್ವೋಚ್ಚ ನ್ಯಾಯಾಲಯ ೧೯೯೪ ಸೆಪ್ಟೆಂಬರ್‌ನಲ್ಲಿ ಮಧ್ಯಂತರ ತೀರ್ಪು ನೀಡಿತಲ್ಲದೆ, ರಾಜ್ಯಗಳಲ್ಲಿಯ ಮೀಸಲಾತಿ ಪ್ರಮಾಣ ಯಾವುದೇ ಸಂದರ್ಭದಲ್ಲಿಯೂ ಶೇ. ೫೦ ನ್ನು ಮೀರಬಾರದೆಂದು ಸೂಚಿಸಿತು. ಈ ಮೇರೆಗೆ ಸರ್ಕಾರ ೧೯೯೪ ಸೆಪ್ಟೆಂಬರ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ಹೊರಡಿಸಿದ ಆದೇಶಗಳ ಅನ್ವಯ ವೃತ್ತಿಪರ ಶಿಕ್ಷಣ ಮತ್ತು ಸ್ನಾತಕೋತ್ತರ ಸಂಸ್ಥೆಗಳಿಗೆ ಪ್ರವೇಶಾವಕಾಶ ಕುರಿತ ಮೀಸಲಾತಿ ಪ್ರಮಾಣವನ್ನು ಶೇ. ೫೦ಕ್ಕೆ ಮಿತಿಗೊಳಿಸಿತು. ಹಾಗೆಯೇ, ೧೯೯೫ ಜನವರಿಯಲ್ಲಿ ಹೊರಡಿಸಿದ ಇನ್ನೊಂದು ಆದೇಶದಲ್ಲಿ, ಮೀಸಲಾತಿ ನೀತಿ ಸಂವಿಧಾನದ ಪರಿಚ್ಛೇದ ೧೫(೪) (ಶಿಕ್ಷಣ) ಮಾತ್ರವಲ್ಲದೆ, ಪರಿಚ್ಛೇದ ೧೬(೪) (ನೇಮಕಾತಿ)ಗೂ ಅನ್ವಯಿಸುವುದೆಂದು ತಿಳಿಸಿದೆ.

ಸದ್ಯ ಜಾರಿಯಲ್ಲಿರುವ ಪ್ರವರ್ಗವಾರು ಮೀಸಲಾತಿ ಪ್ರಮಾಣ:

| | | |
|---|---|---|
| ಪ್ರವರ್ಗ-೧ | : | ಶೇ. ೪ |
| ಪ್ರವರ್ಗ-೨ ಎ | : | ಶೇ. ೧೫ |
| ಪ್ರವರ್ಗ-೨ ಬಿ | : | ಶೇ. ೪ |
| ಪ್ರವರ್ಗ-೩ ಎ | : | ಶೇ. ೪ |
| ಪ್ರವರ್ಗ-೩ ಬಿ | : | ಶೇ. ೫ |
| ಪರಿಶಿಷ್ಟ ಜಾತಿ | : | ಶೇ. ೧೫ |
| ಪರಿಶಿಷ್ಟ ಪಂಗಡ | : | ಶೇ. ೩ |
| ಒಟ್ಟು ಮೀಸಲಾತಿ ಪ್ರಮಾಣ | : | ಶೇ. ೫೦ |

೧೯೯೫ ಡಿಸೆಂಬರ್‌ನ ಆದೇಶದಲ್ಲಿ, ಈ ಮೀಸಲಾತಿ ನಿಯಮ ಸರ್ವೋಚ್ಚ ನ್ಯಾಯಾಲಯದ ಮೂರು ದಾವೆಗಳು ಇತ್ಯರ್ಥಗೊಳ್ಳುವ ಅವಧಿಯವರೆಗೆ ವಿಸ್ತರಿಸಲಾಗಿದೆ ಯೆಂದು ಸ್ಪಷ್ಟಪಡಿಸಲಾಗಿದೆ.

ಪ್ರಸ್ತುತ ಚಾಲ್ತಿಯಲ್ಲಿರುವ ಸರ್ಕಾರದ ೧೯೯೪ ಸೆಪ್ಟೆಂಬರ್‌ನಲ್ಲಿ ಜಾರಿಗೊಳಿಸಿದ ಆದೇಶವು, ಚಿನ್ನಪ್ಪರೆಡ್ಡಿ ಆಯೋಗದ ವರದಿಯ ಶಿಫಾರಸಿನಲ್ಲಿಲ್ಲದ ಕೆಲವು ಹಿಂದುಳಿದ ಜಾತಿ-ಜನಾಂಗಗಳಿಗೂ ಮೀಸಲಾತಿ ಸೌಲಭ್ಯ ದೊರೆಯುವಂತೆ ಅವಕಾಶ ಮಾಡಿಕೊಟ್ಟಿದೆ ಯೆನ್ನುವುದು ಗಮನಾರ್ಹ. ಹಾವನೂರು ಆಯೋಗ ವರದಿ ಆಧಾರದ ಮೇಲೆ ಹಿಂದುಳಿದ ಬುಡಕಟ್ಟುಗಳೆಂದು ಪರಿಗಣಿಸಲ್ಪಟ್ಟಿದ್ದ ಜಾತಿಗಳು ಸರ್ಕಾರ ಈಗ ಹೊರಡಿಸಿರುವ ಆದೇಶದಂತೆ ಪ್ರವರ್ಗ-೧; ಪ್ರವರ್ಗ-೨ ಎ, ೨ ಬಿ; ಪ್ರವರ್ಗ-೩ ಎ, ೩ ಬಿ - ಈ ಐದು ಸಮೂಹಗಳನ್ನಾಗಿ ಮಾಡಿ ಪ್ರತಿ ವರ್ಗಕ್ಕೆ ಪ್ರತ್ಯೇಕವಾದ ಶೇಕಡವಾರು ಮೀಸಲಾತಿ ನಿಗದಿಪಡಿಸಿ ಆ ಜಾತಿ-ಜನಾಂಗಗಳವರಿಗೆ ಅನುಕೂಲ ಕಲ್ಪಿಸಿಕೊಡಲಾಗಿದೆ. ನೇಮಕಾತಿ ಕ್ಷೇತ್ರದಲ್ಲಿ ಮಹಿಳೆಯರ ಪ್ರಾತಿನಿಧ್ಯಕ್ಕೆ ಆದ್ಯತೆ ನೀಡಲಾಗಿದೆ. ಚಿನ್ನಪ್ಪರೆಡ್ಡಿ ಆಯೋಗ ತನ್ನ ವರದಿಯಲ್ಲಿ ಪ್ರಸ್ತಾಪಿಸಿರುವ ಮಹತ್ವದ ಅಂಶವೆಂದರೆ, ಮೀಸಲಾತಿ ಕುರಿತಾದ ಯಾವುದೇ ಕಾರ್ಯಕ್ರಮ ಶಾಶ್ವತವಾಗಬಾರದು ಅಥವಾ ನಿರರ್ಥಕವೂ ಆಗಬಾರದು ಎಂಬುದು. ಈ ಹಿನ್ನೆಲೆಯಲ್ಲಿ ಹಿಂದುಳಿದ ದುರ್ಬಲ ವರ್ಗಗಳಿಗೆ ದಕ್ಕಿರುವ ಮೀಸಲಾತಿ ಸೌಲಭ್ಯವನ್ನು ನವೀಕರಿಸುವ ಅಥವಾ ಪ್ರಗತಿ ಹೊಂದಿದ ಜಾತಿ-ಜನಾಂಗಗಳನ್ನು ಮೀಸಲಾತಿ ಪಟ್ಟಿಯಿಂದ ಕೈ ಬಿಡುವ ನಿಟ್ಟಿನಲ್ಲಿ ಪುನರಾಲೋಚಿಸಲು ಇನ್ನೂ ಅವಕಾಶವಿದೆ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಓ. ಚಿನ್ನಪ್ಪರೆಡ್ಡಿ ಆಯೋಗದ ರಚನೆಯವರೆಗೆ ಹಿಂದಿನ ಇತರ ಆಯೋಗಗಳಿಗೂ (ಡಾ. ನಾಗನಗೌಡ ಸಮಿತಿ-೧೯೬೧; ಹಾವನೂರು ಆಯೋಗ-೧೯೭೨ ಹಾಗೂ ವೆಂಕಟಸ್ವಾಮಿ ಆಯೋಗ-೧೯೮೩) ಮೀಸಲಾತಿ ಬಗೆಗೆ ವೈಜ್ಞಾನಿಕ ಸೂತ್ರವೊಂದನ್ನು ಕಂಡುಕೊಳ್ಳಲಾಗಿಲ್ಲವೆಂಬುದು. ಸಾಮಾಜಿಕ ಮತ್ತು ಆರ್ಥಿಕ ನೆಲೆಗಳಲ್ಲಿ ಹಿಂದುಳಿದ ವರ್ಗಗಳ ಪಟ್ಟಿಯಿಂದ ಬಲಿಷ್ಠ ಸಮುದಾಯಗಳಾದ ಲಿಂಗಾಯಿತ ಮತ್ತು ಒಕ್ಕಲಿಗರನ್ನು ಕೈ ಬಿಡಲು ಯಾವ ಸರ್ಕಾರವೂ ಇಷ್ಟಪಡಲಿಲ್ಲವೆನ್ನುವುದು ನಿಜ. ಮಿಲ್ಲರ್ ವರದಿ(೧೯೧೮)ಯೂ ಈ ಎರಡು ಪ್ರಬಲ ಜಾತಿಗಳು ಪಡೆದಿದ್ದ ಪ್ರಾತಿನಿಧ್ಯ ಕುರಿತು ಅಂಕಿ-ಅಂಶಗಳನ್ನು ಒದಗಿಸಿದೆ. ಸ್ವಾತಂತ್ರ್ಯಾನಂತರದಲ್ಲಿ ರಾಜಕೀಯವಾಗಿ ಈ ಜಾತಿಗಳು ಪ್ರಬಲಗೊಂಡುದನ್ನು, ಹಿಂದುಳಿದ ವರ್ಗಗಳಲ್ಲಿ ಮುಂದುವರೆದ ಜಾತಿಗಳೆಂದು ಪರಿಗಣಿತವಾದುದನ್ನು ಇತರ ಸಮೀಕ್ಷೆಗಳೂ ಸಮರ್ಥಿಸಿವೆ. ಇಲ್ಲಿ ಎರಡು ಪ್ರಮುಖ ಕೋಷ್ಟಕಗಳನ್ನು ಕೊಡುವುದರೊಡನೆ, ೧೯೫೯ರ ವೇಳೆಗೆ ಸರ್ಕಾರಿ ನೌಕರಿಗಳಲ್ಲಿದ್ದ ಜಾತಿವಾರು ಪ್ರಾತಿನಿಧ್ಯ (ಕೋಷ್ಟಕ - ಇ) ಮತ್ತು ೧೯೮೮ರಲ್ಲಿ ಸರ್ಕಾರಿ ಸೇವೆಯಲ್ಲಿದ್ದ ೧, ೨ ಮತ್ತು ೩ನೇ ದರ್ಜೆ ನೌಕರರ ಜಾತಿವಾರು ಪ್ರಾತಿನಿಧ್ಯ (ಕೋಷ್ಟಕ - ಈ) ಗಳನ್ನು ಸಮರ್ಥಿಸಬಹುದಾಗಿದೆ :

## ಕೋಷ್ಟಕ - ೩

೧೯೫೯ರಲ್ಲಿ ಸರ್ಕಾರಿ ನೌಕರಿಗಳಲ್ಲಿದ್ದ ಜಾತಿವಾರು ಪ್ರಾತಿನಿಧ್ಯ (೩೧ ಮಾರ್ಚ್ ೧೯೫೯)

| ಕ್ರಮಸಂಖ್ಯೆ | ಜಾತಿ | ೧೯೬೦ರಲ್ಲಿದ್ದ ಅಂದಾಜು ಜನಸಂಖ್ಯೆ (೧೦೦ಕ್ಕೆ ಹತ್ತಿರದ ಸಂಖ್ಯೆ) | ಜನಸಂಖ್ಯೆಯ ಶೇಕಡಾವಾರು | ಗೆಜೆಟೆಡ್ ನೌಕರರ ಸಂಖ್ಯೆ | ನಾನ್-ಗೆಜೆಟೆಡ್ ನೌಕರರ ಸಂಖ್ಯೆ | ಕೆಳ ದರ್ಜೆ ನೌಕರರ ಸಂಖ್ಯೆ | ನೌಕರರ ಒಟ್ಟು ಸಂಖ್ಯೆ | ಸರ್ಕಾರಿ ನೌಕರಿಗಳಲ್ಲಿ ನೇಮಕ ಗೊಂಡಿದ್ದ ಒಟ್ಟು ನೌಕರರ ಶೇಕಡಾವಾರು ಸಂಖ್ಯೆ | ಹೆಚ್ಚುವರಿ ಪ್ರಾತಿನಿಧ್ಯ (+) ಕಡಿಮೆ ಪ್ರಾತಿನಿಧ್ಯ (-) |
|---|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ |
| ೧. | ಅಗಸ | ೨,೪೮,೦೦೦ | ೧.೧೮ | ೫ | ೫೬೨ | ೭೬೪ | ೧,೩೩೧ | ೦.೯೦ | -೦.೨೮ |
| ೨. | ಬಣಜಿಗ | ೩,೩೨,೪೦೦ | ೧.೫೭ | ೪೭ | ೧,೯೨೦ | ೬೬೮ | ೨,೬೩೫ | ೧.೭೭ | +೦.೨೦ |
| ೩. | ಬ್ರಾಹ್ಮಣ | ೯,೦೫,೭೦೦ | ೪.೨೮ | ೧,೦೧೨ | ೨೫,೧೨೩ | ೨,೨೯೪ | ೨೮,೪೨೯ | ೧೯.೧೨ | +೧೪.೮೪ |
| ೪. | ಬೇಡ | ೧೦,೦೨,೧೦೦ | ೪.೭೪ | ೧೯ | ೮೪೯ | ೬೩೯ | ೧,೫೫೭ | ೧.೦೫ | -೩.೬೯ |
| ೫. | ದರ್ಜಿ | ೬೫,೦೦೦ | ೦.೩೧ | ೬ | ೧೩೬ | ೨೬ | ೧೬೮ | ೦.೧೧ | -೦.೨೦ |
| ೬. | ದೇವಾಂಗ | ೨,೨೧,೦೦೦ | ೧.೦೫ | ೩೪ | ೯೬೦ | ೨೪೫ | ೧,೨೩೯ | ೦.೮೮ | -೦.೧೭ |
| ೭. | ಗಂಗಾಕುಲ | ೪,೬೦,೮೦೦ | ೨.೧೮ | ೧೦ | ೨೯೫ | ೭೮೫ | ೧,೧೯೦ | ೦.೮೦ | -೧.೩೮ |
| ೮. | ಗಾಣಿಗ | ೯೦,೭೦೦ | ೦.೪೩ | ೧೧ | ೩೯೬ | ೧೯೭ | ೬೦೪ | ೦.೪೧ | -೦.೦೨ |
| ೯. | ಈಡಿಗ | ೫,೨೮,೬೦೦ | ೨.೪೦ | ೧೧ | ೫೪೯ | ೩೪೬ | ೯೬೬ | ೦.೬೧ | -೧.೭೯ |

| | | | | | | | | | |
|---|---|---|---|---|---|---|---|---|---|
| ೧೦. | ಕ್ಷತ್ರಿಯ | ೭೮,೨೦೦ | ೦.೩೭ | ೭೮ | ೧,೪೫೨ | ೪೮೪ | ೨,೦೧೪ | ೧.೩೫ | +೦.೯೮ |
| ೧೧. | ಕುಂಬಾರ | ೧,೦೯,೧೦೦ | ೦.೫೨ | ೩ | ೧೮೦ | ೧೬೯ | ೩೫೨ | ೦.೨೪ | -೦.೨೮ |
| ೧೨. | ಕುರುಬ | ೧೪,೫೫,೮೦೦ | ೬.೮೮ | ೫೬ | ೨,೪೫೨ | ೨,೦೭೯ | ೪,೫೮೭ | ೩.೦೦ | -೩.೭೯ |
| ೧೩. | ಲಿಂಗಾಯಿತ | ೩೨,೯೩,೦೦೦ | ೧೫.೫೭ | ೪೮೮ | ೧೫,೭೦೬ | ೨,೨೩೭ | ೧೮,೪೩೧ | ೧೨.೪೦ | -೩.೧೭ |
| ೧೪. | ಮರಾಠಾ | ೮,೬೧,೭೦೦ | ೪.೦೮ | ೩೨ | ೨,೯೧೭ | ೧,೫೨೧ | ೪,೪೭೩ | ೩.೦೧ | -೧.೧೭ |
| ೧೫. | ಮೇದ | ೨೮,೬೦೦ | ೦.೧೩ | ... | ೮೬ | ೬೪ | ೧೫೦ | ೦.೧೦ | -೦.೦೩ |
| ೧೬. | ಮುದಲಿ | ೧,೧೨,೨೦೦ | ೦.೫೩ | ೭೯ | ೧,೪೩೦ | ೭೦೯ | ೨,೨೧೮ | ೧.೪೯ | +೦.೯೬ |
| ೧೭. | ನಾಯಿಂದ | ೧,೨೦,೦೦೦ | ೦.೫೭ | ... | ೫೩೦ | ೮೮ | ೬೧೮ | ೦.೪೨ | -೦.೧೫ |
| ೧೮. | ನೇಯ್ಗಿ | ೧,೪೨,೦೦೦ | ೦.೬೭ | ೧೮ | ೮೦೧ | ೩೧೩ | ೧,೧೩೨ | ೦.೭೬ | +೦.೦೯ |
| ೧೯. | ರಾಜಪೂತ | ೪೩,೮೦೦ | ೦.೨೧ | ೧೪ | ೯೬ | ೨೧೬ | ೩೨೬ | ೦.೨೨ | +೦.೦೧ |
| ೨೦. | ಸಾತಾನಿ | ೩೬,೬೦೦ | ೦.೧೭ | ... | ೧೯೯ | ೧೧ | ೨೧೦ | ೦.೧೪ | -೦.೦೩ |
| ೨೧. | ತಿಗಳ | ೧,೫೨,೭೦೦ | ೦.೭೨ | ೭ | ೨೧೧ | ೨೭೦ | ೪೮೮ | ೦.೩೩ | -೦.೩೯ |
| ೨೨. | ಉಪ್ಪಾರ | ೨,೨೦,೭೦೦ | ೧.೦೪ | ೭ | ೩೨೩ | ೧೬೨ | ೪೯೨ | ೦.೩೩ | -೦.೭೧ |
| ೨೩. | ಒಕ್ಕಲಿಗ | ೨೭,೪೪,೩೦೦ | ೧೨.೯೮ | ೩೧೬ | ೯,೪೫೭ | ೬,೧೧೩ | ೧೫,೮೮೬ | ೧೦.೬೮ | -೨.೩೦ |
| ೨೪. | ವೈಶ್ಯ | ೧,೪೪,೮೦೦ | ೦.೬೮ | ೮೦ | ೧,೦೯೦ | ೧೬೧ | ೧,೩೩೧ | ೦.೯೦ | +೦.೨೨ |
| ೨೫. | ವಿಶ್ವಕರ್ಮ | ೪,೮೨,೪೦೦ | ೨.೨೮ | ೧೯ | ೧,೬೨೭ | ೨೬೬ | ೧,೮೮೨ | ೧.೨೭ | -೧.೦೧ |
| ೨೬. | ಯಾದವ | ೩,೧೦,೭೦೦ | ೧.೪೭ | ೧೮ | ೫೪೫ | ೨೯೦ | ೮೫೩ | ೦.೫೭ | -೦.೯೦ |
| ೨೭. | ಲಂಬಾಣಿ | ೧,೭೮,೪೦೦ | ೦.೮೪ | ೪ | ೧೫೫ | ೬೫ | ೨೨೪ | ೦.೧೫ | -೦.೬೯ |
| ೨೮. | ವಡ್ಡರ್ | ೩,೫೯,೮೦೦ | ೧.೭೦ | ೬ | ೪೯೭ | ೪೦೦ | ೯೦೩ | ೦.೬೧ | -೧.೦೯ |
| ೨೯. | ನಾಯರ್ | ೨೪,೬೦೦ | ೦.೧೨ | ೫ | ೨೮೩ | ೨೦೪ | ೪೯೨ | ೦.೩೩ | +೦.೨೧ |

| | | | | | | | | | |
|---|---|---|---|---|---|---|---|---|---|
| ೩೦. | ಪರಿಶಿಷ್ಟೇತರ ಇತರ ಹಿಂದೂ ಜಾತಿಗಳು | ೭,೦೩,೬೦೦ | ೩.೩೦ | ೨೩೮ | ೮,೦೭೦ | ೫,೪೫೪ | ೧೩,೭೬೨ | ೯.೨೬ | --- |
| ೩೧. | ಕೊಡಗ | ೫೬,೨೦೦ | ೦.೨೭ | ೩೯ | ೧,೫೩೨ | ೨೨೩ | ೧,೭೯೪ | ೧.೨೧ | +೦.೯೪ |
| ೩೨. | ಪರಿಶಿಷ್ಟೇತರ ಹಿಂದೂಗಳ ಒಟ್ಟು ಸಂಖ್ಯೆ | ೧,೫೫,೧೪,೮೦೦ | ೩.೩೭ | ೨,೬೬೨ | ೮೦,೫೨೯ | ೨೭,೪೮೬ | ೧,೧೦,೬೭೭ | ೭೪.೪೨ | --- |
| ೩೩. | ಪರಿಶಿಷ್ಟ ಜಾತಿಗಳು | ೨೮,೧೫,೬೦೦ | ೧೩.೩೧ | ೧೦೧ | ೫,೦೫೦ | ೨,೩೫೮ | ೭,೫೦೯ | ೫.೦೫ | -೮.೨೬ |
| ೩೪. | ಪರಿಶಿಷ್ಟ ಪಂಗಡಗಳು | ೮೭,೬೦೦ | ೦.೪೧ | ೪ | ೩೪ | ೧೮೦ | ೨೧೮ | ೦.೧೫ | -೦.೨೬ |
| ೩೫. | ಮುಸ್ಲಿಮರು | ೨೧,೧೯,೯೦೦ | ೧೦.೦೨ | ೩೧೩ | ೧೪,೪೯೪ | ೭,೫೩೬ | ೨೨,೩೪೩ | ೧೫.೦೩ | +೫.೦೧ |
| ೩೬. | ಕ್ರೈಸ್ತರು | ೪,೫೩,೪೦೦ | ೨.೧೪ | ೧೪೮ | ೫,೧೦೭ | ೧,೮೭೧ | ೨,೧೨೬ | ೪.೭೯ | +೨.೬೫ |
| ೩೭. | ಜೈನರು | ೧,೪೭,೫೦೦ | ೦.೭೦ | ೫೩ | ೪೩೨ | ೮೫ | ೫೭೦ | ೦.೩೮ | -೦.೩೨ |
| ೩೮. | ಬೌದ್ಧರು | ೧,೯೦೦ | ... | ... | ೧೭ | ೩ | ೨೦ | ೦.೦೧ | --- |
| ೩೯. | ಸಿಖ್ಖರು | ೪,೩೦೦ | ... | ... | ೧೯ | ೧೨ | ೧೦೨ | ೦.೦೭ | ೦.೧೬ |
| ೪೦. | ಜೊರಾಷ್ಟ್ರರು | ೧,೦೦೦ | ೦.೦೧ | ... | ೧೨೧ | ... | ೧೨೧ | ೦.೦೮ | --- |
| ೪೧. | ಯಹೂದ್ಯರು | ೨೦೦ | ... | ... | ... | ... | ... | ... | +೦.೧೨ |
| ೪೨. | ಧರ್ಮ ಗೊತ್ತಿಲ್ಲದ ಗುಂಪಿಗೆ ಸೇರಿದ ಇತರರು ೧,೧೦೦ (೩೧ನೇ ಐಟಂ ಅಡಿಯಲ್ಲಿ ಸೇರಿಸಲಾಗಿದೆ) | | | | | | | | |
| | ಒಟ್ಟು | ೨,೧೧,೪೭,೩೦೦ | ೧೦೦.೦೦ | ೩,೨೮೧ | ೧,೦೫,೮೭೪ | ೩೯,೫೩೧ | ೧,೪೮,೬೮೬ | ೧೦೦.೦೦ | ... |

ಸೂಚನೆ : ಸರ್ಕಾರಿ ಹುದ್ದೆಗಳ ಒಟ್ಟು ಸಂಖ್ಯೆಯನ್ನು ೧,೪೮,೭೦೦ ಆಗಿ ತೆಗೆದುಕೊಳ್ಳಲಾಗಿದೆ.

(ಆಕರ : ರಿಪೋರ್ಟ್ ಆಫ್ ದಿ ಕರ್ನಾಟಕ ಫರ್ಸ್ಟ್ ಬ್ಯಾಕ್‌ವರ್ಡ್ ಕ್ಲಾಸಸ್ ಕಮೀಷನ್, ಸಂಪುಟ ೨, ಪು. ೭-೮).

## ಕೋಷ್ಟಕ - ಈ

೧೯೮೪ರಲ್ಲಿ ಸರ್ಕಾರಿ ಸೇವೆಯಲ್ಲಿದ್ದ ೧, ೨ ಮತ್ತು ೩ನೇ ದರ್ಜೆ ನೌಕರರ ಜಾತಿವಾರು ಪ್ರಾತಿನಿಧ್ಯ

| ಕ್ರಮಸಂಖ್ಯೆ | ಜಾತಿ | ರಾಜ್ಯ ಸರ್ಕಾರದ ನೌಕರರ ಸಂಖ್ಯೆ | | | ಒಟ್ಟು | ಒಟ್ಟು-ಶೇಕಡವಾರು |
|---|---|---|---|---|---|---|
| | | ದರ್ಜೆ-I | ದರ್ಜೆ-II | ದರ್ಜೆ-III | | |
| ೧ | ೨ | ೩ | ೪ | ೫ | ೬ | ೭ |
| ೧. | ಅಗಸ | ೧೩ | ೪೯ | ೧೬೩೦ | ೧೬೮೨ | ೦.೭೫ |
| ೨. | ಅಂಬಾಲವಾಸಿ | - | - | - | - | - |
| ೩. | ಅಂಬಾಲಕಾರನ್ | - | - | - | - | - |
| ೪. | ಬಾಂಧಿ | ೩ | ೧೦ | ೫೫ | ೬೮ | ೦.೦೩ |
| ೫. | ಬಲಿಜ | ೬೯ | ೨೫೮ | ೩೦೫೬ | ೩೩೮೩ | ೧.೫೦ |
| ೬. | ಬಾವಾಜಿ | - | ೩ | ೭೯ | ೮೨ | ೦.೦೪ |
| ೭. | ಬೇಡ | ೨೮ | ೮೨ | ೨೩೮೪ | ೨೪೯೪ | ೧.೧೧ |
| ೮. | ಬೆಸ್ತ | ೫೫ | ೧೭೪ | ೩೭೮೯ | ೪೦೧೮ | ೧.೭೯ |
| ೯. | ಬ್ರಾಹ್ಮಣ | ೧೦೩೬ | ೩೩೧೪ | ೩೦೫೮೭ | ೩೪೦೩೭ | ೧೫.೫೪ |
| ೧೦. | ಬುಡುಬುಡುಕಿ | - | ೧ | ೬೦ | ೬೧ | ೦.೦೩ |
| ೧೧. | ಬಂಟ | ೯೭ | ೨೦೮ | ೧೫೭೯ | ೧೮೮೪ | ೦.೮೪ |
| ೧೨. | ದರ್ಜಿ | ೨೩ | ೭೩ | ೭೪೩ | ೮೩೯ | ೦.೩೭ |

| | | | | | |
|---|---|---|---|---|---|
| ೧೩. ದಾಸರು | ೮ | ೪ | ೧೦೩ | ೧೫ | ೦.೦೫ |
| ೧೪. ದೇಶಬಂಡಾರಿ | - | - | ೭ | ೭ | ೦.೦೦ |
| ೧೫. ದೇವಾಡಿಗ | - | ೧೨ | ೬೩೨ | ೬೪೭ | ೦.೨೯ |
| ೧೬. ದೇವಾಂಗ | ೨೧ | ೬೪ | ೧೬೨೫ | ೧೭೧೦ | ೦.೭೬ |
| ೧೭. ಗಾಣಿಗ | ೩೩ | ೬೪ | ೧೧೨೯ | ೧೨೨೬ | ೦.೫೫ |
| ೧೮. ಗಟ್ಟಿ | - | ೧ | ೪೧ | ೪೨ | ೦.೦೨ |
| ೧೯. ಗೊಲ್ಲ | ೫೬ | ೧೨೨ | ೧೫೪೦ | ೧೭೧೮ | ೦.೭೬ |
| ೨೦. ಗೊಂಧಳಿ | - | ೩ | ೫೭ | ೬೦ | ೦.೦೩ |
| ೨೧. ಗೋಣಿಗ | - | ೪ | ೬೦ | ೬೪ | ೦.೦೩ |
| ೨೨. ಗುಡಿಗಾರ | ೧ | ೧ | ೨೯ | ೩೧ | ೦.೦೧ |
| ೨೩. ಹಾಲವಕ್ಕಿ ವಕ್ಕಲ್ | - | ೧ | ೭೪ | ೭೫ | ೦.೦೩ |
| ೨೪. ಹೆಳವ | ೨ | ೧ | ೩೧ | ೩೪ | ೦.೦೨ |
| ೨೫. ಹಿಂದೂ ಸಿಕ್ಕಲಿಗಾರ | - | - | ೯ | ೯ | ೦.೦೦ |
| ೨೬. ಹಿಂದೂ ಹೂಗಾರ | ೨ | ೭ | ೫೪ | ೬೩ | ೦.೦೩ |
| ೨೭. ಈಡಿಗ | ೫೦ | ೧೫೩ | ೨೪೪೦ | ೨೬೪೩ | ೧.೧೮ |
| ೨೮. ಜೆಟ್ಟಿ | ೩ | ೭ | ೫೯ | ೬೯ | ೦.೦೩ |
| ೨೯. ಜೋಗಿ | ೬ | ೨ | ೭೮ | ೮೬ | ೦.೦೪ |
| ೩೦. ಕಮ್ಮ | ೬ | ೨೧ | ೬೦೬ | ೬೩೩ | ೦.೨೮ |
| ೩೧. ಕಣಿಯನ್ | ೧ | ೨ | ೧೮ | ೨೧ | ೦.೦೧ |
| ೩೨. ಕಂಜೀರ್‌ಬತ್ | - | - | ೧೬ | ೧೬ | ೦.೦೧ |

| | | | | | |
|---|---|---|---|---|---|
| ೩೩. | ಕಟಿಕ್ | ೭ | ೧೬ | ೨೯೯ | ೩೨೨ | ೦.೧೪ |
| ೩೪. | ಕೊಡಗರು+ಅಮ್ಮ ಕೊಡವ | ೭೧ | ೨೭೮ | ೩೧೪೯ | ೩೪೯೮ | ೧.೫೬ |
| ೩೫. | ಕೋಟೆ ಕ್ಷತ್ರಿಯ | ೩ | ೬ | ೨೨೪ | ೨೩೩ | ೦.೧೦ |
| ೩೬. | ಕೊಟ್ಟರಿ | ೧ | - | ೩೮ | ೩೯ | ೦.೦೨ |
| ೩೭. | ಕ್ಷತ್ರಿಯ | ೧೬ | ೬೭ | ೧೩೦೭ | ೧೩೯೦ | ೦.೬೨ |
| ೩೮. | ರಾಜು ಕ್ಷತ್ರಿಯ | ೧ | ೭ | ೧೪೦ | ೧೪೮ | ೦.೦೭ |
| ೩೯. | ಕುಡುಬಿ | - | - | ೬೪ | ೬೪ | ೦.೦೩ |
| ೪೦. | ಕುಂಬಾರ | ೧೩ | ೫೩ | ೧೦೬೮ | ೧೧೩೪ | ೦.೫೦ |
| ೪೧. | ಕುರುಬ | ೧೨೦ | ೪೦೯ | ೫೮೦೧ | ೬೩೩೦ | ೨.೮೧ |
| ೪೨. | ಲಾಡರ | - | - | ೨ | ೨ | ೦.೦೦ |
| ೪೩. | ಲಿಂಗಾಯಿತ/ವೀರಶೈವ | ೧೧೯೦ | ೩೭೨೧ | ೩೯೩೪೯ | ೪೪೨೬೦ | ೧೯.೬೮ |
| ೪೪. | ಮರಾಠಾ | ೭೧ | ೨೨೪ | ೭೦೪೦ | ೭೩೩೫ | ೩.೨೬ |
| ೪೫. | ಮೇದರ | - | ೭ | ೮೪ | ೯೧ | ೦.೦೪ |
| ೪೬. | ಮುದಲಿಯರ್ | ೨೨ | ೫೮ | ೧೦೧೮ | ೧೦೯೮ | ೦.೪೯ |
| ೪೭. | ನಗರ್ತರು | ೧ | ೫ | ೫೫ | ೬೧ | ೦.೦೩ |
| ೪೮. | ನಾಯರ್ | ೪ | ೨೧ | ೩೭೧ | ೩೯೬ | ೦.೧೮ |
| ೪೯. | ನಾಯಿಂದ | ೬ | ೪೧ | ೧೦೧೮ | ೧೦೬೫ | ೦.೪೭ |
| ೫೦. | ನೇಯ್ಗಿ | ೪೮ | ೧೫೨ | ೧೬೮೪ | ೧೮೮೪ | ೦.೮೪ |
| ೫೧. | ಪಟ್ಟೆಗಾರ್ | ೧ | ೨ | ೫೮ | ೬೧ | ೦.೦೩ |
| ೫೨. | ರಾಜಪೂತ | ೨೨ | ೬೦ | ೧೨೦೭ | ೧೨೮೯ | ೦.೫೭ |

| | | | | | | |
|---|---|---|---|---|---|---|
| ೫೩. | ರಾವುಳ | - | ೧೩ | ೧೧ | ೨೪ | ೦.೦೧ |
| ೫೪. | ರಾಯರಾವುತ | - | ೧ | ೬ | ೭ | ೦.೦೦ |
| ೫೫. | ಹಿಂದೂ ಸಾದರು | ೩ | ೬ | ೪೧ | ೫೦ | ೦.೦೨ |
| ೫೬. | ಸಾತಾನಿ | ೧ | ೧೦ | ೩೮೨ | ೩೯೩ | ೦.೧೭ |
| ೫೭. | ಪರಿಶಿಷ್ಟ ಜಾತಿ | ೪೮೮ | ೧೫೧೮ | ೧೭೧೮೦ | ೧೯೧೮೬ | ೮.೫೩ |
| ೫೮. | ಪರಿಶಿಷ್ಟ ಪಂಗಡ | ೭೩ | ೨೧೩ | ೫೯೦೮ | ೬೧೯೪ | ೨.೭೫ |
| ೫೯. | ಶಿದ್ದಿ | - | - | ೧ | ೧ | ೦.೦೦ |

(ಆಕರ : ರಿಪೋರ್ಟ್ ಆಫ್ ದಿ ಕರ್ನಾಟಕ ಥರ್ಡ್ ಬ್ಯಾಕ್‌ವರ್ಡ್ ಕ್ಲಾಸಸ್ ಕಮೀಷನ್, ಸಂಪುಟ ೨, ಪು. ೧೦೭-೧೦೯).

ಈ ಸಂಬಂಧದಲ್ಲಿ ಇನ್ನೊಂದು ಸಮೀಕ್ಷೆಯನ್ನು ನೋಡಬಹುದು. ೧೯೮೮ರ ಅಂಕಿ-ಅಂಶದ ಪ್ರಕಾರ, ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಲಿಂಗಾಯಿತ ಮತ್ತು ಒಕ್ಕಲಿಗ - ಈ ಎರಡು ಪ್ರಬಲ ಜಾತಿಗಳಲ್ಲಿ ಶೇ. ೪೯.೬ ಸಂಸದರು, ಶೇ. ೪೫.೬ ವಿಧಾನಸಭಾ ಸದಸ್ಯರು, ಶೇ. ೫೪.೪ ವಿಧಾನ ಪರಿಷತ್ ಸದಸ್ಯರು, ಶೇ. ೫೧.೪ ಜಿಲ್ಲಾ ಪರಿಷತ್ ಸದಸ್ಯರು, ಶೇ. ೬೩.೨ ಜಿಲ್ಲಾ ಪರಿಷತ್ ಅಧ್ಯಕ್ಷರಿದ್ದರು.

ಅಷ್ಟೇ ಅಲ್ಲ, ೧೯೯೮ ರಲ್ಲಿ ನಡೆಸಲಾದ ಸಮೀಕ್ಷೆಯೊಂದರ ಪ್ರಕಾರ, ೧೯೫೨ ರಿಂದ ೧೯೯೮ರ ವರೆಗೆ ಬ್ರಾಹ್ಮಣರನ್ನು ಒಳಗೊಂಡಂತೆ, ಲಿಂಗಾಯಿತ ಮತ್ತು ಒಕ್ಕಲಿಗ ಮುಖ್ಯಮಂತ್ರಿಗಳೇ ಹೇಗೆ ಕರ್ನಾಟಕದ ಆಡಳಿತದ ಚುಕ್ಕಾಣಿ ಹಿಡಿದಿದ್ದರೆಂಬುದನ್ನು ಈ ಕೆಳಗಿನ ಪಟ್ಟಿಯಲ್ಲಿ ಗಮನಿಸಬಹುದು:

| | | |
|---|---|---|
| ೧೯೫೨ ರಿಂದ ೧೯೫೬ | : | ೪ ವರ್ಷ ಒಕ್ಕಲಿಗರು<br>(ಕರ್ನಾಟಕ ಏಕೀಕರಣಕ್ಕೆ ಮುಂಚೆ) |
| ೧೯೫೬ ರಿಂದ ೧೯೭೨ | : | ೧೬ ವರ್ಷ ಸತತವಾಗಿ ಲಿಂಗಾಯಿತರು<br>(ಕರ್ನಾಟಕ ಏಕೀಕರಣದ ನಂತರ) |
| ೧೯೭೨ ರಿಂದ ೧೯೮೦ | : | ೮ ವರ್ಷ ಅರಸು ಜನಾಂಗದವರು |
| ೧೯೮೦ ರಿಂದ ೧೯೮೩ | : | ೩ ವರ್ಷ ಬ್ರಾಹ್ಮಣರು |
| ೧೯೮೩ ರಿಂದ ೧೯೮೭ | : | ೫ ವರ್ಷ ಬ್ರಾಹ್ಮಣರು |
| ೧೯೮೭ ರಿಂದ ೧೯೮೮ | : | ೧ ವರ್ಷ ಲಿಂಗಾಯಿತರು |
| ೧೯೮೯ ರಿಂದ ೧೯೯೦ | : | ೧ ವರ್ಷ ಲಿಂಗಾಯಿತರು |
| ೧೯೯೦ ರಿಂದ ೧೯೯೪ | : | ೪ ವರ್ಷ ಹಿಂದುಳಿದವರು<br>(೨ ವರ್ಷ ಈಡಿಗರು ಮತ್ತು ೨ ವರ್ಷ ದೇವಾಡಿಗರು) |
| ೧೯೯೫ ರಿಂದ ೧೯೯೬ | : | ೧ ೧/೨ ವರ್ಷ ಒಕ್ಕಲಿಗರು |
| ೧೯೯೬ ರಿಂದ ೧೯೯೯ | : | ೩ ವರ್ಷ ಲಿಂಗಾಯಿತರು.* |
| ೧೯೯೯ ರಿಂದ | : | ಒಕ್ಕಲಿಗರು |

ಮುಂದುವರೆದ ಜಾತಿಗಳು ಜಾತಿಯನ್ನೆ ಪ್ರಧಾನವಾಗಿಟ್ಟುಕೊಂಡು ರಾಜಕೀಯ ಶಕ್ತಿಯನ್ನು ಕೈವಶ ಮಾಡಿಕೊಳ್ಳುವುದರ ಮೂಲಕ ಹೇಗೆ ಸ್ಥಾನ ಭದ್ರಪಡಿಸಿಕೊಳ್ಳುತ್ತವೆಂಬುದಕ್ಕೆ ಈ ಯಾದಿ ಒಂದು ಉತ್ತಮ ಉದಾಹರಣೆ. ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ತಮಗನುಕೂಲವಾದ ಕಾರ್ಯನೀತಿಗಳನ್ನು ಜಾರಿಗೆ ತರಲು ಇದರಿಂದ ಸಾಧ್ಯವೆಂಬುದು ಸ್ಪಷ್ಟ. ಮೇಲಿನ ಸಮೀಕ್ಷೆಯಿಂದ ವ್ಯಕ್ತಪಡುವಂತೆ, ಕರ್ನಾಟಕ ಏಕೀಕರಣಕ್ಕಿಂತ ಮುಂಚೆಯಿಂದ ಇಲ್ಲಿಯವರೆಗೆ, ಅಂದರೆ ೧೯೫೨ ರಿಂದ ೧೯೯೯ರ ವರೆಗೆ ಒಟ್ಟು ೨೦ ವರ್ಷ ಕಾಲ ಲಿಂಗಾಯಿತರು, ೮ ವರ್ಷ (ಸತತವಾಗಿ) ಬ್ರಾಹ್ಮಣರು, ೮ ವರ್ಷ (ಸತತವಾಗಿ) ಅರಸು ಜನಾಂಗ, ೫ ೧/೨ ವರ್ಷ ಒಕ್ಕಲಿಗರು ಮತ್ತು ೪ ವರ್ಷ (ಸತತವಾಗಿ) ಹಿಂದುಳಿದವರು ಮುಖ್ಯಮಂತ್ರಿಗಳಾಗಿ ಸ್ಥಾನ ಪಡೆದಿದ್ದಾರೆ. ಕರ್ನಾಟಕ

---

* ಬೆಂಗಳೂರಿನ ಕರ್ನಾಟಕ ರಾಜ್ಯ ಹಿಂದುಳಿದ, ಅಲ್ಪಸಂಖ್ಯಾತರ ಸಮನ್ವಯ ಸಮಿತಿ ಪ್ರಕಟಣೆ (೨೮.೧೦.೧೯೯೮).

ಏಕೀಕರಣದ ನಂತರ ಮುಖ್ಯಮಂತ್ರಿಗಳಾದವರನ್ನು ಗಣನೆಗೆ ತೆಗೆದುಕೊಂಡರೆ ಒಕ್ಕಲಿಗರು ೧೧½ ವರ್ಷ ಅಧಿಕಾರ ಪಡೆದಿರುವುದನ್ನು ಕಾಣಬಹುದು. ಈಗ ೧೯೯೯ರಿಂದ ಮತ್ತೆ ಒಕ್ಕಲಿಗರಿಗೇ ಮುಖ್ಯಮಂತ್ರಿ ಪಟ್ಟ ದೊರೆತಿದೆ.

ಕರ್ನಾಟಕ ಏಕೀಕರಣದ ನಂತರ ಇಲ್ಲಿಯವರೆಗೆ ೧೮ ಬಾರಿ ಮುಖ್ಯಮಂತ್ರಿಗಳಾಗಿ ಪ್ರಮಾಣವಚನ ಸ್ವೀಕರಿಸಲಾಗಿದೆ. ಇದರಲ್ಲಿ ೯ ಬಾರಿ ಲಿಂಗಾಯಿತ ಜನಾಂಗದವರು, ೯ ಬಾರಿ ಎಲ್ಲಾ ಜನಾಂಗದವರು ಮುಖ್ಯಮಂತ್ರಿಗಳಾಗಿದ್ದಾರೆ. ಹಳೇ ಮೈಸೂರು ಭಾಗದಿಂದ ೩ ಬಾರಿ ಲಿಂಗಾಯಿತರು, ೩ ಬಾರಿ ಬ್ರಾಹ್ಮಣರು, ೨ ಬಾರಿ ಅರಸು ಜನಾಂಗದವರು, ೨ ಬಾರಿ ಹಿಂದುಳಿದವರು ಮತ್ತು ೨ ಬಾರಿ ಒಕ್ಕಲಿಗರು ಮುಖ್ಯಮಂತ್ರಿಗಳಾಗಿದ್ದಾರೆ. ಉತ್ತರ ಕರ್ನಾಟಕ ಭಾಗದಿಂದ ೬ ಬಾರಿ ಲಿಂಗಾಯಿತರೇ ಮುಖ್ಯಮಂತ್ರಿಗಳಾಗಿದ್ದಾರೆ. ಹಳೇ ಮೈಸೂರು ಭಾಗದಲ್ಲಿ ೧೨ ಸಾರಿ ಮುಖ್ಯಮಂತ್ರಿಗಳಾದಾಗ ಎಲ್ಲಾ ಜಾತಿಗಳ ಜನರು ಪ್ರಾತಿನಿಧ್ಯ ಪಡೆದಿದ್ದಾರೆ. ಉತ್ತರ ಕರ್ನಾಟಕದಿಂದ ಮುಖ್ಯಮಂತ್ರಿಗಳಾದವರೆಲ್ಲರೂ ೬ ಬಾರಿ ಲಿಂಗಾಯಿತರೇ ಆಗಿರುವುದರಿಂದ, ಜಾತೀಯತೆ ವಿರುದ್ಧ ಕಹಳೆ ಊದಿದ ಬಸವಣ್ಣನವರು ಹುಟ್ಟಿದ ಪ್ರದೇಶದಲ್ಲಿ ಇಂದಿಗೂ ಸಾಮಾಜಿಕ ಅಸಮತೋಲನ ಏಕಿದೆ ಎನ್ನುವುದನ್ನು ನೋಡಬಹುದು. ಹೀಗಿರುವಾಗ, ಶೇ. ೨೧ ರಷ್ಟಿರುವ ದಲಿತರು ಮತ್ತು ಶೇ. ೫೦ ರಷ್ಟಿರುವ ಹಿಂದುಳಿದ ಅಲ್ಪಸಂಖ್ಯಾತ ವರ್ಗಗಳವರು ತಮಗಾದ ಅನ್ಯಾಯವನ್ನು ಸಹನೆಯಿಂದಲೇ ಅನುಭವಿಸು ತ್ತಿರುವರೆಂದು ಅರ್ಥವಾಗುತ್ತದಲ್ಲವೇ?

ಕೇಂದ್ರದಲ್ಲಿ ಮಂಡಲ ವರದಿ ಜಾರಿಯಾಗುವವರೆಗೆ ಮೀಸಲಾತಿ ವಿಷಯದಲ್ಲಿ ರಾಷ್ಟ್ರಮಟ್ಟದಲ್ಲಿ ಏಕಾಭಿಪ್ರಾಯವಿರಲಿಲ್ಲವೆನ್ನುವುದನ್ನು ಒಪ್ಪುವಂತೆಯೇ, ಹಿಂದುಳಿದಿರುವಿಕೆ ಯನ್ನು ಅರ್ಥಮಾಡಿಕೊಳ್ಳುವಲ್ಲಿ, ಅರ್ಥೈಸುವಲ್ಲಿ ಕರ್ನಾಟಕದ ಎಲ್ಲಾ ಹಿಂದುಳಿದ ಆಯೋಗಗಳ ವರದಿಗಳೂ ವಿಫಲವಾಗಿವೆಯೆಂಬುದನ್ನೂ ಒಪ್ಪಿಕೊಳ್ಳಬೇಕಾಗುತ್ತದೆ. ಹಾವನೂರು ಆಯೋಗ ರಚನೆಗೆ ಕಾರಣಕರ್ತರಾದ ಡಿ. ದೇವರಾಜ ಅರಸು ಅವರ ಉದ್ದೇಶದ ಇನ್ನೊಂದು ಮುಖವನ್ನು ವಿಶ್ಲೇಷಿಸಲೆತ್ನಿಸಿರುವ ಸಮಾಜವಿಜ್ಞಾನಿಗಳು, ಮೀಸಲಾತಿ ನೀಡಿಕೆ ಸಂಬಂಧದ ಸರ್ಕಾರಿ ಪ್ರಯತ್ನಗಳು ಕೇವಲ ಬೂಟಾಟಿಕೆಗಳೆಂಬ ತೀರ್ಮಾನಕ್ಕೆ ಬಂದಿರುವ ಹಿನ್ನೆಲೆಯಲ್ಲಿ, ಈವರೆಗೆ ಜಾರಿಯಾಗಿರುವ ಕೇಂದ್ರ ಮತ್ತು ರಾಜ್ಯಗಳ ಎಲ್ಲಾ ಹಿಂದುಳಿದ ವರ್ಗಗಳ ಆಯೋಗಗಳ ವರದಿಗಳನ್ನು ಕುರಿತು ಸಂಶಯಿಸುವಂತಾಗುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳದ ಈ ಆಯೋಗಗಳ ಶಿಫಾರಸುಗಳು ಹಿಂದುಳಿದ ವರ್ಗಗಳ ಆತಂಕವನ್ನು ಇನ್ನಷ್ಟು ಹೆಚ್ಚಿಸಿವೆಯೆಂಬುದು ಗಮನಾರ್ಹ.

❑❑

# ೪. ದಲಿತ ಚಳವಳಿಯ ವಿವಿಧ ನೆಲೆಗಳು

ದಲಿತರ ಚರಿತ್ರೆಯೆಂದರೆ ಸಂಘರ್ಷಮಯ ಚರಿತ್ರೆಯೆಂದೇ ಅರ್ಥ. ಈ ಸಂಘರ್ಷದ ಹಿನ್ನೆಲೆ ದೀರ್ಘಕಾಲದಿಂದ ಕೈಗೊಂಡ ನಿರಂತರ ಹೋರಾಟವನ್ನು ಆಧರಿಸಿರುವಂಥಾದ್ದು. ಸಂವಿಧಾನಾತ್ಮಕ ಸಂರಕ್ಷಣೆಯೊಡನೆ ದಲಿತೇತರರ ಮನ್ನಣೆಗೆ ಪಾತ್ರವಾಗುವ ಹಂತ ತಲುಪುವವರೆಗಿನ ಅವರ ಪ್ರಯತ್ನಗಳನ್ನು ಚರಿತ್ರೆಯಲ್ಲಿ ವ್ಯವಸ್ಥಿತವಾಗಿ ದಾಖಲಿಸಲಾಗಿಲ್ಲ. ಆದರೆ ದಲಿತಪರ ಹೋರಾಟಗಳ ಮುಂಚೂಣಿಯಲ್ಲಿರುವ ಪ್ರಜ್ಞಾವಂತರನೇಕರು ದಲಿತ ಮನೋಧರ್ಮವನ್ನು, ಸಂವೇದನೆಗಳನ್ನು ಅವುಗಳ ಸಹಜ ಸ್ಥಿತಿಯಲ್ಲೇ ತೋರಿಸುವ ನಿಟ್ಟಿನಲ್ಲಿ ಸಾಕಷ್ಟು ಯಶಸ್ವಿಯಾಗಿರುವುದು ನಿಜ. ಪ್ರಸ್ತುತ ಭಾರತೀಯ ಸಮಾಜದಲ್ಲಿ ದಲಿತರ ಸಮಸ್ಯೆ ಒಂದು ಸಂಕೀರ್ಣ ಸಮಸ್ಯೆಯಾಗಿಯೇ ಉಳಿದುಕೊಂಡಿದ್ದು, ಹೊಸ ಸಂಘರ್ಷಗಳನ್ನು ಎದುರಿಸಲು ದಲಿತವರ್ಗದವರನ್ನು ಸಜ್ಜುಗೊಳಿಸುತ್ತಿದೆ.

ಸಂವಿಧಾನಾತ್ಮಕ ರಕ್ಷಣೆಯಿದ್ದರೂ, ಸೌಲಭ್ಯಗಳು ಲಭ್ಯವಿದ್ದರೂ ದಲಿತರ ಬದುಕು ಅಸಹನೀಯವಾಗಿದೆ. ಸಮಾನತಾ ತತ್ವದಂತೆ ಜೀವಿಸಲು ಬಹುಪಾಲು ದಲಿತ ಸಮುದಾಯಗಳಿಗೆ ಇನ್ನೂ ಸಾಧ್ಯವಾಗಿಲ್ಲ. ಅಸ್ಪೃಶ್ಯತಾಚರಣೆ ಹಿಂದೂಧರ್ಮದ ಕೊಡುಗೆ ಎನ್ನುವುದಾದರೆ, ಎಲ್ಲಿಯವರೆಗೆ ಹಿಂದೂಧರ್ಮ ಜಾತಿ ಆಧಾರದ ಮೇಲೆ ಮುಂದುವರೆಯುತ್ತದೆಯೋ ಅಲ್ಲಿಯವರೆಗೆ ಅಸ್ಪೃಶ್ಯರಿಗೆ ಮುಕ್ತಿಯಿಲ್ಲವೆಂಬ ಡಾ. ಬಿ. ಆರ್. ಅಂಬೇಡ್ಕರ್‌ರ ಮಾತು ಖಂಡಿತ ಉತ್ಪ್ರೇಕ್ಷೆಯಿಂದ ಕೂಡಿದುದಲ್ಲ. ರಾಷ್ಟ್ರದ ಪ್ರಗತಿಗೆ ಅಡ್ಡಿಯಾಗಿರುವಂಥಾ ಹಾಗೂ ಹಿಂದೂ ಸಮಾಜದ ಬೆಳವಣಿಗೆಗೆ, ವಿಕಾಸಕ್ಕೆ ಕೊಡಲಿಪೆಟ್ಟು ಹಾಕಿದಂಥಾ ಅಸ್ಪೃಶ್ಯತಾಚರಣೆ ಕೊನೆಗೊಳ್ಳಬೇಕಾದ್ದು ಅನಿವಾರ್ಯವೆಂಬ ಅಭಿಪ್ರಾಯ ವ್ಯಾಪಕವಾಗಿದ್ದರೂ, ಇದನ್ನು ಗೌಣವಾಗಿ ಕಾಣುವಂಥಾ ಪ್ರವೃತ್ತಿ ಇನ್ನೂ ಮುಂದುವರೆದಿರುವುದು ಸ್ಪಷ್ಟ. ಭಾರತದಲ್ಲಿ ಜಾತಿಪದ್ಧತಿಯನ್ನು ಅಳಿಸಿ ಹಾಕದೆ ಅಸ್ಪೃಶ್ಯತೆಯನ್ನು ನಿರ್ಮೂಲ ಮಾಡಲು ಸಾಧ್ಯವಿಲ್ಲವೆಂಬುದೇ ಈಗಾಗಲೇ ಎಲ್ಲರ ಗಮನಕ್ಕೆ ಬಂದಿರುವಂಥಾದ್ದು.

### ೪.೧. ದಲಿತರ ಸ್ಥಿತಿ-ಗತಿ : ಹಿನ್ನೋಟ

೧೯೫೦ ಜನವರಿ ೨೬ ರಂದು ಭಾರತ ಸಂವಿಧಾನವನ್ನು ಉದ್ಘೋಷಿಸಲಾಯಿತು. ಈ ಸಂವಿಧಾನದ ೧೭ ನೇ ಅನುಚ್ಛೇದದಲ್ಲಿ ಅಸ್ಪೃಶ್ಯತೆಯನ್ನು ರದ್ದು ಮಾಡಿರುವುದನ್ನು ತಿಳಿಸಲಾಗಿದೆ. ಇದನ್ನು ರೂಪಿಸುವ ಹಿನ್ನೆಲೆಯಲ್ಲಿ ಡಾ. ಅಂಬೇಡ್ಕರರು ನಡೆಸಿದ ಚಿಂತನ-ಮಂಥನಗಳು ಕೇವಲ ಅವರ ವೈಯಕ್ತಿಕ ನೆಲೆಯವಾಗಿರದೆ, ಚರಿತ್ರೆಯಾರಂಭ ಕಾಲದಿಂದಲೂ ಮುಂದುವರೆದು ಬಂದ ಈ ಅನಿಷ್ಟ ಪದ್ಧತಿಯ ಪರಂಪರೆಯನ್ನು

ಸೂಕ್ಷ್ಮಾಧ್ಯಯನ ಮಾಡಿ ಕಂಡುಕೊಂಡ ವಾಸ್ತವಾಂಶಗಳಾಗಿದ್ದವು. ಅವರು ಅಭಿಪ್ರಾಯಿಸಿದಂತೆ, ಅಸ್ಪೃಶ್ಯತೆಯನ್ನು ಸಂವಿಧಾನದ ಮೂಲಕವಷ್ಟೆ ನಿರ್ಮೂಲಗೊಳಿಸಲು ಸಾಧ್ಯವಿಲ್ಲ. ಈ ಪಿಶಾಚವನ್ನು ದೇಶದಿಂದ ಓಡಿಸಬೇಕೆಂದರೆ ಕೋಟಿಗಟ್ಟಲೆ ಹಿಂದೂಗಳ ಹೃದಯ ಪರಿವರ್ತನೆಯಾಗಬೇಕು. ಅದರ ಹೊರತು ಅಸ್ಪೃಶ್ಯತಾ ನಿವಾರಣೆ ಸಾಧ್ಯವಿಲ್ಲ.

ಡಾ. ಅಂಬೇಡ್ಕರ್‌ರ ಮಾತಿನ ಅರ್ಥ ಇಂದು ಇನ್ನಷ್ಟು ಸ್ಪಷ್ಟಗೊಳ್ಳುತ್ತಿದೆ. ಭಾರತೀಯ ಸಂಸ್ಕೃತಿಯ ಆಳದಲ್ಲಿಳಿದ ಜಾತಿವ್ಯವಸ್ಥೆಯ ಬೇರುಗಳು ದಲಿತರ ಪಾಲಿಗೆ ವಿಷಫಲಗಳನ್ನು ಉಣಿಸುವಂಥವಾಗಿರುವುದಂತೂ ದಿಟ. ೧೯೬೨ರಲ್ಲಿ ಭಾರತದ ಪರಿಶಿಷ್ಟ ಜಾತಿ-ವಂಗಡಗಳ ಕಮೀಷನರರು ನೀಡಿದ ತಮ್ಮ ೧೦ನೇ ವರದಿಯಲ್ಲಿ, ಅಧಿಕೃತ ಮತ್ತು ಅನಧಿಕೃತ ಸಂಸ್ಥೆಗಳ ಪರಿಶ್ರಮದ ಫಲವಾಗಿ ಅಸ್ಪೃಶ್ಯತೆಯೆಂಬ ಕೊಳಕು ಪೂರ್ಣ ನಿವಾರಣೆಯಾಗುತ್ತದೆಂದು ಅಭಿಪ್ರಾಯಿಸಿದುದುಂಟು. ಸಂವಿಧಾನದ ಉದ್ಘೋಷಣೆಯ ವರ್ಷದಿಂದ ಮುಂದಿನ ೧೦ ವರ್ಷಗಳಲ್ಲಿ ಈ ಪಿಡುಗನ್ನು ಸಂಪೂರ್ಣ ನಿರ್ಮೂಲಗೊಳಿಸಬೇಕೆಂಬ ಗುರಿ ಇದ್ದಿತಾದರೂ ೧೯೬೦ರ ನಂತರದ ಮೂರು ದಶಕಗಳ ಕಾಲಾವಧಿಯಲ್ಲಿ ಅದು ಸಮರ್ಪಕವಾಗಿ ಈಡೇರಿಲ್ಲದಿರುವುದು ದೃಢಪಟ್ಟಿದೆ. ಸಂವಿಧಾನದ ೧೭ನೇ ಅನುಚ್ಛೇದ ನಿಮ್ನವರ್ಗದವರ ಪಾಲಿಗೆ ಸಾಮಾಜಿಕ ನೋವು, ಹತಾಶೆ, ಅಪಮಾನಗಳಿಂದ ವಿಮುಕ್ತಿಗೊಳಿಸುವ ಸನ್ನದು ಎನಿಸಿದರೂ, ಮೇಲ್ನೋಟಕ್ಕೆ ಅವರಿಗೆ ಸಮಾನತೆ ಮತ್ತು ಸವಲತ್ತುಗಳು ದೊರೆತಿರುವಂತೆ ಭಾಸವಾದರೂ ಭಾರತದ ದಲಿತ ವರ್ಗಗಳು ಜಾತಿವಿನಾಶದ ಆಂದೋಲನವನ್ನು ಹಲವು ವಿಧದಲ್ಲಿ ಮುಂದುವರೆಸಿರುವುದರ ಔಚಿತ್ಯವೇನು? ಇದು ಅನಿವಾರ್ಯವೇ?

ಕರ್ನಾಟಕಕ್ಕೆ ಸಂಬಂಧಿಸಿದಂತೆ, ರಾಷ್ಟ್ರಪತಿಯವರಿಂದ ಅನುಮೋದಿಸಲ್ಪಟ್ಟ ಪರಿಶಿಷ್ಟ ಜಾತಿ-ವಂಗಡ ಮತ್ತು ಇತರ ದುರ್ಬಲವರ್ಗಗಳ ಸಂಖ್ಯೆ ೧೫೦ ಕ್ಕೂ ಹೆಚ್ಚು. ಪರಿಶಿಷ್ಟ ಜಾತಿ ಮತ್ತು ವಂಗಡ - ಈ ಎರಡೂ ವರ್ಗಗಳಲ್ಲಿ ಇರುವ ಕೆಲವು ಜಾತಿಗಳವರು ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಇನ್ನೂ ತೀರಾ ಹಿಂದುಳಿದಿದ್ದು, ತಮ್ಮದೇ ವರ್ಗದ ಇತರ ಜಾತಿಗಳವರ ತಿರಸ್ಕಾರಕ್ಕೆ, ಅವಹೇಳನಕ್ಕೆ ಗುರಿಯಾಗಿರುವುದುಂಟು. ಜಾಗೃತಗೊಂಡ ಇಂಥಾ ಜಾತಿಗಳು ಪ್ರತ್ಯೇಕ ಮೀಸಲಾತಿ ಬೇಡಿಕೆಯೊಡನೆ ತಮಗಾದ ಅನ್ಯಾಯ, ವಂಚನೆಗಳ ವಿರುದ್ಧ ದನಿ ಎತ್ತಿರುವುದು, ಎತ್ತಲಿರುವುದು ಈ ನಿಟ್ಟಿನಲ್ಲಿ ತೋರಿಸಬಹುದಾದ ಒಂದು ಸಾಮಾನ್ಯ ಉದಾಹರಣೆ. ಈ ಬಗೆಯ ತಾರತಮ್ಯವೂ ನಿನ್ನೆ ಮೊನ್ನೆಯದಾಗಿರದೆ ತನ್ನದೇ ಚಾರಿತ್ರಿಕ ಹಿನ್ನೆಲೆ ಹೊಂದಿದೆ. ಏನೇ ಇದ್ದರೂ ಹಿಂದುಳಿದ ವರ್ಗಗಳ ಸಮಸ್ಯೆ ಒಂದು ಬಗೆಯದಾದರೆ ದಲಿತ ಸಮುದಾಯಗಳ ಸಮಸ್ಯೆ ಇನ್ನೊಂದು ಬಗೆಯದು. ಸಂವಿಧಾನಬದ್ಧ ಹಕ್ಕುಗಳಿಗೆ ದಲಿತರು ಬಾಧ್ಯಸ್ಥರಾದರೂ ಸಮಾನತೆಯ ಹಕ್ಕನ್ನು ಗಳಿಸಿಕೊಳ್ಳಲು ಅವರು ಹೋರಾಡಲೇಬೇಕಾಯಿತು. ಸಾರ್ವಜನಿಕ ಕ್ಷೇತ್ರಗಳಲ್ಲಿ ಈ ಸಮಾನತೆಯೆಂಬುದು ಜಾರಿಗೊಂಡಿದೆ ನಿಜ. ಆದರೆ ಖಾಸಗಿ ಕ್ಷೇತ್ರಗಳಲ್ಲಿ ಹಾಗೂ ಬಹುಪಾಲು ಹಿಂದೂ ಭಾರತೀಯರ ಮನೆ ಮತ್ತು ಮನಗಳಲ್ಲಿ ಇದಕ್ಕೆ ನಿರೀಕ್ಷಿಸಿದಷ್ಟು ಮಾನ್ಯತೆ ದೊರೆತಿಲ್ಲವೆಂಬುದೂ ಅಷ್ಟೇ ನಿಜ.

ಮಹಾರಾಷ್ಟ್ರದಲ್ಲಿ ಪ್ರಾರಂಭವಾದ ಮಹಾತ್ಮ ಜ್ಯೋತಿ ಬಾ ಫೂಲೆ, ಡಾ. ಅಂಬೇಡ್ಕರ್ ಮೊದಲಾದವರ ಹೋರಾಟಗಳ ಪ್ರಭಾವ ಮೊದಲಿಗೆ ಮೈಸೂರು ಸಂಸ್ಥಾನ, ಆ ನಂತರ ಏಕೀಕೃತ ಕರ್ನಾಟಕ ಪ್ರದೇಶಗಳ ಮೇಲೆ ಆಯಿತೆಂಬುದನ್ನು ಈಗಾಗಲೇ ಗಮನಿಸಲಾಗಿದೆ. ಅರಸೊತ್ತಿಗೆಯ ಅಧೀನದಲ್ಲಿದ್ದ ಮೈಸೂರು ಸಂಸ್ಥಾನ ಅಸ್ಪೃಶ್ಯರ ಏಳಿಗೆಗಾಗಿ ಕೆಲವು ಕಾರ್ಯಕ್ರಮಗಳನ್ನು ಜಾರಿಗೊಳಿಸಿದ್ದಿತು. ಗಾಂಧೀಜಿ 'ರಾಜ್ಯ ಅತಿಥಿ'ಯಾಗಿದ್ದು ಮೈಸೂರನ್ನು 'ರಾಮರಾಜ್ಯ'ವೆಂದು ಕರೆದಿದ್ದರೆ, ಅದೇ ವೇಳೆಗೆ ಡಾ. ಅಂಬೇಡ್ಕರರನ್ನು ಮೈಸೂರು ರಾಜ್ಯದಲ್ಲಿ ಪ್ರವೇಶಿಸದಂತೆ ನಿಷೇಧ ಏರಿದ್ದ ಘಟನೆಯೂ ಇಲ್ಲಿ ನಡೆದಿದ್ದಿತು.

ಕಳೆದ ಶತಮಾನದ ಕೊನೆ ದಶಕದಲ್ಲೆ, ಅಂದರೆ ೧೮೯೦ರ ವೇಳೆಗೆ ಮೈಸೂರು ಸಂಸ್ಥಾನದಲ್ಲಿ ಅಸ್ಪೃಶ್ಯರಿಗೆ ವಿಶೇಷ ಶಾಲೆಗಳನ್ನು ತೆರೆಯಲು ಪ್ರೇರಣೆ ನೀಡುವಲ್ಲಿ 'ಶೂದ್ರಶಕ್ತಿ' ಪ್ರತಿಪಾದಕ ಸ್ವಾಮಿ ವಿವೇಕಾನಂದರ ಪಾತ್ರ ಗಣನೀಯ. ೧೮೯೪ ಜೂನ್ ತಿಂಗಳಲ್ಲಿ ವಿವೇಕಾನಂದರು ಮಹಾರಾಜರಿಗೆ ಪತ್ರ ಬರೆದು, ಕೆಳವರ್ಗಗಳ ಜನರ ವ್ಯಕ್ತಿತ್ವ ಬೆಳವಣಿಗೆಗೆ ಅನುವು ಮಾಡಿಕೊಡಬಲ್ಲ ಶಿಕ್ಷಣಕ್ಕೆ ಆದ್ಯತೆ ನೀಡಲು ಸೂಚಿಸಿದ್ದರು. ೧೮೯೦ರಲ್ಲೆ ಮೈಸೂರು ಸರ್ಕಾರ ಹೊಲೆಯರು ಮತ್ತು ಮಾದಿಗರಿಗಾಗಿ ಎರಡು ಶಾಲೆಗಳನ್ನು ತೆರೆದಿದ್ದಿತು. ೧೯೦೪-೦೫ರಲ್ಲಿ ನಿಮ್ನವರ್ಗದವರಿಗಾಗಿ ೭೬ ಶಾಲೆಗಳಿದ್ದು, ಅವುಗಳಲ್ಲಿ ૩೭ ಸರ್ಕಾರಿ ಶಾಲೆಗಳು ಮತ್ತು ૩೬ ಅನುದಾನಿತ ಮಿಶನ್ ಶಾಲೆಗಳು ಹಾಗೂ ૩ ಅನುದಾನ ರಹಿತವಾಗಿದ್ದವು. ಈ ಸಂಬಂಧದಲ್ಲಿ ಹಿಂದೂ ದಲಿತವರ್ಗ ಮಿಶನ್ (೧೯೧૩) ಸಹಾ ಪ್ರಭಾವ ಬೀರಿತು. ೧೯೧೫ರಲ್ಲಿ ಈ ಮಿಶನ್ ೧೫ ಶಾಲೆಗಳನ್ನು ನಡೆಸುತ್ತಿತ್ತು. ಅದೇ ವರ್ಷ ಸರ್ಕಾರ ಹೊರಡಿಸಿದ ಸುತ್ತೋಲೆಯಲ್ಲಿ, ಯಾರನ್ನೂ ಸಾಮಾಜಿಕ ಅಥವಾ ಧಾರ್ಮಿಕ ನಿರ್ಬಂಧದ ಆಧಾರದ ಮೇಲೆ ಸಾರ್ವಜನಿಕ ಶಾಲೆಗಳಿಗೆ ಸೇರುವುದನ್ನು ನಿಷೇಧಿಸಕೂಡದೆಂದು ತಿಳಿಸಲಾಗಿತ್ತು. ಅಂಕಿ-ಅಂಶಗಳ ಪ್ರಕಾರ, ೧೯೧೦-೧೧ರಲ್ಲಿ ಪಂಚಮರಿಗಾಗಿ ೬೭ ಸರ್ಕಾರಿ ಶಾಲೆಗಳು ಮತ್ತು ૩೭ ಅನುದಾನಿತ ಶಾಲೆಗಳು ಹಾಗೂ ೪ ಅನುದಾನರಹಿತ ಶಾಲೆಗಳಿದ್ದರೆ, ೧೯೧೫-೧೬ ರಲ್ಲಿ ೧೭೧ ಸರ್ಕಾರಿ ಶಾಲೆಗಳು ಮತ್ತು ೧೦೮ ಅನುದಾನಿತ ಶಾಲೆಗಳು ಹಾಗೂ ೮೮ ಅನುದಾನರಹಿತ ಶಾಲೆಗಳಿದ್ದವು. ೧೯೧೫ರ ಸುತ್ತೋಲೆಗೆ ಶೃಂಗೇರಿಯಲ್ಲಿ ಕಂಡುಬಂದ ಪ್ರಬಲ ವಿರೋಧದ ಸ್ವರೂಪ ಹೇಗಿದ್ದಿತೆಂದರೆ, ೪೦೦ ವೈದಿಕ ಬ್ರಾಹ್ಮಣರು ಒಂದು ಸಮಿತಿ ರಚಿಸಿಕೊಂಡು ಸರ್ಕಾರದ ಈ ಕ್ರಮ ತಮ್ಮ ಧರ್ಮಾಚರಣೆಗೆ ಧಕ್ಕೆ ತಂದಿದೆಯೆಂದು ಅಹವಾಲು ಸಲ್ಲಿಸಿದರು. ಕೊನೆಗೂ ಪ್ರತ್ಯೇಕ ಆಂಗ್ಲೋ-ವರ್ನಾಕ್ಯುಲರ್ ಶಾಲೆ ಸ್ಥಾಪನೆಗೆ ಸರ್ಕಾರ ಅನುಮತಿ ನೀಡಿದರೂ ಆ ಶಾಲೆಗೆ ಸರ್ಕಾರ ಅನುದಾನ ನೀಡಲಿಲ್ಲ. ಸರ್ಕಾರವು ಅಸ್ಪೃಶ್ಯರ ವಿದ್ಯೆ ಕಲಿಯುವ ಹಕ್ಕನ್ನು ಎತ್ತಿ ಹಿಡಿದುದು ೧೯೧೮ ನವೆಂಬರ್‌ನಲ್ಲಿ - ರೈಲು, ಆಸ್ಪತ್ರೆ, ನ್ಯಾಯಾಲಯಗಳಂತೆಯೇ ಶಾಲೆಗಳೂ ಸಾರ್ವಜನಿಕ ಸಂಸ್ಥೆಗಳೆಂದು ಘೋಷಿಸು ವುದರೊಡನೆ.

ಹೊಲೆಯರು ಮತ್ತು ಮಾದಿಗರಲ್ಲಿ ಬಹಳಷ್ಟು ಮಂದಿ ಕೃಷಿ ಕೂಲಿಯಾಳುಗಳಾಗಿ ದುಡಿಯುತ್ತಿದ್ದರೆಂಬುದಕ್ಕೆ ೧೮೯೧ರಲ್ಲಿ ಬಿಡುಗಡೆಯಾದ ಜನಗಣತಿ ವರದಿ ಮಾಹಿತಿ ಒದಗಿಸುತ್ತದೆ. ಈ ಎರಡೂ ಸಮುದಾಯಗಳು ಎಲ್ಲ ಕಡೆಗಳಲ್ಲಿ ಕಂಡುಬರುತ್ತಿದ್ದಂತೆ ಉಪ ಗೇಣಿದಾರರಾಗಿಯೂ ಇದ್ದು, ಇವರಲ್ಲಿ ಕೆಲವರು ಕಂದಾಯ ಸಲ್ಲಿಸುತ್ತಲೂ ಇದ್ದರು.

ಒಟ್ಟು ೩ ಲಕ್ಷ ರೂಪಾಯಿಗಳಷ್ಟು ಭೂ ಕಂದಾಯ ಸಂದಾಯ ಮಾಡಿದ ಬಗೆಗೆ ಅಂಕಿ-ಅಂಶಗಳು ದೊರಕುತ್ತವೆ. ಹೊಲೆಯರು ೧/೩ ರಷ್ಟು ಹಾಗೂ ಮಾದಿಗರು ೧/೨ ರಷ್ಟು ಭೂ ಕಂದಾಯ ಸಲ್ಲಿಸಿದ್ದರು. ೧೯೧೯ರಲ್ಲಿ ಸರ್ಕಾರಕ್ಕೆ ಸಲ್ಲಿಸಲಾದ ಸರ್ ಲೆಸ್ಲಿ ಮಿಲ್ಲರ್ ಸಮಿತಿ ವರದಿ ಹಿಂದುಳಿದ ವರ್ಗಗಳ ಏಳಿಗೆ ಬಗೆಗೆ ಸಲಹೆ ನೀಡಿದರೂ ದಲಿತವರ್ಗವನ್ನು ಸಹಜವಾಗಿಯೇ ನಿರ್ಲಕ್ಷಿಸಿತು. ಬ್ರಾಹ್ಮಣೇತರ ಸಮುದಾಯಗಳು ಸಹಾ ಅಬ್ರಾಹ್ಮಣ ವರ್ಗಗಳ ಸಂಘಟನೆಯಲ್ಲಿ ಆಸಕ್ತಿ ತೋರಿದುವೇ ವಿನಾ ದಲಿತ ಸಮಸ್ಯೆಯನ್ನು ಕೈಗೆತ್ತಿಕೊಳ್ಳುವುದರೊಡನೆ ಒಂದು ಸಾಮಾಜಿಕ ಚಳವಳಿಯಾಗಿ ಬೆಳೆಸಲಿಲ್ಲ.

ಈ ಶತಮಾನದ ಮೂರನೇ ದಶಕದ ಆರಂಭದಲ್ಲಿ ಬಹುಪಾಲು ಹೊಲೆಯರು ಮತ್ತು ಮಾದಿಗರು ಕೃಷಿ ಕೂಲಿಯಾಳುಗಳಾಗಿ ಜೀವನ ನಿರ್ವಹಿಸುತ್ತಿದ್ದರು. ಹೊಲೆಯರು ಮಾದಿಗರಿಗಿಂತ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದರೆಂದು ವ್ಯಕ್ತಪಡುತ್ತದೆ. ಉದಾಹರಣೆಗೆ, ೧೯೨೧ರ ಭಾರತದ ಜನಗಣತಿ ವರದಿ ಮೈಸೂರು ಪ್ರಾಂತ್ಯದಲ್ಲಿದ್ದ ದಲಿತ ಭೂಸಾಗುವಳಿದಾರರು ಮತ್ತು ಕೃಷಿ ಕೂಲಿಯಾಳುಗಳ ಬಗೆಗೆ ಈ ಕೆಳಕಂಡಂತೆ ಅಂಕಿ-ಅಂಶಗಳನ್ನು ಒದಗಿಸುತ್ತದೆ :

## ಜಾತಿ ಮತ್ತು ಭೂ ಸಾಗುವಳಿ ವೃತ್ತಿ

### ೧. ಪುರುಷರು (೧೯೨೧)

| ಜಾತಿ | ಹಾಲಿ ಇರುವ ಕೃಷಿ ಕೆಲಸಗಾರರ ಒಟ್ಟು ಸಂಖ್ಯೆ | ದಾಖಲೆಗೊಂಡ ಪ್ರಮುಖ ವೃತ್ತಿ (ಶೇಕಡವಾರು) | | |
|---|---|---|---|---|
| | | ಗೇಣಿಯಿಂದ ಬರುವ ಆದಾಯ | ಕೃಷಿಕರು | ಕೃಷಿ ಕೂಲಿಯಾಳುಗಳು |
| ಬ್ರಾಹ್ಮಣ | ೫೧,೨೨೧ | ೧೭.೧೩ | ೨೧.೭೯ | ೦.೩೫ |
| ಲಿಂಗಾಯಿತ | ೧೪೨,೩೬೬ | ೩.೧೫ | ೭೯.೪೩ | ೨.೬೨ |
| ಒಕ್ಕಲಿಗ | ೨೪೬,೩೨೯ | ೦.೪೪ | ೭೨.೧೩ | ೭.೫೭ |
| ಹೊಲೆಯ | ೧೫೭,೨೮೯ | ೦.೯೭ | ೩೫.೯೫ | ೩೭.೭೨ |
| ಮಾದಿಗ | ೬೩,೩೬೩ | ೧.೫೮ | ೪೫.೧೩ | ೨೬.೧೭ |

### ೨. ಸ್ತ್ರೀಯರು (೧೯೨೧)

| ಜಾತಿ | ಪುರುಷರಿಗೆ ಹೋಲಿಸಿದರೆ ಇರುವ ಸ್ತ್ರೀ ಕೃಷಿ ಕೆಲಸಗಾರರ ಸಂಖ್ಯೆ (ಶೇಕಡವಾರು) | ಗೇಣಿಯಿಂದ ಬರುವ ಆದಾಯ | ಕೃಷಿಕರು | ಕೃಷಿ ಕೂಲಿಯಾಳುಗಳು |
|---|---|---|---|---|
| ಬ್ರಾಹ್ಮಣ | ೧೦.೫೮ | ೩೭.೩೮ | ೨೫.೬೧ | ೨.೬೨ |
| ಲಿಂಗಾಯಿತ | ೨೦.೨೪ | ೧೩.೨೫ | ೪೯.೪೭ | ೧೭.೮೦ |
| ಒಕ್ಕಲಿಗ | ೧೮.೭೧ | ೨.೦೯ | ೭೨.೧೩ | ೭.೫೭ |
| ಹೊಲೆಯ | ೩೫.೨೨ | ೧.೨೬ | ೧೧.೩೫ | ೬೧.೬೩ |
| ಮಾದಿಗ | ೩೧.೫೧ | ೧.೯೬ | ೧೩.೧೨ | ೫೬.೩೬ |

(ಆಕರ : ದಲಿತ್ಸ್ ಅಂಡ್ ದಿ ಡೆಮೊಕ್ರೆಟಿಕ್ ರೆವೊಲ್ಯೂಶನ್, ಪು. ೭೭-೭೮).

### ೪.೨. ದಲಿತ ಸಂಘಟನೆಯ ವಿವಿಧ ಮುಖಗಳು

ದಲಿತ ಸಂಘಟನೆ ಮತ್ತು ಚಳವಳಿಗಳ ಮುಖ್ಯ ಘಟ್ಟವೆಂದರೆ, ದಲಿತ ಸಮುದಾಯಗಳ ಪರವಾಗಿ ಹೋರಾಡಲು ವಿವಿಧ ದಲಿತ ಒಕ್ಕೂಟಗಳು ಅಸ್ತಿತ್ವಕ್ಕೆ ಬಂದುದು. ೧೯೨೦ರ ನಂತರ ಆದಿ ಕರ್ನಾಟಕ ಚಳವಳಿಗಳು ನಡೆಯಲು ಆರಂಭಿಸಿದುದನ್ನು ನೋಡಬಹುದು. ಈ ವೇಳೆಗೆ ಆದಿ ದ್ರಾವಿಡ ಅಭಿವೃದ್ಧಿ ಸಂಘ ಮತ್ತು ಮಾದಿಗರ ಪ್ರಾತಿನಿಧ್ಯವುಳ್ಳ ಆದಿ ಜಾಂಬವ ಸಂಘಗಳು ಅಸ್ತಿತ್ವಕ್ಕೆ ಬಂದವು. ಆದಿ ದ್ರಾವಿಡ ಸಂಘದ ನಾಯಕರಾಗಿದ್ದವರು ತಮಿಳು ಮೂಲದ ಮುರುಗೇಶ ಪಿಳ್ಳೈ. ಮಾದಿಗರನ್ನು ಪ್ರತಿನಿಧಿಸುತ್ತಿದ್ದ ಆದಿ ಜಾಂಬವ ಸಂಘ ಕನ್ನಡ ದಲಿತರನ್ನು ಒಳಗೊಂಡ ಸಂಘಟನೆಯಾಗಿದ್ದು, ಇದರೊಡನೆ ಸಂಪರ್ಕ ಹೊಂದಿದ್ದವರು ಚಿಕ್ಕ ಹನುಮಂತಯ್ಯ ಮತ್ತು ಚೆನ್ನಿಗರಾಮಯ್ಯ. ಬ್ರಾಹ್ಮಣೇತರ ತಮಿಳರಾಗಿದ್ದ ಮುರುಗೇಶ ಪಿಳ್ಳೈ ಸುಮಾರು ಮೂರು ದಶಕಗಳ ಕಾಲ ದಲಿತರ ವಕ್ತಾರರಾಗಿದ್ದರು. ಈ ಎರಡೂ ಸಂಘಟನೆಗಳು ಬೆಂಗಳೂರು ಮತ್ತು ಮೈಸೂರುಗಳಲ್ಲಿ ಕ್ರಿಯಾಶೀಲವಾಗಿದ್ದವು. ಪ್ರಜಾಪ್ರತಿನಿಧಿ ಮಂಡಲಿಯಲ್ಲಿಯೂ ಇದ್ದ ಪಿಳ್ಳೈ, ಮಿಲ್ಲರ್ ಸಮಿತಿಯನ್ನು ಬೆಂಬಲಿಸಿದ್ದವರು.

ದಲಿತೋದ್ಧಾರದ ನಿಟ್ಟಿನಲ್ಲಿ ಕೆಲಸ ಮಾಡಿದ ಈರ್ವರು ಬ್ರಾಹ್ಮಣ ಸುಧಾರಕರ ಬಗೆಗೂ ಇಲ್ಲಿ ಪ್ರಸ್ತಾಪಿಸಬೇಕು. ಅವರುಗಳೆಂದರೆ ಆರ್. ಗೋಪಾಲಸ್ವಾಮಿ ಅಯ್ಯರ್ (೧೮೭೮-೧೯೪೩) ಮತ್ತು ಎ. ಗೋವಿಂದಾಚಾರ್ಯಸ್ವಾಮಿ (೧೮೫೬-೧೯೩೨). ಮೈಸೂರಿನ ಗೋಪಾಲಸ್ವಾಮಿ ಅಯ್ಯರ್ ಅವರ ಕಾರ್ಯಕ್ಷೇತ್ರವಾಗಿದ್ದುದು ಬೆಂಗಳೂರು. ಪಂಚಮರ ಏಳಿಗೆಗಾಗಿ ಇವರು ಕೆಲಸ ಮಾಡಿದ ಪ್ರಯುಕ್ತ ಇವರನ್ನು 'ಪಂಚಮ ಗೋಪಾಲ ಸ್ವಾಮಿ'ಯೆಂದೇ ಗುರುತಿಸಲಾಗಿತ್ತು. ೧೯೧೩ರಲ್ಲಿ ಮೈಸೂರಿನಲ್ಲಿ ಸ್ಥಾಪನೆಯಾದ ಸೆಂಟ್ರಲ್ ಪಂಚಮ ಬೋರ್ಡಿಂಗ್ ಸ್ಕೂಲ್‌ನ ಹಿನ್ನೆಲೆಯಲ್ಲಿ ಅಯ್ಯರ್ ಅವರ ಪ್ರಭಾವವಿದ್ದಿತು. ೧೯೧೮ರ ವೇಳೆಗೆ ತುಮಕೂರು, ಚಿಕ್ಕಮಗಳೂರು ಹಾಗೂ ಹಾಸನಗಳಲ್ಲೂ ಅಂಥಾ ಬೋರ್ಡಿಂಗ್ ಸ್ಕೂಲ್‌ಗಳು ಆರಂಭಗೊಂಡವು. ೧೯೨೨ ರಲ್ಲಿ ಬೆಂಗಳೂರು ಪಂಚಮಶಾಲೆಗಳಿಗೆ ಒಂದು ಬೋರ್ಡಿಂಗ್ ಹೋಂ ಸಿದ್ಧಗೊಂಡಿತು. ಇದಕ್ಕೆ ಆ ನಂತರ ಬಂದ ಹೆಸರು ನರಸಿಂಹರಾಜ ಹಾಸ್ಟೆಲ್. ೧೯೨೬ರಲ್ಲಿ ಹಾಸನದಲ್ಲಿ ಒಂದು ಪಂಚಮ ಹುಡುಗರ ಮಾಧ್ಯಮಿಕ ಶಾಲೆ ಹಾಗೂ ೧೯೨೯ರಲ್ಲಿ ಬೆಂಗಳೂರಿನಲ್ಲಿ ಆದಿ ಕರ್ನಾಟಕ ಬಾಲಕಿಯರ ವಸತಿಶಾಲೆ ಆರಂಭಗೊಂಡವು. ಗೋಪಾಲಸ್ವಾಮಿ ಅಯ್ಯರ್ ಅವರು ೧೯೧೫ರಲ್ಲಿ ಬೆಂಗಳೂರಿನಲ್ಲಿ ಸ್ಥಾಪನೆಗೊಂಡಿದ್ದ ಸಿವಿಕ್ ಅಂಡ್ ಸೋಶಿಯಲ್ ಪ್ರೋಗ್ರೆಸ್ ಅಸೋಸಿಯೇಶನ್ನಿಗೆ ಕಾರ್ಯದರ್ಶಿಗಳಾಗಿಯೂ ಆ ನಂತರ ಕಾರ್ಯನಿರ್ವಹಿಸಿದರು. ಹರಿಜನರಿಗೆ ಶಾಲೆ ಮತ್ತು ಸಹಕಾರ ಸಂಘಗಳನ್ನು ಆರಂಭಿಸುವುದು ಸಿವಿಕ್ ಸಂಘದ ಉದ್ದೇಶಗಳಾಗಿದ್ದವು. ೧೯೧೯ರಲ್ಲಿ ಮೈಸೂರಿನಲ್ಲಿ ಸಮಾವೇಶಗೊಳಿಸಿದ ಪಂಚಮರ ಮಹಾಸಭೆ ಈ ಸಂಘದ ಪ್ರಮುಖ ಸಾಧನೆಗಳಲ್ಲೊಂದು.

ಪಂಚಮರ ಮಹಾಸಭೆ ಅಥವಾ ಸಮಾವೇಶಕ್ಕೆ ಡಾ. ಅಂಬೇಡ್ಕರರನ್ನೂ ಆಹ್ವಾನಿಸಲಾಗಿದ್ದಿತು. ಆದರೆ ಮೈಸೂರು ಪ್ರಾಂತ್ಯದ ಪ್ರವೇಶಕ್ಕೆ ನಿಷೇಧ ಹೇರಿದ್ದರಿಂದ ಅವರು ಈ ಸಮಾವೇಶದಲ್ಲಿ ಭಾಗವಹಿಸಲಾಗಲಿಲ್ಲ. ೧೯೨೩ ಮತ್ತು ೧೯೨೫ರಲ್ಲೂ

ಇನ್ನೂ ಎರಡು ಪಂಚಮರ ಸಮಾವೇಶಗಳು ಜರುಗಿದುದುಂಟು. ಮದರಾಸಿನ ದಲಿತ ನಾಯಕ ಎಂ. ಸಿ. ರಾಜ ಈ ಸಮಾವೇಶಗಳಲ್ಲಿ ಪಾಲ್ಗೊಂಡಿದ್ದು ವಿಶೇಷ. ಈ ಎರಡು ಸಮಾವೇಶಗಳಲ್ಲಿ ಚಾರಿತ್ರಿಕವೆನ್ನಬಹುದಾದ ನಿರ್ಣಯಗಳನ್ನು ಕೈಗೊಳ್ಳಲಾಯಿತು. ಅವುಗಳಲ್ಲಿ 'ಆದಿ ಕರ್ನಾಟಕ' ಮತ್ತು 'ಆದಿ ದ್ರಾವಿಡ' ಎಂಬ ಪಾರಿಭಾಷಿಕಗಳನ್ನು ಬಳಸುವ ಬಗೆಗೆ ಕೈಗೊಂಡ ನಿರ್ಣಯ ಮುಖ್ಯವಾದುದು. ೧೯೨೧ರಲ್ಲಿ ಆದಿ ಕರ್ನಾಟಕ ಸಂಘವನ್ನು ನೋಂದಾಯಿಸಲಾಯಿತಲ್ಲದೆ, ಗೋಪಾಲಸ್ವಾಮಿ ಅಯ್ಯರ್ ಅದರ ಅಧ್ಯಕ್ಷರಾದರು. ಈ ಸಂಘದ ಬಹುತೇಕ ಸದಸ್ಯರು ದಲಿತೇತರರೇ ಆಗಿದ್ದುದು ಗಮನಿಸಬೇಕಾದ ಇನ್ನೊಂದು ಅಂಶ. ದಲಿತರಿಗೆ ಶಾಲೆಗಳಿಗೆ ಪ್ರವೇಶ, ಕೆರೆನೀರಿನ ಬಳಕೆಗೆ ಅವಕಾಶ, ದೇವಾಲಯ ಪ್ರವೇಶ ಇತ್ಯಾದಿ ಕಾರ್ಯಕ್ರಮಗಳನ್ನು ಅಯ್ಯರ್ ಹಮ್ಮಿಕೊಂಡರು. ೧೯೨೦ರಲ್ಲಿ ಮೈಸೂರಿನ ಆದಿ ಕರ್ನಾಟಕ ಮತ್ತು ಆದಿ ದ್ರಾವಿಡ ಸಂಘದಿಂದ ಮಹಾರಾಜರಿಗೆ ಮನವಿಯೊಂದನ್ನು ಸಲ್ಲಿಸುವುದರೊಡನೆ, ಶಿಕ್ಷಣ, ಕೃಷಿ ಮೊದಲಾದ ಕ್ಷೇತ್ರಗಳಲ್ಲಿ ನಿಮ್ನವರ್ಗದವರಿಗೆ ಅನುಕೂಲ ಒದಗಿಸಲು ವಿನಂತಿಸಿಕೊಳ್ಳಲಾಯಿತು. ಇಷ್ಟಾದರೂ ಅಯ್ಯರ್ ಅವರ ಪ್ರಯತ್ನಗಳು 'ಪಂಚಮ' ಧೋರಣೆಗಷ್ಟೆ ಸೀಮಿತಗೊಂಡಿದ್ದುವೆನ್ನುವುದುಂಟು.

ಗೋಪಾಲಸ್ವಾಮಿ ಅಯ್ಯರ್ ಅವರು ನಿಮ್ನವರ್ಗದವರಿಗಾಗಿ ಸಲ್ಲಿಸಿದ ಸೇವೆಗಳು ಹಲವು ಬಗೆಯವು. ಅವರು ಮೊದಲ ಆದ್ಯತೆ ನೀಡಿದುದು ಶಿಕ್ಷಣಕ್ಕೆ. ವಿದ್ಯಾರ್ಥಿನಿಲಯಗಳ ಸ್ಥಾಪನೆ ಅವರ ಇನ್ನೊಂದು ಉದ್ದೇಶವಾಗಿದ್ದಿತು. ೧೯೩೨ ರಲ್ಲಿ ಬೆಂಗಳೂರಿನಲ್ಲಿ ಅವರು ಆರಂಭಿಸಿದ ಆದಿ ಕರ್ನಾಟಕ ವಿಡೆಡ್ ಹಾಸ್ಟೆಲ್ ಅವರ ಮರಣಾನಂತರ (೧೯ ಮಾರ್ಚ್ ೧೯೪೩) 'ಆರ್. ಗೋಪಾಲಸ್ವಾಮಿ ಅಯ್ಯರ್ ವಿದ್ಯಾರ್ಥಿನಿಲಯ'ವೆನಿಸಿತು; ಮುಂದೆ ೧೯೬೧ರಲ್ಲಿ ರೆಸಿಡೆನ್ಷಿಯಲ್ ಹೈಸ್ಕೂಲ್ ಆಯಿತು. ಹಾಗೆಯೇ, ಮಾಗಡಿ ರಸ್ತೆಯಲ್ಲಿರುವ ಪ್ರಸಿದ್ಧ ಬಾಪೂಜಿ ವಿದ್ಯಾರ್ಥಿನಿಲಯದ ಹಿಂದಿನ ಹೆಸರು ಆದಿಜಾಂಬವ ವಿದ್ಯಾರ್ಥಿ ನಿಲಯ; ೧೯೩೦ರಲ್ಲಿ ಅಯ್ಯರ್ ಅವರಿಂದ ಆರಂಭಗೊಂಡುದು. ಆದರೆ ೧೯೩೪ರಲ್ಲಿ ಗಾಂಧೀಜಿ ಶಿಲಾನ್ಯಾಸ ಮಾಡಿದ ನಂತರ ಅದು ಬಾಪೂ ಅವರ ಹೆಸರನ್ನು ಧರಿಸಿತು.

ಅಲ್ಕೊಂಡವಿಲ್ಲಿ ಗೋವಿಂದಾಚಾರ್ಯಸ್ವಾಮಿಯವರು ಪರಿಶಿಷ್ಟ ಆದಿಮ ಜಾತಿಗಳಲ್ಲಿ ಒಂದಾದ ಹಾಗೂ ಮುಖ್ಯವಾಗಿ ಮೈಸೂರು ಜಿಲ್ಲೆಯಲ್ಲಿ ಬಹುಸಂಖ್ಯೆಯಲ್ಲಿರುವ ಕಣಯ ಜಾತಿಯ ಸಾಮಾಜಿಕ ಸುಧಾರಣೆಗೆಂದು ಕ್ರಾಂತಿಕಾರಕ ರೀತಿಯಲ್ಲಿ ಹೋರಾಡಿದವರು. ಇವರು ಸಹಾ ಮೈಸೂರಿನವರು. ದಲಿತ ಹಿಂದೂಗಳ 'ಶುದ್ಧಿ' ಮತ್ತು ಮುದ್ರಾಧಾರಣೆ ನಡೆಸಿಕೊಡುವ ಆಂದೋಲನ ಪ್ರಾರಂಭಿಸಿ ಕಣಯರನ್ನು 'ಉತ್ತಮ ಹಿಂದೂಗಳನ್ನಾಗಿ ಪರಿವರ್ತಿಸುವ' ಪ್ರಯತ್ನ ಅವರದಾಗಿದ್ದಿತು. ಕಣಯರಿಗೆ ಮುದ್ರಾಧಾರಣೆ, ದೇವಸ್ಥಾನಗಳ ಪ್ರವೇಶಾವಕಾಶ ಹಾಗೂ ತೀರ್ಥ - ಪ್ರಸಾದಗಳ ವಿನಿಯೋಗ ಅವರು ಅನುಸರಿಸಿದ ಕ್ರಾಂತಿಕಾರಕ ವಿಧಾನಗಳು. ಗೋವಿಂದಾಚಾರ್ಯಸ್ವಾಮಿಯವರ ಪ್ರಯತ್ನದ ಫಲವಾಗಿ ೧೯೨೬ ಜುಲೈ ತಿಂಗಳಲ್ಲಿ ಬೆಂಗಳೂರಿನಲ್ಲಿ 'ಕಣಯರ ಸಂಘ' ಅಸ್ತಿತ್ವಕ್ಕೆ ಬಂದಿತು.

ಇದೇ ವೇಳೆಯಲ್ಲಿ, ಅಂದರೆ ೧೮೮೪ ರಿಂದ ೧೯೨೮ರ ವರೆಗೆ, ಕೇರಳವೂ ಸೇರಿದಂತೆ ಕರ್ನಾಟಕದ ಕರಾವಳಿ ಜಿಲ್ಲೆಗಳಲ್ಲಿ ಹಿಂದುಳಿದ ವರ್ಗಗಳು ಮತ್ತು ಅಸ್ಪೃಶ್ಯರ ಏಳಿಗೆಗಾಗಿ ಹೋರಾಡಿದವರು ಶ್ರೀ ನಾರಾಯಣ ಗುರು. ಅವರು ಸ್ಥಾಪಿಸಿದ ಹೊಸ

ಮಂದಿರಗಳಲ್ಲಿ ಮತ್ತು ಶಾಲೆಗಳಲ್ಲಿ ದಲಿತರಿಗೆ ಮತ್ತು ಹಿಂದುಳಿದ ವರ್ಗಗಳವರಿಗೆ ಸಮಾನ ಅವಕಾಶ ನೀಡಿದರು. ಇದು ಮಹಾರಾಷ್ಟ್ರದ ಜ್ಯೋತಿ ಬಾ ಫೂಲೆಯವರ ಹೋರಾಟದ ನೆನಪನ್ನು ತರುವಂಥಾದ್ದು.

೧೯೨೦ರ ನಂತರ ದಲಿತ ಹೋರಾಟಗಳಿಗೆ ಹೊಸ ಆಯಾಮ ದೊರೆತು ಅವರು ಗಟ್ಟಿ ಧ್ವನಿಯಲ್ಲಿ ಮಾತನಾಡತೊಡಗಿದುದಂತೂ ಸ್ಪಷ್ಟ. ಅಸ್ಪೃಶ್ಯತಾಚರಣಾ ವಿವಾದಗಳು ಸಾಮಾಜಿಕ ವಿವಾದಗಳೆಂತಲೇ ವ್ಯಾಖ್ಯಾನಿಸತೊಡಗಿದೊಡನೆ, ಪ್ರಜಾಪಕ್ಷದವರಿಂದಲೂ ಕೂಡಿದ ಕಾಂಗ್ರೆಸ್ ಪಕ್ಷ ೧೯೩೦ ಮತ್ತು ೧೯೩೫ರ ಮಧ್ಯೆ ಅಸ್ಪೃಶ್ಯತಾ ನಿಷೇಧ ಮಸೂದೆಯನ್ನು ಜಾರಿಗೆ ತರಲು ಸರ್ಕಾರವನ್ನು ಒತ್ತಾಯಿಸತೊಡಗಿತು. ಹರಿಜನ ಸೇವಕ ಸಂಘವೂ ಇದಕ್ಕೆ ತನ್ನ ದನಿಗೂಡಿಸಿತು. ಎಲ್ಲಾ ದೇವಾಲಯಗಳನ್ನು ಪ್ರವೇಶಿಸಲು; ರಸ್ತೆಗಳು, ಸಾರ್ವಜನಿಕ ಸ್ಥಳಗಳು ಹಾಗೂ ಕೆರೆಗಳನ್ನು ಬಳಸಿಕೊಳ್ಳಲು ದಲಿತರಿಗೆ ಸಮಾನ ಹಕ್ಕುಗಳಿರಬೇಕೆಂದು ಈ ಸಂಘಟನೆಗಳು ಆಗ್ರಹಪಡಿಸಿದವು. ದಲಿತರ ಆರ್ಥಿಕ ಪರಿಸ್ಥಿತಿ ಸುಧಾರಣೆಗಾಗಿ ಸರ್ಕಾರಿ ಭೂಮಿಗಳನ್ನು ಹಂಚಲು ಸಲಹೆ ನೀಡಿದವು. ದಲಿತರನ್ನು ಹೆಚ್ಚು ಹೆಚ್ಚಾಗಿ 'ಹಿಂದೂಕರಿಸುವ' ನಿಟ್ಟಿನಲ್ಲಿ ಶುಚಿತ್ವ, ಮಾಂಸಭಕ್ಷಣೆ ಹಾಗೂ ಮದ್ಯಪಾನಗಳ ನಿಷೇಧ - ಈ ಬಗೆಯ ಆಂತರಿಕ ಸುಧಾರಣಾ ಕಾರ್ಯಕ್ರಮಗಳಿಗೆ ಒತ್ತು ಕೊಡಲಾಯಿತು. ಇದಕ್ಕೆ ಪ್ರತಿಕ್ರಿಯೆಯಾಗಿ, ಆದಿ ಕರ್ನಾಟಕರು ಮತ್ತು ಆದಿ ದ್ರಾವಿಡರಲ್ಲಿ ಹಿಂದೂ ಧಾರ್ಮಿಕ ತತ್ವಗಳು ಮತ್ತು ಭಕ್ತಿ-ಭಾವಗಳು ಹೆಚ್ಚಾಗಿ ಮೂಡುವಂತೆ ಮಾಡಲು ಭಜನಾಮಂಡಲಿಗಳನ್ನು ಸ್ಥಾಪಿಸಬೇಕೆಂಬ ಹಾಗೂ ಈ ಉದ್ದೇಶಕ್ಕಾಗಿ ಉಚಿತ ನಿವೇಶನ ಮತ್ತು ಕಟ್ಟಡ ನಿರ್ಮಾಣ ಸಾಮಗ್ರಿಗಳನ್ನು ಒದಗಿಸಬೇಕೆಂಬ ಬೇಡಿಕೆ ಕಂಡುಬಂದಿತು. ದಲಿತರ ಹಕ್ಕು ಬಾಧ್ಯತೆಗಳಿಗೆ ವಿರುದ್ಧವಾಗಿ ಗ್ರಾಮೀಣ ಮಟ್ಟದಲ್ಲಿ ಎದುರಾಗಬಹುದಾದ ಸಮಸ್ಯೆಗಳನ್ನು ನಿರೀಕ್ಷಿಸಲಾಯಿತು.

ಮುರುಗೇಶ ಪಿಳ್ಳೈ ಅವರು ೧೯೨೫ರ ಪ್ರಜಾಪ್ರತಿನಿಧಿ ಸಭೆಯ ಚರ್ಚೆಯಲ್ಲಿ ತಮ್ಮ ವಿಚಾರಗಳನ್ನು ಮಂಡಿಸುತ್ತಾ, ದಲಿತರು ಎಲ್ಲಾ ಬಗೆಯ ಸೇವಾವೃತ್ತಿಗಳನ್ನು ಮಾಡಲು ಒತ್ತಾಯಿಸಲಾಗುತ್ತಿದೆಯೆಂದು ಹಾಗೂ ಅದನ್ನು ನಿರಾಕರಿಸಿದಲ್ಲಿ ಬೆದರಿಕೆಯನ್ನೂ ಸಾಮಾಜಿಕ ಬಹಿಷ್ಕಾರವನ್ನೂ ಹಾಕಲಾಗುತ್ತಿದೆಯೆಂದು ಘೋಷಿಸಿದರು. ಇಂಥಾ ಸೇವೆಗಳಿಗೆ ತಕ್ಕ ಪರಿಹಾರ ನೀಡಲು ಒತ್ತಾಯಿಸಿದರು. ಈ ಸಂದರ್ಭದಲ್ಲಿ ಕೆಲವು ಬ್ರಾಹ್ಮಣೇತರ ವರ್ಗಗಳವರೂ ದಲಿತರಿಗೆ ನೀಡುವ ಪರಿಹಾರ ಪ್ರಯತ್ನಗಳನ್ನು ವಿರೋಧಿಸಿದುದು ಗಮನಾರ್ಹ. ದಲಿತರೂ ರಿಯಾಯಿತಿ ದರದಲ್ಲಿ ಬೀಳುಭೂಮಿಯನ್ನು ವಿತರಿಸುವಂತೆ ಸರ್ಕಾರವನ್ನು ಕೇಳಿಕೊಂಡರು. ೧೯೩೧ರ ವೇಳೆಗೆ ಆದಿಕರ್ನಾಟಿಗರಿಗೆ ೯,೭೬೩ ಎಕರೆಗಳಷ್ಟು ಭೂಮಿ ಹಂಚಲಾಗಿದೆಯೆಂದು ಸರ್ಕಾರವೂ ಘೋಷಿಸಿತು. ಆದರೆ ಈ ಎಲ್ಲ ಪ್ರಯತ್ನಗಳ ಹಿನ್ನೆಲೆಯಲ್ಲಿ ವ್ಯಕ್ತಪಟ್ಟ ಅಂಶವೆಂದರೆ, ದಲಿತರು ಪಡೆದುದು ಸರ್ಕಾರದ ಸಹಾನುಭೂತಿಯುಕ್ತ ನೆರವನ್ನು ಮಾತ್ರ; ತಮ್ಮ ಹಕ್ಕುಗಳನ್ನು ಮುಂದಿಟ್ಟು ಗಳಿಸಿದ ಪ್ರತಿಫಲವನ್ನಲ್ಲವೆಂಬುದು. ಗ್ರಾಮೀಣ ಮಟ್ಟದ ದಲಿತರು ತಮ್ಮ ಹಕ್ಕುಗಳಿಗಾಗಿ ಹೋರಾಡುತ್ತಲೇ ಇರಬೇಕಾಗಿದ್ದುದು ದುರಂತದ ಒಂದು ಮುಖವಾದರೆ, ಅವರನ್ನು

ಸಂಘಟಿಸಿ ಮಾರ್ಗದರ್ಶನ ನೀಡಬಲ್ಲ ಕನ್ನಡದ ಸುಶಿಕ್ಷಿತ ಹಾಗೂ ಬಲಿಷ್ಠ ದಲಿತ ನಾಯಕರು ಇಲ್ಲದ್ದು ಅವರ ಇನ್ನೊಂದು ಮುಖವಾಗಿದ್ದಿತು.

* * *

ಕರ್ನಾಟಕದ ದಲಿತ ಮತ್ತು ಹಿಂದುಳಿದ ವರ್ಗಗಳ ಸಂಘಟನೆ ಮತ್ತು ಚಳವಳಿಗಳಿಗೆ ಸಂಬಂಧಿಸಿದಂತೆ ಮುಂಬಯಿ ಕರ್ನಾಟಕ ಭಾಗದಲ್ಲಿ ನಡೆದ ಚಟುವಟಿಕೆಗಳನ್ನು ಮೊದಲಿಗೆ ವಿವರಿಸುವುದು ಅಗತ್ಯ. ಈಗಾಗಲೇ ಗಮನಿಸಿದಂತೆ, ಈ ಭಾಗದಲ್ಲಾದ ಚಳವಳಿಗಳಿಗೆ ಪ್ರೇರಣೆ ನೀಡಿದವರು ಮಹಾತ್ಮಾ ಜ್ಯೋತಿ ಬಾ ಫೂಲೆ ಮತ್ತು ಡಾ. ಅಂಬೇಡ್ಕರ್. ೧೮೫೧ರಲ್ಲೇ ಬಾಲಕಿಯರಿಗಾಗಿ ಶಾಲೆಯನ್ನು ಆರಂಭಿಸಿದ ಫೂಲೆ, ದಲಿತರ ಹಿಂದುಳಿದಿರುವಿಕೆಗೆ ಅಜ್ಞಾನವೇ ಕಾರಣ; ಅಜ್ಞಾನಕ್ಕೆ ಅವಿದ್ಯೆಯೇ ಕಾರಣವೆಂಬುದನ್ನು ಸಮಾಜಕ್ಕೆ ತೋರಿಸಿಕೊಟ್ಟರು. 'ಜ್ಞಾನವೇ ಬಲ' ವೆಂಬ ತತ್ವವನ್ನು ಪರಿಣಾಮಕಾರಿಯಾಗಿ ನಿರೂಪಿಸಿದ ಡಾ. ಅಂಬೇಡ್ಕರ್ ಸಹಾ ಫೂಲೆಯವರ ಈ ಪ್ರಯತ್ನವನ್ನು ಸಮರ್ಥವಾಗಿ ಮುಂದುವರೆಸಿದುದನ್ನು ನೋಡಬಹುದು. ಸಮಾನತಾ ಸಾಧನೆಗೆ ಶಿಕ್ಷಣವೇ ಮೂಲಮಂತ್ರವೆಂಬುದನ್ನು ಗ್ರಹಿಸಿ ಕಾರ್ಯೋನ್ಮುಖರಾದ ಫೂಲೆಯವರ ಇಂಥಾ ಸಾಹಸ, ೩೦೦೦ ವರ್ಷಗಳ ಚರಿತ್ರೆಯಲ್ಲಿ ಮೊಟ್ಟಮೊದಲ ಬಾರಿಗೆ ನಡೆದ ಪ್ರಯತ್ನವೆಂದು ಗುರುತಿಸಲಾಗುತ್ತದೆ. ಫೂಲೆಯವರ ದಲಿತೋದ್ಧಾರ ಕಾರ್ಯ ನಾನಾ ಬಗೆಯಲ್ಲಿ ಮುಂದುವರೆದು ಸತ್ಯಶೋಧಕ ಸಮಾಜದ ಮೂಲಕ ನಿರ್ದಿಷ್ಟ ಹಂತವನ್ನು ತಲುಪುತ್ತದೆ.

ಜ್ಯೋತಿ ಬಾ ಫೂಲೆ ಮತ್ತು ಡಾ. ಅಂಬೇಡ್ಕರ್‌ರ ಪ್ರಯತ್ನಗಳು, ವಿಚಾರಗಳು ಆಗ ಮುಂಬಯಿ ಕರ್ನಾಟಕದ ಭಾಗವಾಗಿದ್ದ ಉತ್ತರ ಕರ್ನಾಟಕದ ಕೆಲವು ಭಾಗಗಳು, ಅದರಲ್ಲೂ ಮುಖ್ಯವಾಗಿ ಇಂದಿನ ಬೆಳಗಾವಿ ಜಿಲ್ಲೆಯಲ್ಲಿ ವಿಶೇಷ ಪರಿಣಾಮ ಬೀರಿದವು. ಬೆಳಗಾವಿಯ 'ರಾಷ್ಟ್ರವೀರ ಪತ್ರಿಕೆ' ಮತ್ತು 'ಸತ್ಯಶೋಧಕ' ಮಂಡಳಿಯ ಶಾಖೆಗಳು ಫೂಲೆಯವರ ವಿಚಾರಗಳನ್ನು ಜನರಿಗೆ ತಿಳಿಸುವ ಕೆಲಸ ಮಾಡಿದವು. ದಲಿತರ ಒಗ್ಗಟ್ಟು ಮತ್ತು ಉದ್ಧಾರಗಳಿಗಾಗಿ ಇದೇ ನಿಟ್ಟಿನಲ್ಲಿ ಕೆಲಸ ನಿರ್ವಹಿಸಿ ಯಶ ಕಂಡವರೆಂದರೆ ಬಳವಂತರಾವ್ ವರಾಳೆ, ದೇವರಾಯ ಇಂಗಳೆ, ಎಂ. ಬಿ. ನಾಡಕರ್ಣಿ, ಪರಶುರಾಂ ಪದ್ಮಣ್ಣ ಹೆಗ್ರೆ, ರತ್ನಪ್ಪಣ್ಣ ಸೂರ್ಯವಂಶಿ, ಲಕ್ಷ್ಮಣ ಕಾಂಬಳೆ ಪಕಾಳೆ, ಬಂಡು ತಿಪಕುರ್ಲೆ, ನೆಮ್ಮು ಎಸ್. ಎನ್. ಮಾನೆ, ಧಾರವಾಡದ ಶಂಕರಾನಂದಶಾಸ್ತ್ರಿ ಮೊದಲಾದವರು. ಗಮನಿಸ ಬೇಕಾದ ಮುಖ್ಯ ಸಂಗತಿಯೆಂದರೆ, ೧೯೨೪ರ ಹೊತ್ತಿಗೆ ದಲಿತ ಚಳವಳಿ ಬೆಳಗಾವಿ ಜಿಲ್ಲೆಯಾದ್ಯಂತ ಹಬ್ಬಿದ್ದು, ಅಂಬೇಡ್ಕರರು ತಮ್ಮ ಚಳವಳಿಯನ್ನು ಆರಂಭಿಸುವುದಕ್ಕಿಂತ ಮೊದಲೆ ದಕ್ಷಿಣ ಮಹಾರಾಷ್ಟ್ರ ಮತ್ತು ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ಅಸ್ಪೃಶ್ಯತಾ ವಿರೋಧಿ ಚಳವಳಿಯನ್ನು ಒಂದು ಹಂತಕ್ಕೆ ಮುನ್ನಡೆಸಿ ಅದನ್ನು ಅಂಬೇಡ್ಕರರಿಗೆ ಪರಿಚಯಿಸಿದ ಕೀರ್ತಿ ದೇವರಾಯ ಇಂಗಳೆಯವರಿಗೆ ಸಲ್ಲಬೇಕೆಂಬುದು (ಕಾಟ್ಕರ್ : ೧೯೯೬ : ೩೦). ಹಾಗೆಯೇ, ಡಾ. ಅಂಬೇಡ್ಕರ್‌ರನ್ನು ಬೆಳಗಾವಿ, ನಿಪ್ಪಾಣಿಗೆ ಕರೆತಂದು ಸಾರ್ವಜನಿಕವಾಗಿ ಸನ್ಮಾನಿಸಿ ದೇಣಿಗೆ ಅರ್ಪಿಸಿದವರು ದೇವರಾಯರೇ ಎಂಬುದೂ ಗಮನಾರ್ಹ.

ಈ ಹಂತದಲ್ಲಿ, ಮೈಸೂರು ಪ್ರಾಂತ್ಯದಲ್ಲಿ ಸಮರ್ಥ ನಾಯಕತ್ವವಿಲ್ಲದೆ ಸೊರಗಿದ್ದ ದಲಿತ ಚಳವಳಿ ಜ್ಯೋತಿ ಬಾ ಫೂಲೆ ಮತ್ತು ಡಾ. ಅಂಬೇಡ್ಕರರ ಪ್ರಭಾವದಿಂದ ಉತ್ತರ ಕರ್ನಾಟಕದಲ್ಲಿ ನವ ಚೈತನ್ಯದಿಂದ ಕೂಡಿ ಬೆಳೆಯಿತೆಂಬುದು ಗಮನಿಸಬೇಕಾದ ಸಂಗತಿ. ಈ ಶತಮಾನದ ಎರಡನೇ ದಶಕದಿಂದ ಏಕೀಕರಣದವರೆಗಿನ ಕರ್ನಾಟಕದ ಸಾಮಾಜಿಕ ಮತ್ತು ರಾಜಕೀಯ ಸ್ಥಿತಿ-ಗತಿಗಳನ್ನು ಗಮನಿಸಿದರೆ, ಗಾಂಧಿ-ಅಂಬೇಡ್ಕರ್, ಕಾಂಗ್ರೆಸ್-ಪ್ರಜಾ ಸೋಶಿಯಲಿಸ್ಟ್ ಪಾರ್ಟಿಗಳ ನಡುವಣ ಸಂಬಂಧ-ಸಂಘರ್ಷಗಳ ದೃಶ್ಯ ಕಣ್ಣಿಗೆ ಕಟ್ಟುತ್ತದೆ. ಇದು ಏನೇ ಇದ್ದರೂ, ಡಾ. ಅಂಬೇಡ್ಕರರ ಪ್ರಯತ್ನಗಳಿಗೆ ಆರಂಭದಲ್ಲಿ ಬೆಂಬಲ ನೀಡಿದ ನಿದರ್ಶನಗಳು ಹೆಚ್ಚಾಗಿ ದೊರಕುವುದು ಉತ್ತರ ಕರ್ನಾಟಕದಲ್ಲಿ ಮಾತ್ರ. ಬೆಳಗಾವಿ, ಧಾರವಾಡ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಡಾ. ಅಂಬೇಡ್ಕರರು ಸಂಚರಿಸುವುದರೊಡನೆ ಅಲ್ಲಿಯ ಹೋರಾಟಗಾರರಲ್ಲಿ ನವೋತ್ಸಾಹ ಮೂಡಿಸಿದರು. ಈ ಕಾರಣಕ್ಕಾಗಿಯೇ ಮಹಾರಾಷ್ಟ್ರ ಮಾದರಿಯ ದಲಿತ ಹೋರಾಟಗಳು ಸಹಜವಾಗಿಯೇ ಈ ಭಾಗಗಳಲ್ಲಿ ನಡೆದುದು ಕಂಡುಬರುತ್ತದೆ. ಇಲ್ಲಿ ಸ್ಥಳೀಯವಾಗಿ ಶಕ್ತಿಶಾಲಿ ನಾಯಕರ ಕೊರತೆಯಿದ್ದರೂ ಉತ್ಸಾಹಕ್ಕೆ ಕೊರತೆಯಿರಲಿಲ್ಲ. ಡಾ. ಅಂಬೇಡ್ಕರರ ಅತ್ಯಂತ ನಂಬಿಕಸ್ತ ಅನುಯಾಯಿಗಳಲ್ಲಿ ದೊಡ್ಡಪಾಲು ಕರ್ನಾಟಕ ಧುರೀಣರದ್ದೇ ಆಗಿದ್ದು, ಧಾರವಾಡದ ಶಂಕರಾನಂದಶಾಸ್ತ್ರಿ ಹೊಂಗಲ್, ಬಳವಂತರಾವ್ ವರಾಳೆ, ಎಸ್. ಎನ್. ಮಾನೆ ಚಿಕ್ಕೋಡಿ ಮೊದಲಾದವರನ್ನು ಹೆಸರಿಸುವುದು ಉಚಿತವಾಗಿದೆ.

ಡಾ. ಅಂಬೇಡ್ಕರರ ಮಹೋದ್ದೇಶಗಳೆಂದರೆ ದಲಿತ ಶಿಕ್ಷಣ, ಹೋರಾಟ ಮತ್ತು ಸಂಘಟನೆ. ಅದಕ್ಕಾಗಿಯೇ ೧೯೨೪ರಲ್ಲಿ ಅವರು ಸ್ಥಾಪಿಸಿದ ಸಂಸ್ಥೆಯ ಹೆಸರು 'ಬಹಿಷ್ಕೃತ ಹಿತಕಾರಣಿ ಸಭಾ'. ಬೆಳಗಾವಿ ಜಿಲ್ಲೆಯಲ್ಲಿ ಅವರು ವ್ಯಾಪಕ ಸಂಚಾರ ನಡೆಸಿ ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರೂ ಧಾರವಾಡವೇನೂ ಅವರ ಪ್ರಭಾವ ವಲಯದಿಂದ ದೂರ ಉಳಿಯಲಿಲ್ಲ. ಬಹಿಷ್ಕೃತ ಹಿತಕಾರಣಿ ಸಭಾದ ಸ್ಥಾಪನೆಗೆ ಒಂದು ವರ್ಷ ಮೊದಲು, ಅಂದರೆ ೧೯೨೩ರಲ್ಲಿ, ಡಾ. ಅಂಬೇಡ್ಕರ್ 'ಮಚಿಗಾರ ಮಹಾಸಂಘ'ದ ಉದ್ಘಾಟನೆಗೆಂದು ಧಾರವಾಡಕ್ಕೆ ಬಂದಿದ್ದು, ಇಲ್ಲಿ ತಮ್ಮ ಪ್ರಖರ ವ್ಯಕ್ತಿತ್ವದ ಛಾಪು ಮೂಡಿಸಿದರು. ಅಲ್ಲದೆ, ಧಾರವಾಡ ಮುಂದೆ ಒಂದು ಉನ್ನತ ಶಿಕ್ಷಣಕೇಂದ್ರವಾಗುತ್ತದೆಂಬ ಆಶಯವನ್ನು ವ್ಯಕ್ತಪಡಿಸಿದರು. ಇಲ್ಲಿಯೇ ದಲಿತ ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿ ನಿಲಯವೊಂದನ್ನು ಪ್ರಾರಂಭಿಸಿದರು. ಉನ್ನತ ಶಿಕ್ಷಣಕೇಂದ್ರವೆನಿಸಲು ಧಾರವಾಡ ಅರ್ಹಸ್ಥಳವೆಂದು ತಿಳಿದ ಡಾ. ಅಂಬೇಡ್ಕರ್ ಇಲ್ಲಿ ವಿಶ್ವವಿದ್ಯಾಲಯ ಆರಂಭಿಸಲು ಸರ್ಕಾರಕ್ಕೆ ಶಿಫಾರಸು ಮಾಡಿದುದು ಸ್ಮರಣೀಯ. ಅವರು ಆರಂಭಿಸಿದ ವಿದ್ಯಾರ್ಥಿನಿಲಯ ಈ ಭಾಗದ ವಿದ್ಯಾರ್ಥಿಗಳ ಬಾಳಿಗೆ ಬೆಳಕು ನೀಡಿತು. ೧೯೨೭ರಲ್ಲಿ ಹುಬ್ಬಳ್ಳಿಯ ಮಹಾರ್ ಮಂಡಳಿ ಮತ್ತು ೧೯೨೯ರಲ್ಲಿ ಭಾರತೀಯ ಬಹಿಷ್ಕೃತ ಸಮಾಜ ಶಿಕ್ಷಣ ಪ್ರಸಾರ ಮಂಡಳದಂಥಾ ವಿದ್ಯಾಸಂಸ್ಥೆಗಳ ಹುಟ್ಟಿಗೆ ಬಹಿಷ್ಕೃತ ಹಿತಕಾರಣಿ ಸಭಾದ ಪ್ರೇರಣೆಯೇ ಕಾರಣ.

ಬೆಳಗಾವಿ ಜಿಲ್ಲೆಯಲ್ಲಿ ನಡೆದ ದಲಿತ ಚಳವಳಿಯ ಹಿನ್ನೆಲೆಯಲ್ಲಿ ಮಹಾತ್ಮಾ ಜ್ಯೋತಿ ಬಾ ಫೂಲೆ ಮತ್ತು ಡಾ. ಅಂಬೇಡ್ಕರ್ ಅವರು ಪ್ರಧಾನವಾಗಿ ಕಂಡುಬರುವುದು ಮೇಲಿನ ವಿವರಗಳಿಂದ ಸ್ಪಷ್ಟಪಡುತ್ತದೆ. ಈ ಜಿಲ್ಲೆಯಲ್ಲಿ ಮಹಾರರ ಸಂಖ್ಯೆ ಅಧಿಕವಾಗಿದ್ದಿತೆನ್ನಲು ೧೯೦೨ರಲ್ಲಿ ಇಲ್ಲಿ ನಡೆದ ಮಹಾರ್ ಸಮ್ಮೇಳನವೇ ಸಾಕ್ಷಿ ನುಡಿಯುತ್ತದೆ. ಕರ್ನಾಟಕದ

ಮಟ್ಟಿಗೆ ದಲಿತರು ಮೊದಲಿಗೆ ಸಂಘಟಿತರಾದುದು ಈ ಭಾಗದಲ್ಲೇ ಎಂಬ ಅಭಿಪ್ರಾಯವಿರುವುದು ಗಮನಾರ್ಹ. ಫೂಲೆಯವರಿಂದ ಪ್ರಭಾವಿತರಾದ ದೇವರಾಯ ಇಂಗಳೆಯವರು ಜಾತಿವಾಚಕಗಳಾಗಿದ್ದ ಅಸ್ಪೃಶ್ಯರ ಅಡ್ಡ ಹೆಸರುಗಳನ್ನು ಬದಲಿಸುವುದು, ದಲಿತರಿಗೆ ಶಾಪವಾಗಿದ್ದ ಜೋಗತಿ ಪದ್ಧತಿ ತಡೆಗಟ್ಟುವುದು, ಸತ್ತ ದನದ ಮಾಂಸಭಕ್ಷಣೆ ನಿಷೇಧ, ಇತ್ಯಾದಿ ಕ್ರಾಂತಿಕಾರಕ ಸುಧಾರಣೆಗಳನ್ನು ಕೈಗೊಂಡರು. ತಮ್ಮ ಬರಹಗಳ ಮೂಲಕ ಜಾಗೃತಿ ಮೂಡಿಸಲೆತ್ನಿಸಿದರು. ೧೯೨೪ರಲ್ಲಿ ಡಾ. ಅಂಬೇಡ್ಕರ್ ಚಳವಳಿ ಆರಂಭಗೊಳ್ಳುವ ವರೆಗೆ ಈ ಭಾಗದಲ್ಲಿ ದೇವರಾಯ ಇಂಗಳೆಯವರ ವೈಯಕ್ತಿಕ ಸಾಧನೆ ಮತ್ತು ಸ್ಥಳೀಯ ಅನುಯಾಯಿಗಳಿಂದಾಗಿ ದಲಿತ ಚಳವಳಿ ಜಾಗೃತ ಸ್ಥಿತಿಯಲ್ಲಿದ್ದಿತೆಂಬುದು ಮುಖ್ಯ.

ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಸಮಾವೇಶ ೧೯೨೪ ಡಿಸೆಂಬರ್‌ನಲ್ಲಿ ಬೆಳಗಾವಿಯಲ್ಲಿ ಏರ್ಪಾಟಾಯಿತು. ಗಾಂಧೀಜಿ ಅಧ್ಯಕ್ಷತೆ ವಹಿಸಿದ್ದ ಏಕೈಕ ಅಧಿವೇಶನ ಇದು ಎಂಬುದು ವಿಶೇಷ. ಹಾಗೆಯೇ, ಕರ್ನಾಟಕದ ಜನರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಲು ಪ್ರೇರೇಪಣೆ ನೀಡಿದ ಅಧಿವೇಶನ ಇದು ಎಂಬುದೂ ಮುಖ್ಯ. ದಲಿತರ ರಾಜಕೀಯ ದೃಷ್ಟಿಯನ್ನು ಪ್ರಖರಗೊಳಿಸುವ ನಿಟ್ಟಿನಲ್ಲಿ ಈ ಅಧಿವೇಶನ ಪರಿಣಾಮಕಾರಿ ಪಾತ್ರವಹಿಸಿತೆಂಬುದನ್ನು ಗಮನಿಸಬೇಕು. ಗಾಂಧೀಜಿ ಅಸ್ಪೃಶ್ಯತೆಯನ್ನು ತೊಡೆದು ಹಾಕಲು ಕರೆ ನೀಡಿದರು. ಅಸ್ಪೃಶ್ಯತೆ ಹಿಂದೂಧರ್ಮಕ್ಕೆ ಅಂಟಿದ ಕಳಂಕ; ಅಸ್ಪೃಶ್ಯತೆ ಆಚರಿಸುವ ಶಾಲೆ ಅಥವಾ ಕಾಲೇಜುಗಳನ್ನು ಮುಚ್ಚುವುದರಲ್ಲಿ ಒಂದು ನಿಮಿಷವೂ ತಡಮಾಡಬಾರದು ಎಂದರು. ಎ. ರಾಮಸ್ವಾಮಿ ಮೊದಲಿಯಾರ್ ಅಧ್ಯಕ್ಷತೆ ವಹಿಸಿದ್ದ ಅಖಿಲ ಭಾರತ ಬ್ರಾಹ್ಮಣೇತರರ ಸಮಾವೇಶವೂ ಇದೇ ಅಧಿವೇಶನದಲ್ಲಿ ನಡೆಯಿತು. ಮೊದಲಿಯಾರರು, ಬೊಂಬಾಯಿ ಮತ್ತು ಮದರಾಸು ಪ್ರಾಂತ್ಯಗಳನ್ನು ಬಾಧಿಸುವ ಸಮಸ್ಯೆ ಇದು; ಕರ್ನಾಟಕ ಇವರೆಡರ ಮಧ್ಯೆ ಸಿಕ್ಕಿಕೊಂಡಿದೆ; ರಾಜಕೀಯ ಪ್ರಜ್ಞೆಯುಳ್ಳ ಬ್ರಾಹ್ಮಣೇತರರು ಬ್ರಾಹ್ಮಣರು ಪ್ರಬಲವಾಗಿರುವ ಕಾಂಗ್ರೆಸ್ ಸೇರಲು ಹಿಂಜರಿಯುತ್ತಿರುವುದರಿಂದ ಕಾಂಗ್ರೆಸ್ ಪಕ್ಷ ದುರ್ಬಲವಾಗಿದೆಯೆಂದರು.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ, ಇದೇ ಅಧಿವೇಶನದಲ್ಲಿಯೇ ಅಸ್ಪೃಶ್ಯತಾ ನಿವಾರಣೆಗೆ ಸಂಬಂಧಿಸಿದಂತೆ ಗಾಂಧೀಜಿ ಮತ್ತು ಅಂಬೇಡ್ಕರರ ನಡುವೆ ಚರ್ಚೆ ನಡೆಯಿತು. ಆದರೆ ಈ ಕಾಂಗ್ರೆಸ್ ಅಧಿವೇಶನವನ್ನು ಆಯೋಜಿಸಿದುದು ಹಿಂದೂ ಮಹಾಸಭೆಯಾದ್ದರಿಂದ ಇವರೀರ್ವರ ಚರ್ಚೆಯ ದಿಕ್ಕು ಸಹಾ ಬದಲಾದುದು ಸಹಜ. ಗಾಂಧಿ-ಅಂಬೇಡ್ಕರ್‌ರ ಮಾತುಕತೆ ಯಶಸ್ವಿಯಾಗಲಿಲ್ಲವೆನ್ನುವುದು ಇದರ ಒಂದು ಮುಖವಾದರೆ, ಅಂದೇ ದೇವರಾಯ ಇಂಗಳೆಯವರ ನೇತೃತ್ವದಲ್ಲಿ ಇನ್ನೊಂದು ಮಂಟಪ ನಿರ್ಮಾಣಗೊಂಡು ಅಲ್ಲಿ ಸೇರಿದ್ದ ಸಾವಿರಾರು ಮಂದಿ ದಲಿತರಿಗೆ ಡಾ. ಅಂಬೇಡ್ಕರ್‌ರಿಂದ ಪ್ರತ್ಯೇಕವಾಗಿ ಭಾಷಣ ಕೊಡಿಸಲಾಯಿತೆಂಬುದು ಇದರ ಇನ್ನೊಂದು ಮುಖ. ಇಲ್ಲಿ ವ್ಯಕ್ತಪಟ್ಟ ಅಭಿಪ್ರಾಯವೆಂದರೆ, ದಲಿತರು ಕಾಂಗ್ರೆಸ್‌ನಿಂದ ದೂರ ಸರಿಯಬೇಕೆನ್ನುವುದು.

ಡಾ. ಅಂಬೇಡ್ಕರ್‌ರ ಅಧ್ಯಕ್ಷತೆಯಲ್ಲಿ ನಡೆದ ಬಹಿಷ್ಕೃತ ಹಿತಕಾರಣಿಯ ೩ನೇ ಸಮ್ಮೇಳನವನ್ನು (೧೯೨೫) ಸಂಘಟಿಸಿದವರು ಇಂಗಳೆಯವರೇ. ಈ ಸಮ್ಮೇಳನದಲ್ಲಿ

ಮಾತನಾಡಿದ ಅಂಬೇಡ್ಕರ್, ದೇವರು ಮತ್ತು ಧರ್ಮವನ್ನು ನಂಬಿರುವ ಸಾದಾ ಸ್ವಭಾವದ ಬಹುಜನ ಸಮಾಜ ಇಲಿ ನುಂಗಿದ ಹಾವಿನಂತೆ ಸುಸ್ತಾಗಿ ಬಿದ್ದಿದೆ. ಹಿಂದೂಧರ್ಮದಲ್ಲಿಯ ಚಾತುರ್ವರ್ಣ ವ್ಯವಸ್ಥೆ ಮತ್ತು ದೇವರು, ಧರ್ಮ, ಅಂಧಶ್ರದ್ಧೆಗಳನ್ನು ಬಿಡುವ ತನಕ ಈ ಮಾನಸಿಕ ಗುಲಾಮಗಿರಿಯಿಂದ ಮುಕ್ತವಾಗಲಾರಿರಿ ಎಂದು ದಲಿತಜನರಿಗೆ ಕರೆಕೊಟ್ಟರು. ೧೯೨೭ರಲ್ಲಿ ಬೆಳಗಾವಿ ಜಿಲ್ಲಾ ೫ ನೇ ಬಹಿಷ್ಕೃತ ಹಿತಕಾರಣಿ ಪರಿಷತ್ ಸಮಾವೇಶದಲ್ಲಿ ಕೈಗೊಳ್ಳಲಾದ ೧೦ ಗೊತ್ತುವಳಿಗಳಲ್ಲಿ ಮಹತ್ವದ್ದೆಂದರೆ, ಭಾರತೀಯ ಮುಸಲ್ಮಾನರಿಗೆ ಇದ್ದಂತೆ ದಲಿತವರ್ಗಕ್ಕೂ ಪ್ರತ್ಯೇಕ ಚುನಾವಣಾ ಸೌಲಭ್ಯ ನೀಡಬೇಕೆನ್ನುವುದು. ಈ ಬೇಡಿಕೆ ಮೊದಲು ಮಂಡಿಸಲ್ಪಟ್ಟುದು ಬೆಳಗಾವಿ ಜಿಲ್ಲಾ ದಲಿತರಿಂದಲೇ ಎಂಬುದು ಮುಖ್ಯ. ೧೯೨೮ ಮೇ ೨೯ ರಂದು ಸೈಮನ್ ಕಮೀಶನ್ ಮುಂದೆ ಡಾ. ಅಂಬೇಡ್ಕರ್ ಒತ್ತಾಯಿಸಿದ ಬೇಡಿಕೆಗಳಲ್ಲಿ ದಲಿತರಿಗೆ ಪ್ರತ್ಯೇಕ ಚುನಾವಣಾ ಸೌಲಭ್ಯಕ್ಕೆ ಆದ್ಯತೆ ನೀಡಬೇಕೆಂಬುದೂ ಒಂದಾಗಿದ್ದಿತು. ಅಲ್ಲದೆ, ೨ನೇ ದುಂಡುಮೇಜಿನ ಪರಿಷತ್ತಿನಲ್ಲಿಯೂ ಅಂಬೇಡ್ಕರ್ ಈ ಬೇಡಿಕೆ ಮಂಡಿಸಿದರು.

ಡಾ. ಅಂಬೇಡ್ಕರ್, ಸೀತಾರಾಮ ನಾಮದೇವ ಶಿವತಾರಕ, ದೇವರಾಯ ಇಂಗಳೆ ಮೊದಲಾದ ಪ್ರಭಾವಿ ವ್ಯಕ್ತಿಗಳು ಭಾಗವಹಿಸಿದ್ದ ಬೆಳಗಾವಿ ಜಿಲ್ಲಾ ಮೊದಲನೇ ಸಾಮಾಜಿಕ ಪರಿಷತ್ತಿನ ಸಭೆ ನಡೆದುದು ೧೯೨೯ ಮಾರ್ಚ್‌ನಲ್ಲಿ. ಈ ಸಭೆಯಲ್ಲಿ ಅಸ್ಪೃಶ್ಯತಾಚರಣೆ ಅಪರಾಧವೆಂಬ ಕಾನೂನು ತರಲು ಆಗ್ರಹಿಸಲಾಯಿತು. ದಲಿತವರ್ಗದ ಸಾಮಾಜಿಕ ಸ್ವಾತಂತ್ರ್ಯ ರಕ್ಷಣೆಗೆ ಕಾನೂನು ರಚನೆ, ಆರ್ಥಿಕ ಸ್ಥಿತಿ ಸುಧಾರಣೆಗಾಗಿ ಬೀಳುಭೂಮಿಯ ಹಂಚಿಕೆ, ಸರ್ಕಾರಿ ನೌಕರಿಗಳಲ್ಲಿ ಪ್ರಾತಿನಿಧ್ಯ, ಉಚಿತ ವಿದ್ಯಾರ್ಥಿನಿಲಯಗಳ ಸ್ಥಾಪನೆ, ಸಮಗಾರರ ಅಭಿವೃದ್ಧಿಗೆ ಕಾರ್ಯಕ್ರಮ ಹಾಗೂ ಉಪಾಹಾರ ಗೃಹಗಳಿಗೆ ಮುಕ್ತ ಪ್ರವೇಶಾವಕಾಶ-ಇವುಗಳಿಗಾಗಿ ಒತ್ತಾಯಿಸಲಾಯಿತು. ಬೆಳಗಾವಿ ಜಿಲ್ಲೆಯಲ್ಲಿ ದಲಿತ ಜಾಗೃತಿ ಕಾರ್ಯಕ್ರಮಗಳು, ಪ್ರತಿಭಟನೆಗಳು ಮುಂದುವರೆದುಕೊಂಡು ಬಂದವು. ಚಿಕ್ಕೋಡಿ ತಾಲೂಕಿನ ಸದಲಗಾ, ನೇಜ ಮೊದಲಾದೆಡೆಗಳಲ್ಲಿ ಸವರ್ಣೀಯರೊಡನೆ ದಲಿತರು ನಡೆಸಿದ ಸಂಘರ್ಷಗಳು ದಲಿತರಲ್ಲಿ ಒಗ್ಗಟ್ಟು ಮೂಡಿಸಲು ಸಹಕಾರಿಯಾದವು. ೧೯೨೭ ಜೂನ್‌ನಲ್ಲಿ ಹುಕ್ಕೇರಿ ತಾಲ್ಲೂಕು ಗಾವನಾಳದಲ್ಲಿ ಸಮಾವೇಶಗೊಂಡಿದ್ದ ಮೊದಲನೇ ಬೆಳಗಾವಿ ವತನದಾರ ಮಹರ್ ಪರಿಷತ್ತಿನ ನಂತರ ವಿವಿಧ ಕಡೆಗಳಲ್ಲಿ ಇತರ ಸಮಾವೇಶಗಳು ನೆರೆದಿದ್ದವು. ಇದರ ೮ನೇ ಸಮಾವೇಶ ೧೯೪೫ ಸೆಪ್ಟೆಂಬರ್‌ನಲ್ಲಿ ಬ್ಯಾರಿಸ್ಟರ್ ಎಸ್. ಎನ್. ಮಾನೆ ಅವರ ಅಧ್ಯಕ್ಷತೆಯಲ್ಲಿ ನಡೆದು, ಹೊಲೆಯರು ೧೯೩೯ರ ಸರ್ಕಾರಿ ಆದೇಶ ನಿಗದಿಪಡಿಸಿದ ಕೆಲಸವನ್ನಷ್ಟೆ ಮಾಡಬೇಕಲ್ಲದೆ ಹಿಂದಿನಂತೆ ಬೇಕಾಬಿಟ್ಟಿಯಾಗಿ ಕೆಲಸ ಮಾಡಬಾರದೆಂದು ನಿರ್ಣಯಿಸಿತು. ಸ್ವಾತಂತ್ರ್ಯಾನಂತರ ಈ ಜಿಲ್ಲೆಯಲ್ಲಿ ಬೇರೆ ತೆರನ ಸಂಘಟನೆಗಳು ಆರಂಭಗೊಂಡುದು ಕಂಡುಬರುತ್ತದೆ. ೧೯೬೪ ಮೇ ತಿಂಗಳಲ್ಲಿ ಕರ್ನಾಟಕ ಹರಿಜನ ಕಾನ್‌ಫರೆನ್ಸ್‌ನ ೭ನೇ ಅಧಿವೇಶನವನ್ನು ದೇವರಾಯ ಇಂಗಳೆಯವರು ಸಂಘಟಿಸಿದುದು ಇದಕ್ಕೊಂದು ಉದಾಹರಣೆ. ೧೯೭೦ರ ವರೆಗೂ ದೇವರಾಯರೇ ಬೆಳಗಾವಿ ಜಿಲ್ಲೆಯಲ್ಲಿ ದಲಿತ ಚಳವಳಿಯ ನೇತಾರರಾಗಿದ್ದುದು ಸ್ಪಷ್ಟಪಡುವ ಸಂಗತಿ.

ಬೆಳಗಾವಿ ಜಿಲ್ಲೆಯ ದಲಿತ ಚಳವಳಿಯಲ್ಲಿ ಬಳವಂತರಾವ್ ಎಚ್. ವರಾಳೆಯವರ ಪಾತ್ರವೂ ಪರಿಗಣನಾರ್ಹ. ಇವರು ಸಹಾ ಡಾ. ಅಂಬೇಡ್ಕರರ ಕಟ್ಟಾ ಬೆಂಬಲಿಗರು. ಶೆಡ್ಯೂಲ್ಡ್ ಕ್ಯಾಸ್ಟ್ ಫೆಡರೇಷನ್‌ನ ಮುಂದಾಳುಗಳಲ್ಲಿ ಒಬ್ಬರಾಗಿದ್ದರು. ಅಸ್ಪೃಶ್ಯರ ಸುಧಾರಣಾ ಕಾರ್ಯದಲ್ಲಿ ಇವರೂ ಪ್ರಮುಖ ಪಾತ್ರ ವಹಿಸಿದರು. ದಲಿತರಿಗಾಗಿ ನಿಪ್ಪಾಣಿ, ಹುಕ್ಕೇರಿ, ಧಾರವಾಡ, ವಿಜಾಪುರ ಮೊದಲಾದೆಡೆಗಳಲ್ಲಿ ವಿದ್ಯಾರ್ಥಿನಿಲಯಗಳು ಆರಂಭಗೊಳ್ಳಲು ವರಾಳೆಯವರೇ ಕಾರಣರು. ಅಸ್ಪೃಶ್ಯತಾ ನಿವಾರಣಾ ಕಾರ್ಯಗಳಲ್ಲಿ ಇವರು ಸಕ್ರಿಯರಾಗಿದ್ದು ಎಷ್ಟು ಪರಿಣಾಮಕಾರಿಯಾಗಿ ಕೆಲಸಮಾಡುತ್ತಿದ್ದರೆಂದರೆ, ಇವರ ಸಮಕಾಲೀನರು ಇವರನ್ನು 'ಕರ್ನಾಟಕ ಸಿಂಹ' ಎಂದು ಕರೆದಿರುವುದೇ ಸಾಕ್ಷಿ. ಇಂಗ್ಲೆಂಡಿನಲ್ಲಿ ಏರ್ಪಟ್ಟ ೨ನೇ ದುಂಡುಮೇಜಿನ ಪರಿಷತ್ತಿನಲ್ಲಿ, ಅಸ್ಪೃಶ್ಯನಾಯಕರು ಅಂಬೇಡ್ಕರರೋ ಗಾಂಧಿಯವರೋ ಎಂಬ ಜಿಜ್ಞಾಸೆ ತಲೆದೋರಿದಾಗ, ಅದನ್ನು ಸಮರ್ಪಕವಾಗಿ ಬಗೆಹರಿಸಿದವರು ವರಾಳೆಯವರೇ. ಬೆಳಗಾವಿ ಜಿಲ್ಲೆಯ ಎಲ್ಲಾ ದಲಿತರನ್ನು ಒಗ್ಗೂಡಿಸಿ, ಅವರಿಂದ ಸಹಿ ಸಂಗ್ರಹಿಸಿದರು. ಡಾ. ಅಂಬೇಡ್ಕರರೇ ಅಸ್ಪೃಶ್ಯ ನಾಯಕರೆಂಬುದನ್ನು ಸ್ಪಷ್ಟ ಪಡಿಸುವುದರೊಡನೆ ಆ ಹೇಳಿಕೆಯನ್ನು ಇಂಗ್ಲೆಂಡಿಗೆ ರವಾನಿಸುವಲ್ಲಿ ಯಶಸ್ವಿಯಾದರು. ಡಾ. ಅಂಬೇಡ್ಕರರು ಭಾರತೀಯ ದಲಿತರ ನಿಜವಾದ ನಾಯಕನೆಂದು ಆ ನಂತರ ಘೋಷಿಸಲ್ಪಟ್ಟುದು ಮಹತ್ವದ ಘಟನೆಗಳಲ್ಲೊಂದು. ಡಾ. ಅಂಬೇಡ್ಕರ್‌ರ ಎಲ್ಲಾ ಸಾಧನೆಗಳ ಹಿಂದೆ ವರಾಳೆಯವರ ಪಾತ್ರ ಇರುವುದನ್ನು ಗುರುತಿಸಲಾಗುತ್ತದೆ. 'ಪೂನಾ ಒಪ್ಪಂದ' ಸಂದರ್ಭದಲ್ಲಿ ದಲಿತರನ್ನು ಸಂಘಟಿಸಿ ಹೋರಾಟ ಮಾಡಿದುದು ವರಾಳೆಯವರ ಹೆಗ್ಗಳಿಕೆ. ಡಾ. ಅಂಬೇಡ್ಕರರಿಗೂ ಬಳವಂತರಾವ್ ವರಾಳೆಯವರಿಗೂ ನಿಷ್ಠರಾಗಿದ್ದು, ಉತ್ತರ ಕರ್ನಾಟಕದ ದಲಿತ ಚಳವಳಿಯಲ್ಲಿ ಮುಖ್ಯ ಪಾತ್ರ ವಹಿಸಿದ್ದ ಮಾರುತಿ ಭೀಮರಾವ್ ನಾಡಕರ್ಣಿಯವರನ್ನೂ ಇಲ್ಲಿ ಪ್ರಸ್ತಾಪಿಸಬೇಕು.

ರಾಜಕೀಯವಾಗಿ ಡಾ. ಅಂಬೇಡ್ಕರ್‌ರ ಶೆಡ್ಯೂಲ್ಡ್ ಕ್ಯಾಸ್ಟ್ ಫೆಡರೇಷನ್ ಹಾಗೂ ಆ ನಂತರದ ರಿಪಬ್ಲಿಕನ್ ಪಕ್ಷದ ಚಟುವಟಿಕೆಗಳೂ ಬೆಳಗಾವಿ ಜಿಲ್ಲೆಯಲ್ಲಿ ನಡೆದವು. ೧೯೫೭ರ ೨ನೇ ಲೋಕಸಭಾ ಚುನಾವಣೆಯಲ್ಲಿ ಚಿಕ್ಕೋಡಿ ಮತಕ್ಷೇತ್ರದಿಂದ ರಿಪಬ್ಲಿಕನ್ ಪಕ್ಷದ ಡಿ. ಎ. ಕಟ್ಟಿಯವರು ಕಾಂಗ್ರೆಸ್‌ನ ಬಲವಂತರಾವ ದಾತರ್‌ರನ್ನು ಸೋಲಿಸುವುದರ ಮೂಲಕ ದಲಿತ ಶಕ್ತಿ ಪ್ರದರ್ಶನ ಮಾಡಿದುದು ಚರಿತ್ರಾರ್ಹ ಘಟನೆ. ಅಲ್ಲದೆ, ಜನರಲ್ ಮತಕ್ಷೇತ್ರದಿಂದ ದಲಿತ ಪ್ರತಿನಿಧಿಯೋರ್ವರು ಆಯ್ಕೆ ಹೊಂದಿದುದು ಭಾರತದಲ್ಲೆ ಮೊದಲು ಎಂಬುದೂ ಇಲ್ಲಿಯ ಹೆಗ್ಗಳಿಕೆ. ಆದರೆ ರಾಜಕೀಯ ಸ್ಥಿತ್ಯಂತರದಿಂದ ಆದ ಸಾಮಾಜಿಕ ಪಲ್ಲಟಕ್ಕೆ ತಕ್ಕ ಉದಾಹರಣೆಯೆಂದರೆ ೧೯೬೨ರ ೩ನೇ ಲೋಕಸಭಾ ಚುನಾವಣೆ. ಈ ವೇಳೆಗೆ ಚಿಕ್ಕೋಡಿ ಮತಕ್ಷೇತ್ರವನ್ನು ಮೀಸಲು ಮತಕ್ಷೇತ್ರವಾಗಿ ಘೋಷಿಸಿದ ಪರಿಣಾಮವಾಗಿ ದಲಿತ ಒಕ್ಕೂಟದಲ್ಲಿ ಬಿರುಕು ಕಂಡಿತು. ಕಾಂಗ್ರೆಸ್ ರಾಜಕೀಯದಿಂದ ರಿಪಬ್ಲಿಕನ್ ಪಕ್ಷ ಸಹಾ ಮೂಲೆಗುಂಪಾಯಿತು. ಈ ಚುನಾವಣೆಯ ನಂತರ ೧೯೭೩ರ ವರೆಗೆ ದಲಿತ ಚಳವಳಿಯ ಕಾವು ಇನ್ನಷ್ಟು ಇಳಿಯತೊಡಗಿ ದಲಿತರ ಚಟುವಟಿಕೆಗಳು ಡಾ. ಅಂಬೇಡ್ಕರ್ ಜಯಂತಿಗಷ್ಟೆ ಸೀಮಿತಗೊಂಡುವೆಂದು ವ್ಯಕ್ತಪಡುತ್ತದೆ. ಆದರೆ ೧೯೮೨ರಲ್ಲಿ ದಲಿತ ಸಂಘರ್ಷ ಸಮಿತಿಯ ಶಾಖೆ ಬೆಳಗಾವಿಯಲ್ಲಿ ಕಾರ್ಯಾರಂಭ ಮಾಡುತ್ತಿದ್ದಂತೆ ಈ ಭಾಗದ ಯುವ ದಲಿತ ಪೀಳಿಗೆ ಹೊಸ ಬಗೆಯ ಹೋರಾಟಗಳಿಗೆ ಸಿದ್ಧವಾಗತೊಡಗಿತು.

'ಭೀಮಸೇನಾ' ಸಂಘಟನೆ ಕುರಿತು ಇಲ್ಲಿ ಪ್ರಸ್ತಾಪಿಸಬೇಕಾದ ಅಗತ್ಯವಿದೆ. ಡಾ. ಅಂಬೇಡ್ಕರ್‌ರ ೭೭ನೇ ಜನ್ಮವರ್ಷದ ಆಚರಣೆ ಸಂದರ್ಭದಲ್ಲಿ, ಅಂದರೆ ೧೯೬೮ ಏಪ್ರಿಲ್ ೨೯ ರಂದು ಗುಲ್ಬರ್ಗಾದಲ್ಲಿ - ದೊಡ್ಡ ರ‍್ಯಾಲಿಯ ಸಂದರ್ಭದಲ್ಲಿ ಭೀಮಸೇನಾ ಹುಟ್ಟಿಕೊಂಡಿತು. ಇದನ್ನು ಹುಟ್ಟುಹಾಕಿದವರು ಡಾ. ಅಂಬೇಡ್ಕರ್‌ರ ನಿಷ್ಠಾವಂತ ಅನುಯಾಯಿ ಮತ್ತು ದಲಿತನಾಯಕ ಶ್ಯಾಮಸುಂದರ. ಮಹಾರಾಷ್ಟ್ರದ ಔರಂಗಾಬಾದಿನಲ್ಲಿ ಜನಿಸಿದ, ಆಂಧ್ರಪ್ರದೇಶದ ಹೈದರಾಬಾದಿನಲ್ಲಿ ನೆಲಸಿದ ಹಾಗೂ ಕರ್ನಾಟಕದಲ್ಲಿ ಕಾರ್ಯೋನ್ಮುಖರಾದ ಶ್ಯಾಮಸುಂದರ, ಮೊಟ್ಟಮೊದಲ ಬಾರಿಗೆ ಕರ್ನಾಟಕದಲ್ಲಿ ಡಾ. ಅಂಬೇಡ್ಕರ್‌ರ ಬರಹಗಳನ್ನು ಆದ್ಯಂತವಾಗಿ ಅಧ್ಯಯನ ಮಾಡಿದವರೆಂಬ ಖ್ಯಾತಿಗೆ ಪಾತ್ರರಾದವರು. ಅಂಬೇಡ್ಕರ್‌ರ ಹೆಸರಿನಲ್ಲಿಯ 'ಭೀಮ' ಎಂಬುದಕ್ಕೆ 'ಸೇನೆ'ಯನ್ನು ಹಚ್ಚಿ ಭೀಮಸೇನಾ ಎಂದು ತಮ್ಮ ಸಂಘಟನೆಗೆ ನಾಮಕರಣ ಮಾಡಿದರು. ಮಹಾರಾಷ್ಟ್ರದ ದಲಿತ ಪ್ಯಾಂಥರ್ ಚಳವಳಿಯ ಹರಿಕಾರನಂತೆ ಭೀಮಸೇನಾ ಕೆಲಸಮಾಡಿದುದನ್ನು ಗುರುತಿಸಲಾಗುತ್ತದೆ. ಈ ಸಂಘಟನೆ ಸ್ಪಷ್ಟವಾಗಿ ಘೋಷಿಸಿದ್ದು : ಹಿಂಸೆಯನ್ನು ಹಿಂಸೆಯಿಂದಲೇ ಎದುರಿಸಬೇಕೆಂಬುದನ್ನು. ಸವರ್ಣೀಯ ಹಿಂದೂಗಳ ಮನದಲ್ಲಿ, ಅದರಲ್ಲೂ ಭೂಮಾಲೀಕ ವರ್ಗದವರಲ್ಲಿ ಭಯ ಬಿತ್ತುವ ಕೆಲಸವನ್ನು ಈ ಸಂಘಟನೆ ಯಶಸ್ವಿಯಾಗಿ ನಿರ್ವಹಿಸಿತು.

ಶ್ಯಾಮಸುಂದರರ ಪ್ರಭಾವ ಇಡೀ ದೇಶಾದ್ಯಂತ ಪಸರಿಸಿದ್ದುದು ಗಮನಾರ್ಹ. ದಕ್ಷಿಣದಲ್ಲಿ ಬಲಿಷ್ಠ ಸಂಘಟನೆಯಾಗಿದ್ದಂತೆಯೇ, ಉತ್ತರದಲ್ಲಿ ಉತ್ತರಪ್ರದೇಶ, ಹರ‍್ಯಾಣ, ಪಂಜಾಬ್‌ಗಳಲ್ಲೂ ಇದು ಹರಡಿತು. ಹೊಸ ಪ್ಯಾಂಥರ್ ಸಂಘಟನೆಗಳಿಗೂ ತನ್ನ ಸಹಾಯ ಹಸ್ತ ಚಾಚಿತು. ದಲಿತರ ಉಗ್ರಗಾಮಿ ಸಂಘಟನೆಗಳಲ್ಲಿ ಇದನ್ನು ಮುಖ್ಯವಾಗಿ ಪರಿಗಣಿಸಬೇಕಾಗುತ್ತದೆ. ಹೋರಾಟಮಾರ್ಗದಿಂದಲೇ ದಲಿತರನ್ನು ಶೋಷಣೆಗಳಿಂದ ಮುಕ್ತಗೊಳಿಸಬಹುದೆಂದು ನಂಬಿದ ಭೀಮಸೇನಾ, ನಾಲ್ಕು ಪ್ರಮುಖ ಬೇಡಿಕೆಗಳನ್ನು ದೇಶದ ಮುಂದೆ ಮಂಡಿಸಿತು. ಅವುಗಳೆಂದರೆ, ೧. ಪ್ರತಿ ತಾಲ್ಲೂಕಿನಲ್ಲಿ ಪ್ರತಿಶತ ೨೫ ರಷ್ಟು ಹಳ್ಳಿಗಳನ್ನು ದಲಿತರಿಗೆ ಬಿಟ್ಟುಕೊಡುವುದು; ೨. ಒಂದು ಪ್ರತ್ಯೇಕತಾ ಚುನಾವಣಾ ಕ್ಷೇತ್ರವನ್ನು ದಲಿತರಿಗೆ ಬಿಡುವುದು; ೩. ಪ್ರತಿಯೊಂದು ರಾಜ್ಯದಲ್ಲಿ ಪರಿಶಿಷ್ಟ ಜಾತಿಯವರಿಗೆ ಒಂದು ಪ್ರತ್ಯೇಕ ವಿಶ್ವವಿದ್ಯಾಲಯ ಸ್ಥಾಪಿಸುವುದು; ಹಾಗೂ ೪. ಅಸ್ಪೃಶ್ಯರಿಗಾಗಿಯೇ ಒಂದು ರಾಜಕೀಯ ಸಂಘಟನೆ ಇರುವುದು. ಡಾ. ಅಂಬೇಡ್ಕರರು ಪ್ರತಿಪಾದಿಸಿದ ವಿಚಾರಗಳನ್ನು ಆಧರಿಸಿಯೇ ಶ್ಯಾಮಸುಂದರರು ತಮ್ಮ ಪರಿಕಲ್ಪನೆಗಳನ್ನು ವಿನ್ಯಾಸಗೊಳಿಸಿದುದು ವ್ಯಕ್ತಪಡುತ್ತದೆ. ಆದರೆ ಒಟ್ಟು ಉದ್ದೇಶ ಇದ್ದುದು ದಲಿತರು, ಹಿಂದುಳಿದವರು ಮತ್ತು ಅಲ್ಪಸಂಖ್ಯಾತರ ಒಂದು ಬಲಾಢ್ಯ ಒಕ್ಕೂಟದ ಸ್ಥಾಪನೆ.

* * *

ಕರ್ನಾಟಕದಲ್ಲಿ ಹಿಂದುಳಿದ ವರ್ಗ ಮತ್ತು ದಲಿತ ಸಮುದಾಯಗಳ ಪಾಲಿಗೆ ಭರವಸೆ ನೀಡುವ ಹೊಸ ಶಕ್ತಿಯಾಗಿ ಉದಯಿಸಿದುದು ಡಿ. ದೇವರಾಜ ಅರಸು ಅವರ

ಸರ್ಕಾರ. ೧೯೭೨ ರಿಂದ ೧೯೮೦ ರ ವರೆಗೆ ರಾಜ್ಯದಲ್ಲಿ ಅಧಿಕಾರ ಸ್ಥಾಪಿಸಿದ್ದ ಅರಸು ಸರ್ಕಾರಕ್ಕಿದ್ದ ಮುಖ್ಯ ಬೆಂಬಲವೆಂದರೆ, ದಲಿತರನ್ನೂ ಒಳಗೊಂಡಂತೆ ಎಲ್ಲ ಹಿಂದುಳಿದ ಮತ್ತು ದುರ್ಬಲವರ್ಗಗಳದು. ಮುಖ್ಯವಾಗಿ, ಅವರೆಗೆ ಕರ್ನಾಟಕ ರಾಜಕೀಯದಲ್ಲಿ ಪ್ರಾಬಲ್ಯ ಹೊಂದಿದ್ದ ಒಕ್ಕಲಿಗ ಮತ್ತು ಲಿಂಗಾಯಿತ - ಈ ಎರಡು ಬಲಿಷ್ಠ ಬ್ರಾಹ್ಮಣೇತರ ಜಾತಿಗಳ ಎದುರಾಗಿ ಇತರ ಹಿಂದುಳಿದ ಮತ್ತು ದುರ್ಬಲ ವರ್ಗಗಳ ಪ್ರತಿಶಕ್ತಿಯನ್ನು ನಿಲ್ಲಿಸುವ ಪ್ರಯೋಗವನ್ನು ಅರಸು ಕೈಗೊಂಡುದು ಚಾರಿತ್ರಿಕ ಘಟನೆಗಳಲ್ಲೊಂದು. ೧೯೪೭ ರಿಂದ ೧೯೬೯ರ ವರೆಗೆ ರಾಜ್ಯ ರಾಜಕಾರಣದಲ್ಲಿ ಈ ಎರಡು ಮೇಲ್ವರ್ಗಗಳನ್ನುಳಿದು ಬೇರೆಯವರಿಗೆ ರಾಜಕೀಯ ಅಧಿಕಾರ ಪಡೆದುಕೊಳ್ಳಲು ಆಗದಂಥ ಪರಿಸ್ಥಿತಿಯಿದ್ದಿತು. ಇಂಥಾ ಕಾಲದಲ್ಲಿ ಆಗಿನ ಪ್ರಧಾನಿ ಇಂದಿರಾಗಾಂಧಿಯವರು ಮೊಟ್ಟಮೊದಲ ಬಾರಿಗೆ ದುರ್ಬಲವರ್ಗ ಹಾಗೂ ಅಲ್ಪಸಂಖ್ಯಾತ ಸಮುದಾಯದ ವ್ಯಕ್ತಿಯೊಬ್ಬರಿಗೆ ರಾಜ್ಯ ರಾಜಕಾರಣದ ನಾಯಕತ್ವ ವಹಿಸಿಕೊಟ್ಟುದು ದಾಖಲಾರ್ಹ ಸಂಗತಿ.

ಸಮಾಜವಿಜ್ಞಾನಿ ಜೇಮ್ಸ್ ಮನೋರ್ ವಿಶ್ಲೇಷಿಸಿರುವಂತೆ, ದೇವರಾಜ ಅರಸುರವರು ಹಿಂದುಳಿದ ವರ್ಗಗಳವರು ಮತ್ತು ಹರಿಜನ - ಗಿರಿಜನರ ನಡುವೆ ಸೌಹಾರ್ದಯುತ ಸಂಬಂಧ ಕಲ್ಪಿಸುತ್ತಾ ಬಂದರು. ಉತ್ತರ ಭಾರತದಲ್ಲಿ ಹಿಂದುಳಿದವರ ಕಲ್ಯಾಣ ಕಾರ್ಯಗಳು ಪರಿಶಿಷ್ಟ ಜಾತಿಯವರ ವಿರುದ್ಧ ಎಂಬಂತೆ ಕಂಡಬಂದರೆ, ಅರಸುರವರು ಹಿಂದುಳಿದವರು ಮತ್ತು ಪರಿಶಿಷ್ಟ ಜಾತಿಯವರ ನಡುವೆ ಹೊಂದಾಣಿಕೆ ಏರ್ಪಡಿಸಿದರು. ಪರಿಶಿಷ್ಟ ಜಾತಿಯ ಮುಂದಾಳು ಬಿ. ಬಸವಲಿಂಗಪ್ಪನವರನ್ನು ಬಹುಮುಖ್ಯವಾದ ಕಂದಾಯ ಮಂತ್ರಿ ಮಾಡಿದ್ದರೆ, ಇನ್ನೂ ಕೆಲವು ಪರಿಶಿಷ್ಟ ಜಾತಿಯವರಿಗೆ ಬಹುಮುಖ್ಯ ಖಾತೆಗಳನ್ನು ನೀಡಿ ಮಂತ್ರಿಗಳನ್ನಾಗಿ ಮಾಡಿದರು. ವಿಧಾನಸಭೆಯ ಅಧ್ಯಕ್ಷರನ್ನು ಪರಿಶಿಷ್ಟ ಜಾತಿಯ ನಾಯಕರಿಂದ ಆರಿಸಲಾಯಿತು. ಅಷ್ಟೇ ಅಲ್ಲ, ರಾಜ್ಯದ 'ಎ' ರ್‍ಯಾಂಕಿನ ಹುದ್ದೆಗಳಲ್ಲಿ ಪರಿಶಿಷ್ಟ ಜಾತಿಯವರ ಪ್ರಾತಿನಿಧ್ಯ ಇಲ್ಲವೇ ಇಲ್ಲವೆನ್ನುವ ಪರಿಸ್ಥಿತಿ ಇದ್ದಾಗ ಅರಸುರವರು ವೈಯಕ್ತಿಕ ಮುತುವರ್ಜಿ ವಹಿಸಿ ಅವರಿಗೆ ತಮ್ಮ ಪಾಲು ದೊರೆಯುವಂತೆ ಪ್ರಯತ್ನಿಸಿದರು (ಕಟ್ಟೀಮನಿ: ೧೯೯೦ : ೫೫).

ಅಲ್ಲದೆ, ೧೯೭೨ ರಲ್ಲಿ ಕರ್ನಾಟಕ ೧ನೇ ಹಿಂದುಳಿದ ವರ್ಗಗಳ ಆಯೋಗ ರಚಿಸಿ ಅದಕ್ಕೆ ಅವರ ಮಂತ್ರಿಮಂಡಲದಲ್ಲಿದ್ದ ಲಕ್ಷ್ಮಣ ಜಿ. ಹಾವನೂರರನ್ನು ಅಧ್ಯಕ್ಷರನ್ನಾಗಿ ಮಾಡಿದುದು ಅರಸುರವರ ದೂರದೃಷ್ಟಿಯ ಫಲ. ಹಾವನೂರು ವರದಿ ಸಹಾ ಅಸಂಘಟಿತ ಹೆಸರು - ದೆಸೆಯಿಲ್ಲದ ಹಲವಾರು ಸಣ್ಣ-ಪುಟ್ಟ ಹಿಂದುಳಿದ ಜಾತಿಗಳನ್ನು ಒಗ್ಗೂಡಿಸಲು ಹಾಗೂ ಅವರಲ್ಲಿ ನಾಯಕತ್ವದ ಪ್ರಜ್ಞೆಯನ್ನು ಮೂಡಿಸಲು ಕಾರಣವೆನಿಸಿತು. ೧೯೭೨ ಮತ್ತು ೧೯೭೮ರ ಕರ್ನಾಟಕದ ಚುನಾವಣೆಗಳಲ್ಲಿ ಹಿಂದುಳಿದ ವರ್ಗಗಳ ಶಾಸಕರ ಸಂಖ್ಯೆ ಏರಿತು. ಅಷ್ಟೇ ಅಲ್ಲ, ಹಿಂದುಳಿದ ಜನಾಂಗಗಳವರು ಸಾಮೂಹಿಕವಾಗಿ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸತೊಡಗಿದರು. ೧೯೭೨ರಲ್ಲಿ ನಡೆದ ಚುನಾವಣೆಯಲ್ಲಿ ಹಿಂದೆಂದೂ ದೊರಕಲಾರದಂಥ ಪ್ರಾತಿನಿಧ್ಯ ಹಿಂದುಳಿದವರಿಗೆ ದೊರಕಿತು. ರಾಜ್ಯದ ೨೨೪ ವಿಧಾನಸಭಾ ಕ್ಷೇತ್ರಗಳಲ್ಲಿ ೧೩೦ ಮಂದಿ ಹೊಸ ಮುಖ ಹಾಗೂ ಕೇಳರಿಯದ ಅನೇಕ ಜಾತಿ-ಜನಾಂಗಗಳವರು ವಿಧಾನಸಭೆಗೆ ಪ್ರವೇಶಿಸಿದರು. ದೇವರಾಜ ಅರಸರು

೮ ವರ್ಷಗಳ ಕಾಲ ಮುಖ್ಯಮಂತ್ರಿಯಾಗಿ ಮುಂದುವರೆದಿದ್ದರೆ ಹಿಂದುಳಿದವರ ಇಂಥಾ ಏಕೀಕೃತ ಶಕ್ತಿಯಿಂದ ಮಾತ್ರ. ಡಾ. ಜೆ. ಎಸ್. ಸದಾನಂದರು ಗುರುತಿಸುವಂತೆ, ದೇವರಾಜ ಅರಸುರವರ ಜನಪರ ಕಾಳಜಿ, ಕರ್ನಾಟಕದ ಸಾಮಾಜಿಕ ಸಂಕೀರ್ಣತೆ ಬಗೆಗೆ ಅವರಿಗಿದ್ದ ತಿಳಿವಳಿಕೆಯೂ ಅವರ ಯಶಸ್ವಿಗೆ ಕಾರಣವಾಗಿತ್ತು; ಅವರು ಬದುಕಿರುವವರೆಗೆ ಶೋಷಿತರ ಮತ್ತು ಹಿಂದುಳಿದ ವರ್ಗಗಳ ಪರವಾದ ರಾಜಕೀಯದ ಸಂಕೇತವಾಗಿದ್ದರೆಂದು ಹೇಳಬಹುದು (ಅರಿವು ಬರಹ-೯: ೧೯೯೫ : ೫೨).

ಅರಸು ಅವರಲ್ಲಿದ್ದ ನೈಜ ಕಾಳಜಿಯಂತೆ ರಾಜ್ಯದಲ್ಲಿ ಕಾರ್ಯಗತವಾದ ಅನೇಕ ಅಭಿವೃದ್ಧಿ ಮತ್ತು ಸುಧಾರಣಾ ಕೆಲಸಗಳಲ್ಲಿ ಭೂಸುಧಾರಣೆ, ಮಲಹೊರುವ ಪದ್ಧತಿ ನಿಷೇಧ, ಸಣ್ಣ ಕೈಗಾರಿಕೆಗಳಿಗೆ ಪ್ರೋತ್ಸಾಹ, ಹಿಂದುಳಿದ ಆಯೋಗದ ಸ್ಥಾಪನೆ ಹಾಗೂ ಅನುಷ್ಠಾನ, ಜೀತವಿಮುಕ್ತಿ, ಪರಿಶಿಷ್ಟ ಜಾತಿವರ್ಗ ಮತ್ತು ಹಿಂದುಳಿದ ವರ್ಗಗಳವರ ಆತ್ಮವಿಶ್ವಾಸ ಕುದುರಿಸುವ ನಿಟ್ಟಿನಲ್ಲಿ ಅನೇಕ ಕಲ್ಯಾಣ ಕಾರ್ಯಕ್ರಮಗಳು ಮುಖ್ಯವಾದುವು. ಅರಸುರವರ ಕಾರ್ಯನೀತಿ ರಾಜಕೀಯವಾಗಿ ಯಶಸ್ವಿಯಾಯಿತೆನ್ನಬಹುದು. ಕರ್ನಾಟಕದ ಒಕ್ಕಲಿಗ-ಲಿಂಗಾಯಿತ ಮತ್ತು ಅಲ್ಪಸಂಖ್ಯಾತ ಜಾತಿಗಳ ಪರಸ್ಪರ ತಿಕ್ಕಾಟ ಸಮನ್ವಯದ ರಾಜಕೀಯದಲ್ಲಿ, ಹಾವನೂರು ಆಯೋಗ ವರದಿಯು ಜಾತಿಗಳ ಧ್ರುವೀಕರಣದಲ್ಲಿ ಪ್ರಮುಖ ಪಾತ್ರವಹಿಸಿತೆಂಬ ಮಾತನ್ನು ಒಪ್ಪದಿರುವಂತಿಲ್ಲ. ಆ ನಂತರದ ಪರಿಣಾಮಕಾರಿ ಬೆಳವಣಿಗೆಗಳಲ್ಲಿ ದಲಿತ ಚಳವಳಿ ಮತ್ತು ದಲಿತ ಸಾಹಿತ್ಯ ಚಳವಳಿ ಕ್ರಿಯಾಶೀಲವೆನಿಸಲು ಈ ಅವಧಿಯಲ್ಲಾದ ಮೀಸಲಾತಿ ಸವಲತ್ತುಗಳ ವಿದ್ಯಾಭ್ಯಾಸ ಹಾಗೂ ಭೂಮಾಲೀಕ ಮತ್ತು ನಿಮ್ನವರ್ಗದವರ ಘರ್ಷಣೆಗಳು ಕಾರಣವಾದುವೆನ್ನುವುದನ್ನೂ ಗಮನಿಸಬೇಕು. ದಲಿತ ಚಳವಳಿಯ ಮುಂದಿನ ಹಂತದ ಸ್ವರೂಪ ನಿರ್ಧಾರಗೊಂಡುದೂ ಆಗಲೇ ಎನ್ನಬಹುದು.

ದಲಿತ ಚಳವಳಿಯ ಮುನ್ನಡೆ ಸಂಬಂಧದಲ್ಲಿ ಇಲ್ಲಿ ಪ್ರಸ್ತಾಪಿಸಲರ್ಹವಾದುದು ಮಂತ್ರಿ ಬಿ. ಬಸವಲಿಂಗಪ್ಪನವರ ಪ್ರಕರಣ. ಕರ್ನಾಟಕ ದಲಿತ ಚಳವಳಿ ಚರಿತ್ರೆಯಲ್ಲಿ ಇದನ್ನು 'ಬೂಸಾ ಪ್ರಕರಣ'ವೆಂದು ಗುರುತಿಸಲಾಗುತ್ತದೆ. ಕರ್ನಾಟಕದಲ್ಲಿ ಮೊದಲ ಬಾರಿಗೆ ವ್ಯಾಪಕ ಜಾತಿ ಸಂಘರ್ಷಕ್ಕೆ ಚಾಲನೆ ನೀಡಿದ, ರಾಜ್ಯ ದಲಿತ ಸಮುದಾಯದ ಪ್ರಜ್ಞೆಯನ್ನು ಸಮರ್ಥವಾಗಿ ಕೆದಕಿದ, ಅವರ ಅಂತರ್‌ಮುಖತೆಗೆ ಕಾರಣವೆನಿಸಿದ, ದಲಿತ ಚಳವಳಿಯ ಆಶಯವನ್ನು ಬೀಜಾರೂಪಿಯಾಗಿ ಉದ್ಘಾಟಿಸಿದ (ಮುನಿವೆಂಕಟಪ್ಪ : ೧೯೯೮ : ೮೬), ಬೇರೆ ಬೇರೆ ವೇದಿಕೆಗಳಲ್ಲಿ ಹರಡಿದ್ದ ದಲಿತ ಯುವ ಬರಹಗಾರರು ಒಂದುಗೂಡಲು ಅವಕಾಶ ಕಲ್ಪಿಸಿದ ಹಾಗೂ ದಲಿತ ವೈಚಾರಿಕತೆ ಗಟ್ಟಿಯಾದ ನೆಲೆಯೊಂದನ್ನು ಕಂಡುಕೊಳ್ಳಲು ಕಾರಣವಾದ ಪ್ರಕರಣ ಎಂದೇ ಇದು ಪ್ರಸಿದ್ಧಿಯಾದುದು. ೧೯೭೩ ಫೆಬ್ರವರಿಯಲ್ಲಿ ಮೈಸೂರಿನ ಸಭೆಯೊಂದರಲ್ಲಿ ಮಾತನಾಡಿದ ಬಸವಲಿಂಗಪ್ಪ, ಹಿಂದೂಧರ್ಮ, ಅದ್ವೈತ ಸಾಹಿತ್ಯ ಇತ್ಯಾದಿ ಕುರಿತು ಸಾಂದರ್ಭಿಕವಾಗಿ ಮಾಡಿದ ಟೀಕೆಗಳು ಸನಾತನಿಗಳನ್ನು ರೇಗಿಸಿದವು; ರಾಜ್ಯದಲ್ಲಿ ಬಸವಲಿಂಗಪ್ಪನವರ ವಿರುದ್ಧ ಮೆರವಣಿಗೆ, ಹರತಾಳಗಳು ಪ್ರಾರಂಭಗೊಂಡವು. ಪರ ಹಾಗೂ ವಿರುದ್ಧವಾಗಿ ವಿದ್ಯಾರ್ಥಿ ಚಳವಳಿಗಳು ನಡೆದವು. ಮುಖ್ಯವಾಗಿ, ಸಾಹಿತ್ಯ ವಲಯಕ್ಕೆ ಸಂಬಂಧಿಸಿದ ಹೇಳಿಕೆಯನ್ನು ದೊಡ್ಡದು ಮಾಡಿ

ಅದನ್ನು ಅಪ್ಪಟ ರಾಜಕೀಯ ವಿವಾದವನ್ನಾಗಿ ಮಾಡಲು ವ್ಯವಸ್ಥಿತ ಪ್ರಯತ್ನ ನಡೆದುದು ಚರಿತ್ರೆಯಲ್ಲಿ ದಾಖಲಾಗಿದೆ.

ದೇವರಾಜ ಅರಸು ಸರ್ಕಾರ ಜಾರಿಗೆ ತಂದ ಸುಧಾರಣೆಗಳ ಹಿನ್ನೆಲೆಯಲ್ಲಿ ಬಸವಲಿಂಗಪ್ಪನವರ ಪ್ರಕರಣವನ್ನು ತಪ್ಪಾಗಿ ಗ್ರಹಿಸಿದುದು ಅಥವಾ ವಿಪರೀತವಾಗಿ ಕಲ್ಪಿಸಿಕೊಂಡುದು ಈ ಘಟನೆಗೆ ಇನ್ನೊಂದು ಕಾರಣವೆನ್ನಬಹುದು. ಈ ಸಂದರ್ಭದಲ್ಲಿ ಇಡೀ ರಾಜ್ಯವೇ ಜಾತಿಪರ ಮತ್ತು ಜಾತಿವಿರೋಧಿ ಹಾಗೂ ಪ್ರಗತಿಪರ ಮತ್ತು ಪ್ರಗತಿ ವಿರೋಧಿ ಗುಂಪುಗಳ ನಡುವಣ ಘರ್ಷಣೆಯ ರಂಗವಾಗಿ ಮಾರ್ಪಟ್ಟಿತು. ಸರ್ಕಾರ ಹಾಗೂ ಬುದ್ಧಿಜೀವಿ ವರ್ಗಗಳು ತಮ್ಮ ಅಸಹಾಯಕತೆ ವ್ಯಕ್ತಪಡಿಸುವ ಪರಿಸ್ಥಿತಿಗೆ ಒಳಗಾದವು. ದಲಿತ ಪ್ಯಾಂಥರ್ ಸಂಘಟನೆ ಬಸವಲಿಂಗಪ್ಪನವರನ್ನು ಬೆಂಬಲಿಸಿ ಇಂದಿರಾಗಾಂಧಿಯವರಿಗೆ ಪತ್ರ ಬರೆಯಿತು. ಇಷ್ಟಾದರೂ, ಹಿಂದುಳಿದ ವರ್ಗಗಳ ಮತ್ತು ದಲಿತ ಸಮುದಾಯಗಳ ನೇತಾರರೆಂದು ಗುರುತಿಸಿಕೊಂಡ ದೇವರಾಜ ಅರಸು ಅವರಿಂದಲೂ ಬಸವಲಿಂಗಪ್ಪನವರನ್ನು ಅಧಿಕಾರದಲ್ಲಿ ಉಳಿಸಿಕೊಳ್ಳಲಾಗಲಿಲ್ಲ. ದಲಿತರು - ಮುಖ್ಯವಾಗಿ ದಲಿತ ವಿದ್ಯಾರ್ಥಿಗಳು ಸವರ್ಣೀಯರಿಂದ ಹಿಂಸಾಚಾರಕ್ಕೆ ಗುರಿಯಾಗಿ ಸಾಕಷ್ಟು ಕಿರುಕುಳ, ಹಿಂಸೆಗಳನ್ನು ಅನುಭವಿಸಿದರು. ಈ ಹಿನ್ನೆಲೆಯಲ್ಲಿ, ಅವರ ರಕ್ಷಣೆಗಾಗಿ ಸೈದ್ಧಾಂತಿಕ ನೆಲೆಯಲ್ಲಿ ದಲಿತ ಯುವ ಸಮೂಹ ಒಂದುಗೂಡಲು, ತಮ್ಮ ನಿಜಸ್ವರೂಪ ವನ್ನು ಕಂಡುಕೊಳ್ಳಲು ಈ ಸಂದರ್ಭ ನೆರವಾದುದು ಸ್ಪಷ್ಟ. ಡಾ. ಬಿ. ಎಂ. ಪುಟ್ಟಯ್ಯ ವ್ಯಾಖ್ಯಾನಿಸುವಂತೆ, ಈ ಘಟನೆ ಮೂಲತಃ ಬಸವಲಿಂಗಪ್ಪನವರ ಭಾಷಣದಿಂದಲೇ ಆಯಿತು ಎಂದರೆ ಪ್ರಕರಣವನ್ನು ಸರಳೀಕರಿಸಿದಂತೆ ಆಗುತ್ತದೆ. ಅದೇ ಬಸವಲಿಂಗಪ್ಪನವರು ಕರ್ನಾಟಕದಲ್ಲಿ ಮಲಹೊರುವ ಪದ್ಧತಿ, ಸತ್ತ ದನ ಹೊರುವ ಪದ್ಧತಿ, ಮೇಲುಜಾತಿಯವರು ಸತ್ತಾಗ ಗುಂಡಿ ತೋಡುವುದು, ಹೆಣ ಹೊರುವುದು, ವಾದ್ಯ ಬಾರಿಸುವುದು, ಸುದ್ದಿ ಹೇಳುವುದು ಈ ಮುಂತಾದವುಗಳ ವಿರುದ್ಧ ಬಲವಾದ ಕೂಗೆಬ್ಬಿಸಿದರು. ಇದು ಬಹುತೇಕ ಸಫಲವೂ ಆಗಿತ್ತು. ಈ ಕಿಚ್ಚು ಭೂಮಾಲೀಕ ವರ್ಗದಲ್ಲಿ ಮಡುಗಟ್ಟಿತ್ತು. ಅದು ಒಮ್ಮೆಗೇ ಆಸ್ಫೋಟಿಸಲು ಅವರ ಭಾಷಣ ಕೇವಲ ನೆಪವಾಯಿತು - ಅಷ್ಟೇ! (ಪುಟ್ಟಯ್ಯ: ೧೯೯೭: ೧೨೩). ಬಸವಲಿಂಗಪ್ಪನವರ ಬೂಸಾ ಪ್ರಕರಣದಿಂದ ದಲಿತ ಚಳವಳಿ ರಾಜಕೀಯವಾಗಿ, ಸಾಮಾಜಿಕವಾಗಿ ಸೈದ್ಧಾಂತಿಕ ಸ್ವರೂಪ ಪಡೆದುಕೊಂಡಿತೆಂಬುದು ನಿಜ.

ಇಡೀ ದಲಿತ ಜನಾಂಗದ ರಕ್ಷಣೆ, ಏಳಿಗೆ, ಉತ್ತಮ ಬದುಕಿಗಾಗಿ ಹೋರಾಡ ಬೇಕೆಂಬ ಛಲದ ಮನೋಧರ್ಮ ಮೂಡುತ್ತಿದ್ದಂತೆಯೇ ಕರ್ನಾಟಕ ದಲಿತ ವಿದ್ಯಾರ್ಥಿಗಳು, ಲೇಖಕರು, ಬುದ್ಧಿಜೀವಿಗಳು ತಮ್ಮ ತಮ್ಮಲ್ಲಿ ನಡೆಸಿದ ಚರ್ಚೆ, ಸಮಾಲೋಚನೆಗಳಿಂದ ಸೂಕ್ತ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸಿದರು. ಮುಂದಿನ ಸಂಘಟಿತ ಹೋರಾಟಗಳಿಗೆ ನೈತಿಕ ಸ್ಥೈರ್ಯ ಹೊಂದಲು ಮತ್ತು ಬೆಂಬಲ ಗಳಿಸಲು ಹೊಸ ಸಾಧ್ಯತೆಗಳಿಗೆ ಹುಡುಕಾಟ ನಡೆಸತೊಡಗಿದುದು ಸ್ಪಷ್ಟ. ಈ ನಿಟ್ಟಿನಲ್ಲಿ, ೧೯೭೨ ರಲ್ಲಿ ಕರ್ನಾಟಕ ದಲಿತ ಕ್ರಿಯಾ ಸಮಿತಿ ಅಸ್ತಿತ್ವಕ್ಕೆ ಬಂದಿತು. ೧೯೭೪ರಲ್ಲಿ ದಲಿತ ಸಂಘರ್ಷ ಸಮಿತಿಯ ಹುಟ್ಟಿನೊಡನೆ ದಲಿತ ಲೇಖಕ ಕಲಾವಿದರ ಬಳಗ, ದಲಿತ ವಿದ್ಯಾರ್ಥಿ ಒಕ್ಕೂಟ, ದಲಿತ ಮಹಿಳಾ

ಒಕ್ಕೂಟ, ದಲಿತ ನೌಕರರ ಒಕ್ಕೂಟ, ದಲಿತ ಕಲಾಮಂಡಳಿ ಮೊದಲಾದುವು ಒಂದೊಂದಾಗಿ ಸಂಘಟನೆಗಳ ರೂಪದಲ್ಲಿ ತಲೆಯೆತ್ತಿದವು.

ದಲಿತರ ಮೇಲಿನ ದೌರ್ಜನ್ಯಕ್ಕೆ ತಡೆಯೊಡ್ಡುವ ಕೆಲಸಕ್ಕೆ ಕೈ ಹಾಕಿದುದು ೧೯೭೨ ರಲ್ಲಿ ಹುಟ್ಟಿಕೊಂಡ ದೊಮ್ಮಲೂರಿನ ಡಿ. ಎಂ. ತಿಮ್ಮರಾಯಪ್ಪನವರ ನೇತೃತ್ವದ ಕರ್ನಾಟಕ ದಲಿತ ಕ್ರಿಯಾ ಸಮಿತಿ. ವಿ. ಟಿ. ರಾಜಶೇಖರ್, ಓ. ಶ್ರೀಧರನ್, ಓ. ರಾಜಣ್ಣ, ಶಿವಣ್ಣ, ದಾಸಪ್ಪ, ಎ. ನಾರಾಯಣಸ್ವಾಮಿ, ಗೋಪಾಲಯ್ಯ, ಕೆ. ಚಂದ್ರಶೇಖರ್, ಚಿದಾನಂದ, ವಿ. ಮುನಿವೆಂಕಟಪ್ಪ, ಎಂ. ಚಂದ್ರಶೇಖರ್, ಮುತ್ಯಾಲಪ್ಪ, ರಾಮಕೃಷ್ಣ, ಶಾಮಣ್ಣ, ಮಾರೇನಹಳ್ಳಿ ಡಿ. ಕೆ. ಕೆಂಪರಾಜು, ಎ. ಎಸ್. ರಾಜನ್, ಚಂಚಲ್ಕರ್, ಶ್ರೇಯಸ್ಕರ್ - ಹೀಗೆ ಕಾರ್ಯಕರ್ತರ ದೊಡ್ಡ ಗುಂಪಿನ ಬೆಂಬಲದೊಡನೆ ಹೋರಾಟವನ್ನಾರಂಭಿಸಿದವರು ತಿಮ್ಮರಾಯಪ್ಪ. ೧೯೭೯ರಲ್ಲಿ ಏರ್ಪಾಟಾದ ಮೊದಲ ಬಂಡಾಯ ಸಾಹಿತ್ಯ ಸಮ್ಮೇಳನದ ಯಶಸ್ವಿಗೆ ದುಡಿದವರಲ್ಲಿ ಇವರೂ ಒಬ್ಬರು. ಬಿ. ಬಸವಲಿಂಗಪ್ಪನವರು ತಂದ ಇನಾಮತಿ ಭೂಮಿ ಪರಭಾರೆ ಕಾಯಿದೆ, ತಲೆ ಮೇಲೆ ಮಲಹೊರುವ ಪದ್ಧತಿ ನಿಷೇಧ ಕಾಯಿದೆ, ಕೈಗಾರಿಕಾ ಪ್ರದೇಶದ ಶೆಡ್‌ಗಳಲ್ಲಿ ಮೀಸಲಾತಿ, ಜಿಲ್ಲಾ ಪಂಚಾಯಿತಿ ಕಾಯಿದೆಯಲ್ಲಿ ಹುದ್ದೆಗಳಲ್ಲಿ ಮೀಸಲಾತಿ ಮುಂತಾದುವನ್ನು ಕ್ರಿಯಾಸಮಿತಿ ಬಹಿರಂಗವಾಗಿ ಬೆಂಬಲಿಸಿತು. ಪತ್ರಿಕಾ ಪ್ರಕಟಣೆ, ಅಂಬೇಡ್ಕರ್ ವಿಚಾರಧಾರೆಯ ಪ್ರಸರಣ, ವಿಧಾನಸೌಧದ ಮುಂದೆ ಅಂಬೇಡ್ಕರ್ ಪ್ರತಿಮೆ ಸ್ಥಾಪನೆ, ಅಂಬೇಡ್ಕರ್ ಭವನಗಳ ನಿರ್ಮಾಣ, ಇತ್ಯಾದಿ ಕೆಲಸಗಳನ್ನು ಯಶಸ್ವಿಯಾಗಿ ಪೂರೈಸುವಲ್ಲಿ ಈ ಸಮಿತಿ ನಿರ್ವಹಿಸಿದ ಪಾತ್ರ ಗಣನೀಯವಾದುದು.

**೪.೩. ದಲಿತ ಸಂಘರ್ಷ ಸಮಿತಿ ಹಾಗೂ ದಲಿತರು**

ಡಾ. ಅಂಬೇಡ್ಕರ್‌ರ ವಿಚಾರಧಾರೆಯನ್ನು ಸರಿಯಾಗಿ ಗ್ರಹಿಸಿದ, ಹಾಗೂ ಅಂದಿನ ಜೆ. ಪಿ. ಚಳವಳಿ ಮತ್ತು ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಚಳವಳಿಗಳಿಂದ ಪ್ರಭಾವಿತರಾದ ಕೆಲವು ದಲಿತ ವಿದ್ಯಾವಂತರು ಪ್ರೊ. ಬಿ. ಕೃಷ್ಣಪ್ಪನವರ ಮಾರ್ಗದರ್ಶನದಲ್ಲಿ ದಲಿತ ಸಂಘರ್ಷ ಸಮಿತಿಯನ್ನು ಪ್ರಾರಂಭಿಸಿದರು. ಈ ಚಾರಿತ್ರಿಕ ಘಟನೆ ಸಂಭವಿಸಿದುದು ಭದ್ರಾವತಿಯಲ್ಲಿ - ೧೯೭೪ರಲ್ಲಿ. ಆಗ ಪ್ರೊ. ಕೃಷ್ಣಪ್ಪನವರೊಡನಿದ್ದ ಟಿ. ರಾಜಣ್ಣ, ಎಸ್. ಟಿ. ರಾಜು, ಈರಯ್ಯ, ಎನ್. ಗಿರಿಯಪ್ಪ, ಚಂದ್ರಪ್ರಸಾದ್ ತ್ಯಾಗಿ, ಬೋರಯ್ಯ ಮುಂತಾದವರು ಇಲ್ಲಿ ಉಲ್ಲೇಖಾರ್ಹರು. ಈ ಸಂಘಟನೆ ೧೯೮೨ ರಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿಯೆಂದು ಕರೆಯಿಸಿಕೊಂಡಿತು. ೧೯೭೩ರಲ್ಲಿ ಬಿ. ಬಸವಲಿಂಗಪ್ಪ ಅಧಿಕಾರ ತ್ಯಜಿಸಿದ ನಂತರದಲ್ಲಿ ಆದ ಮುಖ್ಯ ಬದಲಾವಣೆಗಳಲ್ಲಿ - ದಲಿತ ಚಳವಳಿಯ ಮಟ್ಟಿಗೆ - ದಲಿತ ಸಂಘರ್ಷ ಸಮಿತಿಯ ಸ್ಥಾಪನೆ ಪ್ರಮುಖ ಹಂತವೆನ್ನಲಡ್ಡಿಯಿಲ್ಲ.

ದಲಿತ ಸಂಘರ್ಷ ಸಮಿತಿ (ದಸಂಸ) ತನ್ನ ಮುಂದಿರಿಸಿಕೊಂಡಿದ್ದ ಉದ್ದೇಶಗಳಿವು: ೧. ಹರಿಜನ-ಗಿರಿಜನರ ಸಮಸ್ಯೆಗಳ ಬಗೆಗೆ ವ್ಯವಹರಿಸುವುದು; ೨. ಹರಿಜನ-ಗಿರಿಜನರ ಮಧ್ಯೆ ಒಮ್ಮತ ರೂಪಿಸುವುದು ಮತ್ತು ಇವರಲ್ಲಿಯ ಉಪಜಾತಿಗಳನ್ನು ನಾಶಗೊಳಿಸುತ್ತಾ ಅವರ ಐಕ್ಯತೆಗಾಗಿ ದುಡಿಯುವುದು; ೩. ಹರಿಜನ-ಗಿರಿಜನರು ಆರ್ಥಿಕವಾಗಿ ಹಿಂದುಳಿದವರಾಗಿದ್ದು, ಸರ್ಕಾರದ ಸಹಕಾರದೊಂದಿಗೆ ಕೋಳಿ ಸಾಕಾಣಿಕೆ, ಡೈರಿ ಮತ್ತಿತರ

ಸಣ್ಣ ಕೈಗಾರಿಕೆಗಳನ್ನು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಪ್ರಾರಂಭಿಸಿ ಈ ಮೂಲಕ ಇವರ ಆರ್ಥಿಕ ಪರಿಸ್ಥಿತಿ ಸುಧಾರಣೆಗೊಳಿಸಲು ಪ್ರಯತ್ನಿಸುವುದು; ೪. ಕಾನೂನು ಸಂಸ್ಥೆಗಳನ್ನು ಪ್ರಾರಂಭಿಸಿ ತುಳಿತಕ್ಕೊಳಪಟ್ಟವರಿಗೆ ರಕ್ಷಣೋಪಾಯ ಒದಗಿಸುವ ಮೂಲಕ ಭೂಮಾಲೀಕ ಮತ್ತು ಮಾರ್ವಾಡಿಗಳ ಬಂಧನದಿಂದ ಬಿಡಿಸುವುದು; ಹರಿಜನ-ಗಿರಿಜನರ ಮೇಲಾಗುವ ದೌರ್ಜನ್ಯಗಳನ್ನು ತಡೆದು ಸವರ್ಣೀಯ ಹಿಂದೂಗಳು ಮತ್ತು ಹರಿಜನ - ಗಿರಿಜನರ ಮಧ್ಯೆ ಸಾಮರಸ್ಯವುಂಟು ಮಾಡುವುದು; ೫. ಶೋಷಿತವರ್ಗದ ಜನಾಂಗದವರನ್ನು ಪ್ರಜಾಪ್ರಭುತ್ವದ ತತ್ವಗಳ ಆಧಾರದ ಮೇಲೆ ಶಿಕ್ಷಣ ನೀಡಲು ಮುದ್ರಣಾಲಯ ಆರಂಭಿಸಿ ದೈನಿಕ ಪತ್ರಿಕೆಯಾಗಲಿ ಅಥವಾ ವಾರಪತ್ರಿಕೆಯಾಗಲಿ ಪ್ರಾರಂಭಿಸುವುದು; ೬. ಹರಿಜನ - ಗಿರಿಜನರ ಮಕ್ಕಳಿಗೆ ಒಳ್ಳೆಯ ಜ್ಞಾನವೃದ್ಧಿಗೆ ವಾಚನಾಲಯ ತೆರೆಯುವುದು; ಹಾಗೂ ೭. ಜನಾಂಗದ ಸಂಪೂರ್ಣ ಅಭಿವೃದ್ಧಿಗೆ ಆರ್ಥಿಕವಾಗಿ, ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಕೆಲಸ ಮಾಡುವುದು (ಹಿ. ಶ್ರೀಧರನ್ : ೧೯೯೭ : ೩೧-೩೨).

ದಸಂಸ ೧೯೯೩ರಲ್ಲಿ ತನ್ನ ಕಾರ್ಯವ್ಯಾಪ್ತಿಯನ್ನು ರಾಜ್ಯಮಟ್ಟಕ್ಕೆ ವಿಸ್ತರಿಸಿಕೊಂಡಿತು; ತನ್ನದೇ ಆದ ಸಂವಿಧಾನ ರಚಿಸಿಕೊಂಡಿತು. ೧೯೭೬ ಡಿಸೆಂಬರ್‌ನಲ್ಲಿ ಭದ್ರಾವತಿಯಲ್ಲಿ ಮೊದಲಬಾರಿ ಏರ್ಪಡಿಸಿದ ದಲಿತ ಲೇಖಕರ ಮತ್ತು ಕಲಾವಿದರ ಯುವ ಸಂಘಟನೆಯ ಸಮ್ಮೇಳನ, ೧೯೭೮ ರಿಂದ ಎಲ್ಲಾ ಜಿಲ್ಲೆಗಳಲ್ಲಿ ಆರಂಭಗೊಂಡ ಸಮಿತಿಯ ಶಾಖೆಗಳು ದಲಿತರಲ್ಲಿ ಹೊಸ ಪಾಠಗಳನ್ನು ಬೋಧಿಸಿದವು. ವಿದ್ಯಾರ್ಥಿ ಸಮಸ್ಯೆ, ಗ್ರಾಮೀಣ ಪ್ರದೇಶಗಳಲ್ಲಿ ದಲಿತರ ಮೇಲಿನ ಹಲ್ಲೆ, ದೌರ್ಜನ್ಯಗಳ ಸಮಸ್ಯೆ, ಭೂಸಮಸ್ಯೆ - ಇಂಥಾ ಹತ್ತಾರು ಸಮಸ್ಯೆಗಳನ್ನು ಎದುರಿಸಲು, ಅವುಗಳ ವಿರುದ್ಧ ಪರಿಹಾರ ಕಂಡುಕೊಳ್ಳಲು ದಸಂಸ ಜಿಲ್ಲಾ ಶಾಖೆಗಳು ದಲಿತರಲ್ಲಿ ಧೈರ್ಯೋತ್ಸಾಹಗಳನ್ನು ತುಂಬಿದವು. ಮುಖ್ಯವಾಗಿ, ಅಂಬೇಡ್ಕರ್ ಸಾಹಿತ್ಯದಿಂದ ಪ್ರೇರಣೆ ಪಡೆದ ಯುವ ಪೀಳಿಗೆ ಹಳ್ಳಿಗಾಡಿನ ದಲಿತರಲ್ಲಿ, ಪಟ್ಟಣಗಳ ಕಾರ್ಮಿಕರಲ್ಲಿ, ಕೂಲಿಗಳಲ್ಲಿ, ಸಾಮಾನ್ಯರಲ್ಲಿ ಯಾವುದೇ ಸವಾಲನ್ನು ಎದುರಿಸುವಂಥಾ ಅರಿವು ಮೂಡಿಸಲು ಕಾರ್ಯೋನ್ಮುಖವಾಯಿತು. ದಲಿತರ ಪರವಾಗಿ, ಅವರ ಹಕ್ಕುಗಳಿಗಾಗಿ ಪರಿಣಾಮಕಾರಿಯಾದ ಹೋರಾಟಗಳನ್ನು ನಡೆಸಿದ ದಸಂಸ, ತನ್ನಲ್ಲಿಯ ಬುದ್ಧಿಜೀವಿಗಳಿಗೆ, ಬರಹಗಾರರಿಗೆ ಇತರರಿಗಿಂತ ಭಿನ್ನವಾಗಿ ಅಭಿವ್ಯಕ್ತಿಸಲು ಪ್ರೇರಣೆ ನೀಡಿದುದು ಗಮನಾರ್ಹ. ದಲಿತ ಪರಂಪರೆಯನ್ನು ಯಾವುದೇ ಎಗ್ಗು-ಸಿಗ್ಗುಗಳಿಲ್ಲದೆ ತಮ್ಮ ಬರಹಗಳಲ್ಲಿ, ರಚನೆಗಳಲ್ಲಿ ದಾಖಲಿಸುತ್ತಾ ಹೋದ ದಲಿತ ಪ್ರತಿಭಾವಂತರು, ತಮ್ಮ ಸೃಜನಶಕ್ತಿಯ ಹೊಸಮುಖವನ್ನು ಪರಿಚಯಿಸುವ, ಅದರ ಜೀವಂತಿಕೆಯನ್ನು ಇನ್ನೊಮ್ಮೆ ಸಮರ್ಥಿಸಿ ತೋರಿಸುವ ನಿಟ್ಟಿನಲ್ಲಿ ಕ್ರಿಯಾಶೀಲರಾದರು. ಬೂಸಾ ಪ್ರಕರಣವಾಗಲಿ, ಹಾವನೂರು ವರದಿಯಾಗಲಿ ಸಂದರ್ಭವೊಂದರ ಪುನರಾವರ್ತನೆಗೆ, ಸಂಘಟನೆಗಳ ಪುನಶ್ಚೇತನಕ್ಕೆ ಪ್ರೇರಕವಾದುವೇ ವಿನಾ ಅವು ಆರಂಭವೇನೂ ಆಗಲಿಲ್ಲ, ಹಾಗೆಯೇ ಅಂತಿಮವೂ ಅಲ್ಲ. ಒಟ್ಟಿನಲ್ಲಿ, ೭೦ರ ದಶಕದಲ್ಲಿ ಕರ್ನಾಟಕದಲ್ಲಾದ ಇಂಥಾ ಸಾಮಾಜಿಕ ಬದಲಾವಣೆಗಳು ರಾಜ್ಯದ ಒಟ್ಟು ಸಮಾಜೋ-ಆರ್ಥಿಕ ಹಾಗೂ ಸಮಾಜೋ-ಸಾಂಸ್ಕೃತಿಕ ಬದುಕಿನ ಮೇಲೂ ತೀವ್ರ ಪರಿಣಾಮ ಬೀರಿದವು.

ಸಾಮಾಜಿಕ ಕ್ಷೇತ್ರದ ವಿವಿಧ ಸಮಸ್ಯೆಗಳತ್ತ ದಸಂಸ ತನ್ನ ಗಮನ ಕೇಂದ್ರೀಕರಿಸಿದಂತೆಯೇ, ರಾಜ್ಯದ ಆರ್ಥಿಕ, ರಾಜಕೀಯ ಕ್ಷೇತ್ರಗಳತ್ತಲೂ ಕೇಂದ್ರೀಕರಿಸಿತು. ಭೂ ಆಕ್ರಮಣಗಳಿಗೆ ಸಂಬಂಧಿಸಿದಂತೆ ಈ ಸಂಘಟನೆಯ ಹೋರಾಟ ಗಮನಾರ್ಹ. ಭದ್ರಾವತಿ ತಾಲ್ಲೂಕಿನ ಸಿದ್ಲಿಪುರ (೧೯೭೭), ಹೊನ್ನಾಳಿ, ಬಿದಿರಕಾವಲು, ಚಂದಗೋಡು (೧೯೭೯), ಮೆದಕಿನಾಳ (೧೯೮೭), ಕೊಪ್ಪಳ ತಾಲ್ಲೂಕಿನ ಮಹಮ್ಮದ್‌ನಗರ, ನಾಗಸಂದ್ರ (೧೯೮೫), ಮರಸನಪಲ್ಲಿ, ದೇವಲಾಪುರ - ಈ ಮೊದಲಾದ ಭೂ ಹೋರಾಟಗಳನ್ನು ಹಮ್ಮಿಕೊಂಡು ಹೋರಾಡಿದುದು ಚರಿತ್ರಾರ್ಹ ಘಟನೆ. ಇವೇ ಅಲ್ಲದೆ, ಇತರ ಭೂ ಒಡೆತನಕ್ಕೆ ಸಂಬಂಧಿಸಿದ ಹೋರಾಟಗಳು ದಲಿತರ ಸಂಕಷ್ಟಗಳ ದಾಖಲೆಗಳಂತಿವೆ. ಬೌದ್ಧಿಕವಾಗಿ ಇನ್ನಷ್ಟು ಚುರುಕುಗೊಳ್ಳುವ ಹಾಗೂ ಹೋರಾಟದ ಸೈದ್ಧಾಂತಿಕತೆಯನ್ನು ಅರ್ಥಮಾಡಿಕೊಳ್ಳುವ ಸಂಬಂಧದಲ್ಲಿ ಹಮ್ಮಿಕೊಳ್ಳಲಾದ ತರಬೇತಿ ಶಿಬಿರಗಳು ವಿದ್ಯಾರ್ಥಿಗಳಲ್ಲಿ, ಪೂರ್ಣಾವಧಿ ಕಾರ್ಯಕರ್ತರಲ್ಲಿ ಶಿಸ್ತನ್ನು ಮೂಡಿಸಿದವು. ಸುತ್ತಲೂ ಆವರಿಸಿರುವ ಸುಡುವ ಸಮಸ್ಯೆಗಳನ್ನು ಎದುರಿಸುವ, ಪರಿಹರಿಸುವ ಬಗೆಗೆ ತಾಲ್ಲೂಕು ಮತ್ತು ಜಿಲ್ಲಾ ಮಟ್ಟಗಳಲ್ಲಿ ಸಮಾಲೋಚನೆಗಳನ್ನು ನಡೆಸಿ ಕಾರ್ಯೋನ್ಮುಖರಾಗುವಂಥ ಹಂತಕ್ಕೆ ಸಮಿತಿಯ ಚಟುವಟಿಕೆಗಳು ಬೆಳೆದವು. ಗ್ರಾಮೀಣ ಸಮಸ್ಯೆಗಳನ್ನು ಸುಧಾರಿಸುವಲ್ಲಿ ಸಂಘಟನೆ ತಾಳ್ಮೆಯನ್ನೂ ಧೈರ್ಯವನ್ನೂ ಪ್ರದರ್ಶಿಸುವುದನ್ನು ರೂಢಿಸಿಕೊಂಡುದು ಗಮನಾರ್ಹ.

ರಾಜ್ಯದ ವಿವಿಧ ಎಡೆಗಳಲ್ಲಿ ಇತರ ಮೇಲ್ವರ್ಗದವರಿಂದ ದಲಿತರ ಮೇಲೆ ಆದ ದೌರ್ಜನ್ಯಗಳ ವಿರುದ್ಧ ಪ್ರತಿಭಟಿಸುವಾಗಲೆಲ್ಲ ದಸಂಸ ತನ್ನ ಶಕ್ತಿ-ಪ್ರಭಾವಗಳನ್ನು ಚಳವಳಿಗಳ ಮೂಲಕ ಪ್ರದರ್ಶಿಸಿ ಆಡಳಿತದ ಗದ್ದುಗೆ ನಡುಗುವಂತೆ ಮಾಡಿದುದು ದಿಟ. ಉದಾಹರಣೆಗಳು ವಿಪುಲವಾಗಿವೆ. ಕೆಲವನ್ನು ಇಲ್ಲಿ ಪ್ರಸ್ತಾಪಿಸುವುದಾದರೆ, ವೆಂಕಟಸ್ವಾಮಿ ಆಯೋಗದ ವರದಿ, ಗಾಂಧಿ ಚಲನಚಿತ್ರ ಬಹಿಷ್ಕಾರ, ಮುನಿವೆಂಕಟಸ್ವಾಮಿ ಪ್ರಕರಣ, ಖೋಟಾ ಜಾತಿಪತ್ರಗಳ ಹಂಚಿಕೆ; ರಾಯಚೂರು ಜಿಲ್ಲೆಯ ಆರೋಲಿ ಹುಲಿಗಮ್ಮ, ಗುಲ್ಬರ್ಗಾ ಜಿಲ್ಲೆ ಚುಂಚುರಮಾಪುರ ತಾಯಿ ಹಾಗೂ ಶಿವಮೊಗ್ಗ ಜಿಲ್ಲೆಯ ಚಂದ್ರಗುತ್ತಿ ಗುತ್ತೆವ್ವನ ಜಾತ್ರೆಗಳಲ್ಲಿ ಬೆತ್ತಲೆ ಸೇವೆ ನಿಲ್ಲಿಸುವ ಪ್ರಯತ್ನ, ದೇವದಾಸಿ ವಿರುದ್ಧ ಹೋರಾಟ, ಇತ್ಯಾದಿ ಮುಖ್ಯವಾದುವು. ೧೯೮೭ ರಲ್ಲಿ ನಡೆದ ಬೆಂಡಿಗೇರಿ ಪ್ರಕರಣದಿಂದ ಇಡೀ ದೇಶವೇ ನಾಚಿಕೆಪಟ್ಟುಕೊಳ್ಳುವ ಪರಿಸ್ಥಿತಿ ಉಂಟಾದುದನ್ನು ಗಮನಿಸಬಹುದು. ಇಲ್ಲಿ ಯಾವುದೋ ಸಣ್ಣ ಅಪರಾಧಕ್ಕೆ ಐವರು ದಲಿತ ವ್ಯಕ್ತಿಗಳಿಗೆ ಬಲವಂತವಾಗಿ ಮಲ ತಿನ್ನುವ ಶಿಕ್ಷೆ ವಿಧಿಸಲಾಯಿತು. ದಸಂಸ ಕೈಗೊಂಡ ಪ್ರತಿಭಟನೆಯಿಂದಾಗಿ ಸರ್ಕಾರದ ಮೇಲೆ ಆರೋಪ ಬರುವಂತಾಯಿತು. ಆಗ ನಡೆದ ದಲಿತರ ಪ್ರತಿಭಟನಾ ರ್‍ಯಾಲಿಯಲ್ಲಿ ಒಂದು ಲಕ್ಷ ದಲಿತ ಯುವಕರು ಭಾಗವಹಿಸಿದ್ದರು. ಸರ್ಕಾರವು ದಲಿತ ಶಾಸಕ ಡಾ. ಬಿ. ಎಂ. ತಿಪ್ಪೇಸ್ವಾಮಿಯವರ ನೇತೃತ್ವದಲ್ಲಿ ಸದನ ಸಮಿತಿ ರಚಿಸಿತು. ಸಮಿತಿಯೂ ಈ ಪ್ರಕರಣದ ಬಗೆಗೆ ತನ್ನ ಪ್ರಾಮಾಣಿಕ ವರದಿ ಸಲ್ಲಿಸಿತು. ಆದರೆ ಆ ನಂತರ ಡಾ. ತಿಪ್ಪೇಸ್ವಾಮಿಯವರೇ ಸಂದರ್ಶನವೊಂದರಲ್ಲಿ ಕೇಳಲಾದ ಪ್ರಶ್ನೆಯೊಂದಕ್ಕೆ ಉತ್ತರಿಸುತ್ತಾ, ಬೆಂಡಿಗೇರಿ ಪ್ರಕರಣದ ವಿರುದ್ಧ ಸರ್ಕಾರ ಪ್ರಾಮಾಣಿಕ ಹಾಗೂ ಗಟ್ಟಿ ನಿರ್ಧಾರ ತೆಗೆದುಕೊಳ್ಳಲಿಲ್ಲವೆಂದು, ಸರ್ಕಾರ ತೆಗೆದುಕೊಂಡ ಕ್ರಮದ ಬಗೆಗೆ ಯಾವ ಸುದ್ದಿಯೂ

ಬಂದಿಲ್ಲವೆಂದು ಹೇಳಿದ್ದು ಗಮನಾರ್ಹ. ಸರ್ಕಾರ ಈ ಅಮಾನವೀಯ ಘಟನೆಯನ್ನು ಸರಳವಾಗಿಯೇ ಅಲಕ್ಷಿಸಿದ್ದು ಸ್ಪಷ್ಟ. ಆ ನಂತರದ ಇಂಥದೇ ಇತರ ಘಟನೆಗಳಲ್ಲೂ ಇದೇ ಪರಿಸ್ಥಿತಿ ಉಂಟಾದುದು ತೀರಾ ಆತಂಕಕಾರಿ ಸಂಗತಿಯೆನ್ನಬಹುದು. ದಲಿತ ಮಹಿಳೆಯರ ಮೇಲೆ ಅತ್ಯಾಚಾರ, ದಲಿತ ಕೂಲಿವರ್ಗದ ಮೇಲೆ ದೌರ್ಜನ್ಯ, ವಸತಿ ನೆಲೆಗಳಿಗೆ ಅಗ್ನಿಸ್ಪರ್ಶ, ರೈತರನ್ನು ಒಕ್ಕಲೆಬ್ಬಿಸುವುದು ಇಂಥದೇ ಹತ್ತಾರು ಘಟನೆಗಳು ದಿನನಿತ್ಯವೂ ವರದಿಯಾಗುತ್ತಿದ್ದು, ದಸಂಸದ ಸ್ಥಳೀಯ ಸಂಘಟನೆಗಳು ಇಕ್ಕಟ್ಟು - ಬಿಕ್ಕಟ್ಟುಗಳಿಗೆ ಸಿಕ್ಕಿಕೊಳ್ಳುವಂತಾಗಿದೆ.

ಹಿಂದೊಮ್ಮೆ ಭಜನಾಮಂಡಳಿಗಳ ಸ್ವರೂಪದಲ್ಲಿದ್ದ ದಲಿತ ಸಂಘಟನೆಗಳು ಅಂಬೇಡ್ಕರ್ ಯುವಕ ಮಂಡಳಿಗಳಾಗಿ ಪರಿವರ್ತನೆಗೊಂಡುದು ದಸಂಸದ ಪ್ರಭಾವದಿಂದಲೇ. ಡಾ. ಅಂಬೇಡ್ಕರರು ಸಾರಿದ ಮೂರು ಮಂತ್ರಗಳು ಅಥವಾ ಮೂರು ಕಟ್ಟಳೆಗಳಾದ 'ಜಾಗೃತರಾಗಿ, ಹೋರಾಡಿ, ಒಂದಾಗಿ' (ಎಜುಕೇಟ್, ಆ್ಯಜಿಟೇಟ್, ಆರ್ಗನೈಸ್) ಎಂಬುದನ್ನು ಕಾರ್ಯಗತಗೊಳಿಸುವ ನಿಟ್ಟಿನಲ್ಲಿ ಸಜ್ಜುಗೊಂಡಿತು ದಲಿತ ಯುವ ಪಡೆ. ಬರವಣಿಗೆ ಮೂಲಕ ತಮ್ಮ ಅತೃಪ್ತಿ - ಆಕ್ರೋಶಗಳನ್ನು ವ್ಯಕ್ತಪಡಿಸಲು ಈ ಸಮುದಾಯ ಆರಂಭಿಸುತ್ತಿದ್ದಂತೆಯೇ ಬರಹ ಉರಿವ ಕೆಂಡದಂತಾಯಿತು. ಮಹಾರಾಷ್ಟ್ರದಲ್ಲಿ ದಲಿತ ಪ್ಯಾಂಥರ್ಸ್‌ನಂಥಾ ಶಕ್ತಿಶಾಲಿ ಸಂಘಟನೆ ನೆಲೆಯಿಂದ ಬರೆಯಲಾರಂಭಿಸಿದ ಸತ್ವಶಾಲಿ ದಲಿತ ಬರಹಗಾರರು ಶೋಷಕ ಶಕ್ತಿಗಳನ್ನು ದಿಕ್ಕುಗೆಡುವಂತೆ ಮಾಡಿದ್ದು ಸತ್ಯದೂರ ಸಂಗತಿಯೇನಲ್ಲ. ಕರ್ನಾಟಕದಲ್ಲಿಯೂ ಅದೇ ಲಕ್ಷಣ ತೋರಿಬರತೊಡಗಿತು. ಶಿಕ್ಷಣದ ಮೂಲಕ ಪಡೆದ ವ್ಯವಸ್ಥೆಯ ಅರಿವು ಹಾಗೂ ಅನುಭವದ ಸಮುಚ್ಚಯದಿಂದ ಮೂಡಿಬಂದ ದಲಿತ ಸಾಹಿತ್ಯ ಸಾಮಾಜಿಕ ಹೋರಾಟದ ನೆಲೆಯಲ್ಲಿ ಇನ್ನಷ್ಟು ಪ್ರಖರವಾಗಿ ಪ್ರಸಾರವಾಗತೊಡಗಿತು.

ಕರ್ನಾಟಕದಲ್ಲಿ ದಲಿತ ಚಳವಳಿ ಆರಂಭಗೊಂಡುದು ಸಾಹಿತ್ಯ ಚಳವಳಿ ಮೂಲಕ ಎನ್ನುವ ಅಭಿಪ್ರಾಯವಿದೆ. ಬಸವಲಿಂಗಪ್ಪನವರ 'ಬೂಸಾ ಸಾಹಿತ್ಯ' ವಿವಾದದ ಹಿನ್ನೆಲೆಯಲ್ಲಿ ಸಾಹಿತ್ಯವನ್ನೆ ಬೆನ್ನೆಲುಬು ಮಾಡಿಕೊಂಡು ದಸಂಸ ಹುಟ್ಟಿತೆಂಬ ಸಮರ್ಥನೆಯೂ ಇದೆ. ಸಾಹಿತ್ಯೇತರ ದಲಿತ ಚಳವಳಿ ದಲಿತ ಬರಹಗಾರರ ಮೇಲೆ ಪ್ರಭಾವ ಬೀರಿ ದಲಿತ ಸಾಹಿತ್ಯ ಸೃಷ್ಟಿಗೆ ಕಾರಣವಾಯಿತೆಂತಲೂ ಹೇಳಲಾಗುತ್ತದೆ. ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಚಳವಳಿಯತ್ತ ಕಣ್ಣು ಹಾಯಿಸಿದರೆ, ಅದು ದಲಿತ ಸಾಹಿತ್ಯದೊಡನೆ ಗಾಢ ಸಂಬಂಧ ಹೊಂದಿದ್ದುದು ಸ್ಪಷ್ಟ. ದಲಿತ ಪ್ಯಾಂಥರ್‌ನ ಅಂತರಾಳದಲ್ಲಿ ಹುದುಗಿದ್ದ ಕ್ರಾಂತಿಕಿಡಿಗಳು ದಲಿತ ಸಾಹಿತ್ಯದ ಮೂಲಕ ಹೊರಸಿಡಿದು ಹೊತ್ತಿ ಉರಿದವು. ಅಂಬೇಡ್ಕರ್‌ವಾದದೊಡನೆ ಮಾರ್ಕ್ಸ್‌ವಾದವನ್ನೂ ಸಮೀಕರಿಸಿ ದಲಿತರ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಲ್ಲಿ ಈ ಸಂಘಟನೆ ಕ್ರಿಯಾಶೀಲವಾದುದು ಸ್ಪಷ್ಟ. ದಲಿತ ಸಾಹಿತ್ಯದ ಒಟ್ಟು ಉದ್ದೇಶವೇ ಕ್ರಾಂತಿಕಾರಿ ಮತ್ತು ಸಿಡಿದೇಳುವಿಕೆಯ ಗುಣಗಳನ್ನು ಅಭಿವ್ಯಕ್ತಿಸುವುದಾಗಿದ್ದಿತೆಂಬುದನ್ನು ಈ ಸಂಬಂಧ ಸಮರ್ಥಿಸಿತು. ಇದು ಸಾಂಸ್ಕೃತಿಕ ಕ್ರಾಂತಿಯ ಜೀವಂತ ಚಳವಳಿಯಾಗಿ ಮಾರ್ಪಟ್ಟುದು ಸಹಜ. ಕರ್ನಾಟಕದ ಮಟ್ಟಿಗೆ ಸಾಹಿತ್ಯಕ ಚಳವಳಿಯೂ ದಲಿತ ಸಾಂಸ್ಕೃತಿಕ ಚಳವಳಿಯಾಗಿ ಮಾರ್ಪಟ್ಟು, ದಲಿತರಲ್ಲಿ ಜಾಗೃತಿಯನ್ನೂ ಪರಿವರ್ತನೆಯನ್ನೂ ಉಂಟುಮಾಡಿರುವುದನ್ನು ಗುರುತಿಸಬಹುದು.

ದಲಿತ ಸಾಹಿತ್ಯ ಚರಿತ್ರೆಯನ್ನು ವಿಶ್ಲೇಷಿಸುವವರು ದಲಿತ ಸಾಹಿತ್ಯದ ವರ್ಗೀಕರಣ ಮಾಡುವಲ್ಲಿ ದಲಿತಪ್ರಜ್ಞೆ ಕುರಿತು ವಿವೇಚಿಸಲೆತ್ನಿಸಿದ್ದಾರೆ. ಸಾಹಿತ್ಯವನ್ನು ದಲಿತ ಸಾಹಿತ್ಯ, ದಲಿತೀಯ ಸಾಹಿತ್ಯ, ದಲಿತೇಯ ಸಾಹಿತ್ಯ ಮತ್ತು ಆಂಶಿಕ ದಲಿತ ಸಾಹಿತ್ಯವೆಂದು ವರ್ಗೀಕರಿಸಲಾಗಿದ್ದರೂ (ಮಾಲಗತ್ತಿ : ೧೯೮೯ : ೨೮) ದಲಿತರನ್ನು ಕುರಿತು ಬರೆದುದೆಲ್ಲ ದಲಿತ ಸಾಹಿತ್ಯವೆಂದೇ ಒಪ್ಪುವಂಥಾ ನಿಲುವು ತಳೆದಿರುವುದು ಗಮನಾರ್ಹ. ದಸಂಸದ ಮುಂಚೂಣಿಯಲ್ಲಿದ್ದವರು, ಅದರ ವ್ಯಾಪ್ತಿಗೊಳಪಟ್ಟವರು ಹಾಗೂ ಅದರೊಡನೆ ಒಡನಾಟವಿರಿಸಿಕೊಂಡವರಲ್ಲಿ ಸಾಕಷ್ಟು ಮಂದಿ ಸಾಹಿತಿಗಳು. ಕರ್ನಾಟಕ ದಲಿತ ಸಾಹಿತ್ಯ ಕುರಿತ ಅಧ್ಯಯನಗಳು ದಲಿತ ಸಾಹಿತ್ಯ ಸೃಷ್ಟಿಕ್ರಿಯೆಯಲ್ಲಿ ಪ್ರೇರಣೆ - ಪರಿಣಾಮಗಳನ್ನು ಬೀರಿದ್ದು, ಸಾಮಾಜಿಕ ಆರ್ಥಿಕ ಮತ್ತು ರಾಜಕೀಯ ಸ್ಥಿತ್ಯಂತರಗಳನ್ನು ವಿಶದವಾಗಿ ತಿಳಿಸುತ್ತವೆ. ಆಧುನಿಕ ಶಿಕ್ಷಣ ದಲಿತರಲ್ಲಿ ಆತ್ಮವಿಶ್ವಾಸ ಮೂಡಿಸಿದಂತೆಯೇ ವೈಚಾರಿಕವಾಗಿಯೂ ಬೆಳೆಯುವಂತೆ ಪ್ರೇರೇಪಿಸಿತು. ಇದರೊಡನೆ ಅಂಬೇಡ್ಕರ್ ಚಳವಳಿಯ ಹಿನ್ನೆಲೆಯಲ್ಲಿ ಅಂಬೇಡ್ಕರ್ ಸಾಹಿತ್ಯದ ವ್ಯಾಪಕ ಅಧ್ಯಯನ ಹಾಗೂ ಮುಕ್ತ ಚಿಂತನೆಗಳು ದಲಿತ ಸಾಹಿತ್ಯ ನಿರ್ಮಾಣದಲ್ಲಿ ಹೊಸ ಆಯಾಮಗಳನ್ನು ಸೃಜಿಸಿಕೊಟ್ಟವು.

ಮರಾಠಾ ವಿದ್ವಾಂಸರು ಭಾವಿಸುವಂತೆ, 'ಡಾ. ಅಂಬೇಡ್ಕರ್ ದಲಿತ ಸಾಹಿತ್ಯದ ತಂದೆ' (ಡಾಂಗ್ಲೆ : ೧೯೯೨ : ೨೩೭). ಈ ಹಿನ್ನೆಲೆಯಲ್ಲಿ, ಅಂಬೇಡ್ಕರ್ ಸಾಹಿತ್ಯಾಧ್ಯಯನವೆಂದರೆ ದಲಿತ ಸಾಹಿತ್ಯಾಧ್ಯಯನವೇ ಆಗುತ್ತದೆ. ಇಂಥಾ ಸಾಹಿತ್ಯ ಕೇವಲ 'ಸೃಷ್ಟ್ಯಾತ್ಮಕ ಪ್ರತಿಭೆಯ ನೆಲೆಯಲ್ಲಿ ಸೃಷ್ಟಿಗೊಳ್ಳದೆ ಸಾಮಾಜಿಕ ನೆಲೆಯಲ್ಲಿ ಸೃಷ್ಟಿಗೊಳ್ಳುವುದನ್ನು' ಗಮನಿಸಬಹುದು. ಹೀಗಾಗಿ ಸಾಮಾಜಿಕ ಸಂವೇದನೆಯುಳ್ಳ ಸಾಹಿತ್ಯಕ ಅಭಿವ್ಯಕ್ತಿಯಾಗಿ ದಲಿತ ಸಾಹಿತ್ಯ ಹೊರಹೊಮ್ಮಿರುವುದು ಸ್ಪಷ್ಟ. ಈ ನಿಟ್ಟಿನಲ್ಲಿ ಮುಂದುವರೆದು ನೂರಾರು ವರ್ಷಗಳಿಂದ ಅನುಭವಿಸುತ್ತಾ ಬಂದ ನೋವು - ಸಂಕಟ- ಆಕ್ರೋಶಗಳನ್ನು ಹೊರಹಾಕುವ ಸಲುವಾಗಿ ಸಾಹಿತ್ಯ ಮಾಧ್ಯಮದ ಸಮರ್ಥ ಬಳಕೆ ಮಾಡಿಕೊಂಡವರು ದಲಿತ ಬರಹಗಾರರು. ಸಮರ್ಥ ಭಾಷೆ, ನವಚಿಂತನೆಗಳನ್ನು ಅಳವಡಿಸಿಕೊಂಡು ಒಂದು ಬಗೆಯಲ್ಲಿ ಪ್ರಯೋಗಾತ್ಮಕ ಬರಹಗಳ ಮೂಲಕ ದಲಿತ ಹೋರಾಟಗಳಿಗೆ ಹೊಸದಿಕ್ಕು ತೋರಿದುದನ್ನು ಕಾಣಬಹುದು. ಅಲ್ಲದೆ, ಮುಖ್ಯವಾಗಿ, ವರ್ಣವಿದ್ವೇಷಕ್ಕೆ ತುತ್ತಾಗಿರುವ ಕರಿಯರ ಬಂಧ ವಿಮೋಚನೆಗಾಗಿ ದಕ್ಷಿಣ ಆಫ್ರಿಕಾದಲ್ಲಿ ನೆಲ್ಸನ್ ಮಂಡೇಲರಂಥಾ ಒಬ್ಬ ಕರಿಯರ ಮಹಾನ್ ನಾಯಕನ ಆಗಮನ ಜಗತ್ತಿನ ಚರಿತ್ರೆಯಲ್ಲಿ ಎಷ್ಟೊಂದು ಮಹತ್ವದ ಘಟನೆಯಾಗಿದೆಯೋ, ಅಷ್ಟೇ ಅಥವಾ ಅದಕ್ಕಿಂತಲೂ ಮಹತ್ವದ ಘಟನೆಯೆಂದರೆ, ಭಾರತೀಯ ಅಸ್ಪೃಶ್ಯರು ಅಕ್ಷರಗಳ ಮೂಲಕ ತಮ್ಮ ಆತ್ಮಜಾಗೃತಿಯನ್ನು ಕಂಡುಕೊಳ್ಳ ತೊಡಗಿದುದೆಂಬ ವಿವರಣೆ (ಜವರಯ್ಯ : ೧೯೯೪) ಈ ಸಂದರ್ಭವನ್ನು ಇನ್ನಷ್ಟು ಸಮರ್ಥಿಸುತ್ತದೆನ್ನಬಹುದು.

'ದಲಿತ ಸಾಹಿತ್ಯ'ವೆಂಬ ಪಾರಿಭಾಷಿಕದ ಬಳಕೆಗೆ ಸಂಬಂಧಿಸಿದಂತೆ ಇರುವ ಚಾರಿತ್ರಿಕ ಹಿನ್ನೆಲೆಯನ್ನೂ ಗಮನಿಸಬಹುದು. ವಾಸ್ತವದಲ್ಲಿ, ಈ ಬಗೆಗಿನ ವ್ಯಾಪಕ ಚರ್ಚೆಗೆ ಅವಕಾಶ ಕಲ್ಪಿಸಿಕೊಟ್ಟುದು ೧೯೫೮ರಲ್ಲಿ ಮುಂಬಯಿಯಲ್ಲಿ ಮಹಾರಾಷ್ಟ್ರ ದಲಿತ ಸಾಹಿತ್ಯ ಸಂಘ ಏರ್ಪಡಿಸಿದ ಮೊದಲನೇ ದಲಿತ ಸಾಹಿತ್ಯ ಸಮ್ಮೇಳನ. ರಷ್ಯಾದ ಲೇಖಕರು ಲೆನಿನ್ ಅವರ ಕ್ರಾಂತಿಕಾರಿ ವಿಚಾರಗಳು ವ್ಯಾಪಕವಾಗಿ ಪ್ರಚಾರಗೊಳ್ಳಲು ತಮ್ಮ ಕೃತಿಗಳ ಮೂಲಕ

ಕಾರಣರಾದಂತೆಯೇ, ನಮ್ಮ ಲೇಖಕರು ಡಾ. ಅಂಬೇಡ್ಕರ್‌ರ ವಿಚಾರಧಾರೆಯನ್ನು ಗ್ರಾಮ-ಗ್ರಾಮಗಳಿಗೆ ಹರಡಲು ಪ್ರಯತ್ನಿಸತಕ್ಕದ್ದು; ರಾಜಕೀಯವೆಂಬುದು ವಿರೋಧವನ್ನು ವಿಮುಲಿಸಲು ಇರುವ ಮಾರ್ಗಗಳಲ್ಲಿ ಒಂದು ಮಾತ್ರ; ಎಲ್ಲ ಕಡೆಗಳಿಂದಲೂ ನಾವು ದಾಳಿ ನಡೆಸದೇ ಹೋದರೆ ಸಾವಿರಾರು ವರ್ಷಗಳಿಂದ ನಮ್ಮ ಮೇಲೆ ಅನ್ಯಾಯ ಎಸಗಿದವರ ವಿರುದ್ಧ ನಾವು ಗೆಲ್ಲುವುದು ಅಸಾಧ್ಯ - ಎಂಬಂಥ ಘೋಷಣೆಗಳು ಇಂಥಾ ಸಾಹಿತ್ಯ ಸಮ್ಮೇಳನದ ಅವಶ್ಯಕತೆ ಮತ್ತು ಉದ್ದೇಶಗಳ ಹಿನ್ನೆಲೆಯಲ್ಲಿ ಮೊಳಗಿದಂಥವು. ದಲಿತ ಸಾಹಿತ್ಯದ ನೆಲೆ-ಬೆಲೆಗಳನ್ನು ನಿರ್ಧರಿಸುವ ನಿಟ್ಟಿನಲ್ಲಿ ಈ ಸಮ್ಮೇಳನ ಪ್ರಜ್ಞಾವಂತರಲ್ಲಿ ಪ್ರೇರಣೆ ಮೂಡಿಸಿತು. ಈ ಸಮ್ಮೇಳನ ಕೈಗೊಂಡ ನಿರ್ಣಯಗಳಲ್ಲಿ ೫ ನೆಯದು ಹೀಗಿದೆ: "ದಲಿತರು ಬರೆದ ಹಾಗೂ ದಲಿತರನ್ನು ಕುರಿತು ಇತರರು ಬರೆದ ಮರಾಠೀ ಸಾಹಿತ್ಯವನ್ನು 'ದಲಿತ ಸಾಹಿತ್ಯ'ವೆಂಬ ಪ್ರತ್ಯೇಕ ಅಸ್ತಿತ್ವವುಳ್ಳ ಸಾಹಿತ್ಯವೆಂದು ಒಪ್ಪಿಕೊಳ್ಳುವುದು; ಇದರ ಸಾಂಸ್ಕೃತಿಕ ಮಹತ್ವವನ್ನು ಮನಗಾಣುವುದರೊಡನೆ ವಿಶ್ವವಿದ್ಯಾಲಯಗಳು ಮತ್ತು ಸಾಹಿತ್ಯ ಸಂಘ-ಸಂಸ್ಥೆಗಳು ಈ ಸಾಹಿತ್ಯಕ್ಕೆ ತಕ್ಕ ಸ್ಥಾನ-ಮಾನಗಳನ್ನು ದೊರಕಿಸಿಕೊಡುವುದು" (ಡಾಂಗ್ಲೆ: ೧೯೯೨ : ೨೪೨). ಬುದ್ಧಿಜೀವಿಗಳು ಈ ಕುರಿತು ನಡೆಸಿದ ಚಿಂತನ-ಮಂಥನಗಳು ದಲಿತ ಸಾಹಿತ್ಯದ ಸ್ವರೂಪವನ್ನು ನಿರ್ದಿಷ್ಟಪಡಿಸುವಲ್ಲಿ ಸಹಕಾರಿಯೆನಿಸಿದವು. 'ಮರಾಠ ವಾಡ' ನಿಯತಕಾಲಿಕೆ ತನ್ನ ೧೯೬೯ರ 'ದೀಪಾವಳಿ ಸಂಚಿಕೆ'ಯಲ್ಲಿ 'ದಲಿತ ಸಾಹಿತ್ಯ' ಎಂಬ ಪಾರಿಭಾಷಿಕವನ್ನು ಅಧಿಕೃತವಾಗಿ ಜಾರಿಗೆ ತರುವ ಸಂಬಂಧದಲ್ಲಿ ಹುಟ್ಟುಹಾಕಿದ ಬಿಸಿ ಬಿಸಿ ಚರ್ಚೆಯ ನಂತರ ಇದರ ಬಳಕೆ ಅವಿರತವಾಗಿ ಆಗತೊಡಗಿತು.

ಕನ್ನಡ ದಲಿತ ಸಾಹಿತ್ಯ ಪ್ರೇರಣೆ ಪಡೆದುದು ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಸಾಹಿತ್ಯದಿಂದ ಎಂಬುದನ್ನು ನಿರಾಕರಿಸುವಂತಿಲ್ಲ. ದಲಿತ ಪ್ಯಾಂಥರ್ಸ್ ಸಾಹಿತ್ಯದ ಸೈದ್ಧಾಂತಿಕ ಪ್ರಭಾವ ಬೀರಲು ಹಲವಾರು ಮರಾಠೀ ಲೇಖಕರು, ಕವಿಗಳು, ನಾಟಕಕಾರರು ಕಾರಣಕರ್ತರೆನಿಸಿರುವುದು ಸ್ಪಷ್ಟ. ಮೇಲೆಯೇ ನೋಡಿದಂತೆ, ಮರಾಠೀ ದಲಿತ ಸಾಹಿತ್ಯದ ಹುಟ್ಟಿಗೆ ಡಾ. ಅಂಬೇಡ್ಕರರೇ ಕಾರಣರಾಗಿದ್ದರೂ, ಅದಕ್ಕೆ ಜೀವಸತ್ವವನ್ನಿತ್ತು ಮುನ್ನಡೆಸಿದವರು ದಲಿತ ಸಾಹಿತಿಗಳಿಗೆ ಪ್ರೇರಕಶಕ್ತಿಯೆನಿಸಿದ ಡಾ. ಮನೋಹರ ವಾಂಖೇಡೆ. 'ಯಾರಿಗಾಗಿ ತಾನು ಬರೆಯಬೇಕು ಎಂಬುದು ಸ್ಪಷ್ಟವಾದರೆ, ಹೇಗೆ ಬರೆಯಬೇಕೆಂಬುದು ತಾನಾಗಿಯೇ ತಿಳಿಯುತ್ತದೆ' ಎಂಬ ಸಂದೇಶದೊಡನೆ ದಲಿತರು ಏನು ಬರೆಯಬೇಕು ಮತ್ತು ಹೇಗೆ ಬರೆಯಬೇಕು ಎಂಬುದಕ್ಕೆ ಸೂಕ್ತ ಉತ್ತರ ನೀಡಿದವರು ಈ ವಾಂಖೇಡೆ. ಇವರೇ ಅಲ್ಲದೆ, ಅಂಬೇಡ್ಕರ್‌ರ ಸಮಕಾಲೀನರಾಗಿದ್ದು, ಅವರ ವಿಚಾರಗಳನ್ನು ಜನರಿಗೆ ಮುಟ್ಟಿಸಲು ಶ್ರಮಿಸಿದ ಬನಸೋಡೆ, ಶಾಹೀರ್ ಘೇಗಡೆ, ವಾಮನರಾವ್ ಕರ್ಡಕ, ಸೋನುಲೆ, ಬಾಳಕೃಷ್ಣ ವಾಸನಿಕ, ನೆ. ರಾ. ಶೇಂಡೆ, ಲಖಮಾಪುರಕರ್, ಮಧು ಕೊಸಾರೆ ಮೊದಲಾದವರನ್ನೂ ಪ್ರಸ್ತಾಪಿಸಬೇಕು. ದಲಿತ ಲೇಖಕಿಯರಲ್ಲಿ ಹೀರಾ ಬನ್‌ಸೋಡೆ, ಪ್ರೊ. ಜ್ಯೋತಿ ಲಾಂಜೇವಾರ್, ಊರ್ಮಿಳಾ ಪವಾರ್, ಸುಗಂಧಾ ಶೇಂಡೆ ಮೊದಲಾದವರು ಮುಖ್ಯರು. ಮರಾಠೀ ದಲಿತ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೆಲಸ ಮಾಡಿರುವವರನ್ನು ವಿಮರ್ಶಿಸುವ ಡಾ. ಸರಜೂ ಕಾಟ್ಕರ್, ನೋವು ದಲಿತರ ಮೊದಲ ಅನುಭವವೆನ್ನುವುದನ್ನು,

ನೋವಿಲ್ಲದ ದಲಿತಕಾವ್ಯವಿಲ್ಲವೆಂಬುದನ್ನು ಸೋದಾಹರಣವಾಗಿ ಬಿಂಬಿಸಿರುವುದು ಗಮನಾರ್ಹ (ಕಾಟ್ಕರ್ : ೧೯೯೬).

ದಲಿತ ಸಾಹಿತ್ಯವೆನ್ನುವುದು ಸಮಗ್ರ ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಅದೊಂದು ಯುಗಧರ್ಮದ ಅನಿವಾರ್ಯ ಅಭಿವ್ಯಕ್ತಿ ಎನಿಸಿರುವ ಬಗೆಗೆ ಗಮನ ಸೆಳೆಯುವ ಡಾ. ಮ. ನ. ಜವರಯ್ಯ, ಪ್ರಸ್ತುತ ದಲಿತ ಸಾಹಿತ್ಯದ ನೆಲೆಯಲ್ಲಿ ನಿಂತು ಹತ್ತು ಶತಮಾನಗಳ ಕನ್ನಡ ಸಾಹಿತ್ಯ ಸಮಸ್ತವನ್ನು ಅವಲೋಕಿಸಿದಾಗ ಸಂಪೂರ್ಣವಾಗಿ ಭಿನ್ನವೆನಿಸುವ ದಲಿತರ ಜೀವನಾನುಭವವನ್ನೂ ತಜ್ಜನಿತ ಮೌಲ್ಯಗಳನ್ನೂ ದಲಿತ ಸಾಹಿತ್ಯದಲ್ಲಿ ಕಾಣಬಹುದೆನ್ನುತ್ತಾರೆ (ಜವರಯ್ಯ : ೧೯೯೪ : ೨೧೮). ಅವರು ಗುರುತಿಸುವ 'ದಲಿತ ಬಂಡಾಯ' ಸಾಹಿತ್ಯದಲ್ಲಿಯ ಪ್ರತಿಭಟನೆ ಮಾರ್ಕ್ಸ್‌ವಾದ ಅಥವಾ ಸಮತಾವಾದ ಮತ್ತು ವಿಚಾರವಾದಗಳ ಮೂಲಕ ವ್ಯಕ್ತವಾಗಿರುವಂತೆ ತೋರುತ್ತದೆಂಬುದನ್ನು ವ್ಯಕ್ತಪಡಿಸುತ್ತಾರೆ. ಮರಾಠೀ ದಲಿತ ಸಾಹಿತ್ಯದಂತೆಯೇ, ಕನ್ನಡ ದಲಿತ ಸಾಹಿತ್ಯ, ಅಂದರೆ ಕಾವ್ಯ, ನಾಟಕ, ಕತೆ ಮತ್ತು ಕಾದಂಬರಿಗಳಲ್ಲಿ ದಲಿತರ ಬಂಡಾಯ ಮನೋಧರ್ಮದಿಂದ ಉದಿಸಿದ ಪ್ರತಿಭಟನೆ ವ್ಯಕ್ತಗೊಂಡ ಪರಿಯನ್ನು ಕಾಣಬಹುದೆನ್ನುವ ಮಾತು ನಿಜ.

ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಸಾಹಿತ್ಯ ಪ್ರಭಾವ ಬೀರಿದಂತೆಯೇ, ೬೦ ರ ದಶಕದಲ್ಲಿ ಕಾಣಿಸಿಕೊಂಡ ಆಂಧ್ರದ ದಿಗಂಬರಕಾವ್ಯದ ಪ್ರಭಾವವೂ ಕನ್ನಡ ದಲಿತ ಸಾಹಿತ್ಯದ ಮೇಲೆ ಆದುದು ಸಹಜ. ಏಕೆಂದರೆ, ಆಂಧ್ರ ಶಿಷ್ಟ ಸಮಾಜದ ತಿರಸ್ಕಾರಕ್ಕೆ ಹಾಗೂ ಅವಹೇಳನಕ್ಕೆ ಗುರಿಯಾದ ದಿಗಂಬರ ಸಾಹಿತ್ಯ ಕೆಳವರ್ಗದವರ ಅಭಿವ್ಯಕ್ತಿ ಸಾಮರ್ಥ್ಯವನ್ನು ಸಮರ್ಥವಾಗಿ ತೋರಿಸಿಕೊಟ್ಟಂಥದು. ಆಂಧ್ರದ ಉಗ್ರಗಾಮಿ ಚಳವಳಿಯನ್ನು ದಿಗಂಬರ ಕವಿತಾ ಎಂದು ಕರೆಯಲಾಯಿತಲ್ಲದೆ, ಇದು ಭಾರತೀಯ ಸಂಸ್ಕೃತಿಯನ್ನು ಸಂಪೂರ್ಣವಾಗಿ ಹೀಯಾಳಿಸುವುದರೊಡನೆ ದಲಿತರ, ಶೋಷಿತರ ನೋವಿನ ನೆಲೆಗಳನ್ನು ಗುರುತಿಸುವಲ್ಲಿ ಯಶಸ್ವಿ ಪ್ರಯತ್ನವೆನಿಸಿತು. ಇತರ ವಾಮಪಂಥೀಯ ಚಳವಳಿಯ ತೆರನಲ್ಲಿ ಇದು ಸಹಾ ಸಾಮಾಜಿಕ ಮತ್ತು ರಾಜಕೀಯ ಸಮಸ್ಯೆಗಳನ್ನು ಕುರಿತು ಸಾಹಿತ್ಯ ಪ್ರಕಾರದ ಮೂಲಕ ಜಾಗೃತಗೊಳಿಸುವ ಕೆಲಸಕ್ಕೆ ಕೈಹಾಕಿತು. ಭಾರತೀಯ ಸನಾತನ ಸಂಪ್ರದಾಯದ ಬಗೆಗೆ ಈ ಸಾಹಿತ್ಯದಲ್ಲಿ ವ್ಯಕ್ತಪಟ್ಟ ಕಡು ವಿರೋಧವನ್ನು ಗಮನಿಸಿದ ಆಂಧ್ರದ ಮೇಲ್ವರ್ಗದ ಸಾಹಿತ್ಯ ವಿಮರ್ಶಕರು ದಿಗಂಬರ ಸಾಹಿತ್ಯ ಚಳವಳಿಯನ್ನು 'ದ್ವೇಷಮೂಲ ಚಳವಳಿ'ಯೆಂದು ಗುರುತಿಸಲೆತ್ನಿಸಿದರು. ಅಲ್ಲದೆ, ದಿಗಂಬರ ಕಾವ್ಯ, ತಿರುಗು ಬಡುಕವುಲು ಪೈಗಂಬರ ಕವಿಗಳು ಆ ನಂತರ ವಿಪ್ಲವ ರಚಯಿತಲು ಸಂಘಂ (ವಿರಸಂ), ಅಂದರೆ ಕ್ರಾಂತಿಕಾರಿ ಲೇಖಕರ ಸಂಘದ ಸಂಘಟನೆಯಲ್ಲಿ ಒಂದಾದುದನ್ನು, ಇವರ ಪ್ರಭಾವ ಕನ್ನಡ ದಲಿತ-ಬಂಡಾಯ ಸಾಹಿತ್ಯ ಚಳವಳಿಯ ಮೇಲೆ ಹೆಚ್ಚಾಗಿ ಆದುದನ್ನು ಗುರುತಿಸಲಾಗುತ್ತದೆ. ಹಾಗೆಯೇ, ಯಾವ ದೃಷ್ಟಿಯಿಂದ ನೋಡಿದರೂ ಮರಾಠೀ ದಲಿತ ಸಾಹಿತ್ಯ ಮರಾಠೀ ಸಾಂಪ್ರದಾಯಿಕ ಸಾಹಿತ್ಯಕ್ಕೆ ಸವಾಲಾಗಿ ನಿಲ್ಲುವ ಸತ್ವದಿಂದ ಕೂಡಿದೆಯೆನ್ನುವುದು ಗಮನಾರ್ಹ. ಒಟ್ಟಿನಲ್ಲಿ, ಕನ್ನಡ ದಲಿತ ಸಾಹಿತ್ಯದ ಮೇಲೆ ಮರಾಠೀ ದಲಿತ ಸಾಹಿತ್ಯದ ಪ್ರಭಾವ ಹೆಚ್ಚಾಗಿರುವಂತೆಯೇ, ತೆಲುಗು ದಲಿತ ಸಾಹಿತ್ಯದ ಪ್ರಭಾವವೂ ಇರುವುದು ನಿಚ್ಚಳವಾಗಿ ಕಾಣಿಸುತ್ತದೆ.

ಕರ್ನಾಟಕ ದಲಿತ ಸಂಘರ್ಷ ಸಮಿತಿಯಲ್ಲಿದ್ದವರಿಗೆ ಹೋರಾಟ ಮೊದಲಾಗಿ, ಬರಹ ಎರಡನೆಯದೆಂಬುದು ಈಗಾಗಲೇ ಸ್ಪಷ್ಟಪಟ್ಟಿರುವ ಅಂಶ. ಇದನ್ನು ದಲಿತರ ಮೊದಲನೇ ಸಾಂಸ್ಕೃತಿಕ ವೇದಿಕೆಯೆಂದು ಕರೆದಿರುವಲ್ಲಿ ಔಚಿತ್ಯವಿದೆ. ಹೋರಾಟದತ್ತಲೇ ಬರೆಯತೊಡಗಿದ ದಲಿತ ಬರಹಗಾರರು ಈ ಸಂಘಟನೆ ಮೂಲಕ ದಲಿತರ ಮೇಲೆ ಸೈದ್ಧಾಂತಿಕವಾದ ಹಾಗೂ ವೈಚಾರಿಕವಾದ ಪ್ರಭಾವ ಬೀರತೊಡಗಿದರು. ಸಾಹಿತ್ಯದ ಚಟುವಟಿಕೆಗಳ ಮೂಲಕ ದಲಿತ ವಿಮೋಚನೆಯನ್ನು ಗುರಿಯಾಗಿಸಿಕೊಂಡ 'ಮಧ್ಯಮ ವರ್ಗದ ದಲಿತ ವಿದ್ಯಾವಂತರು' ದಲಿತ ಸಂಘಟನೆಯ ತೀವ್ರತೆಗಾಗಿ ಸಾಂಸ್ಕೃತಿಕ ಚಳವಳಿಯನ್ನು ಹುಟ್ಟು ಹಾಕಿದ್ದು ಪರಿಗಣಿಸಲರ್ಹವಾದ ಪ್ರಮುಖ ಅಂಶ. ಏಕೆಂದರೆ, ಡಾ. ಡಿ. ಆರ್. ನಾಗರಾಜ್ ವ್ಯಾಖ್ಯಾನಿಸುವಂತೆ, ಇಂದು ದಲಿತ ಚಳವಳಿ ಸಾಂಸ್ಕೃತಿಕ ಆಕ್ರೋಶದ ಅಭಿವ್ಯಕ್ತಿಯಾಗಿ ತನ್ನನ್ನು ತಾನು ಮಾರ್ಪಡಿಸಿಕೊಂಡಿದೆ (ವೀರಭದ್ರಪ್ಪ, ಬಾಸ್ಕಿ: ೧೯೯೮ : ೨೩೦). ದಲಿತ ಚಳವಳಿ ನಾಟಕ, ಹಾಡು ಮುಂತಾದ ಮಾಧ್ಯಮಗಳ ಮೂಲಕ ಪ್ರಚಾರ ಮಾಡುವುದಕ್ಕೆ ತೋರಿದ ಉತ್ಸಾಹ ಸಾಹಿತ್ಯ ಕ್ಷೇತ್ರದಲ್ಲಿ ಜನಪರವಾದ ಮನೋಭಾವದ ವಿಕಾಸಕ್ಕೆ ಕಾರಣವಾಯಿತು; ದಲಿತ ಚಳವಳಿ ಬರಹದ ರೀತಿಯಲ್ಲಿ ಆಚರಣೆಗೂ ಜೀವನಕ್ಕೂ ಅನ್ವಯಿಸಿಕೊಳ್ಳುತ್ತಾ ಬಂದಿದೆಯೆಂಬ ಅಭಿಪ್ರಾಯವೂ (ಚಂದಾಳ : ೧೯೯೨ : ೧೦೩) ಇದೇ ಮಾದರಿಯದು. ವಾಸ್ತವದಲ್ಲಿ, ೧೯೭೯ರಲ್ಲಿ ಅಸ್ತಿತ್ವಕ್ಕೆ ಬಂದ ದಲಿತ ಕಲಾಮಂಡಳಿ ಇಂಥದೇ ಉದ್ದೇಶಕ್ಕಾಗಿ ಹುಟ್ಟಿಕೊಂಡಂಥದು. ದಲಿತ ಸಾಂಸ್ಕೃತಿಕ ಚಳವಳಿ ಸಾಮಾಜಿಕ ಕ್ರಾಂತಿಯನ್ನು ತೀವ್ರಗೊಳಿಸುವುದೆಂಬ ನಂಬಿಕೆ ಇದರಲ್ಲಿದೆ. ದಸಂಸ ಸಮರಶೀಲತೆ ಪಡೆದು ಮುನ್ನುಗ್ಗುವಂತೆ ಮಾಡುವಲ್ಲಿ ಈ ಕಲಾಮಂಡಳಿ ಪರಿಣಾಮಕಾರಿಯಾಗಿ ಕೆಲಸ ಮಾಡಿದುದು ನಿಜ. ಕರ್ನಲ್ ನಾರಾಯಣಸ್ವಾಮಿ, ಮುನಿಸ್ವಾಮಿ, ಪಿಚ್ಚಳ್ಳಿ ಶ್ರೀನಿವಾಸ್, ಬಾನಂದೂರು ಕೆಂಪಯ್ಯ, ಮುನಿಯಲ್ಲಪ್ಪ, ಜನಾರ್ಧನ್, ಆರ್. ಮಾನಸಯ್ಯರಂಥಾ ನೂರಾರು ಕಲಾವಿದರು ಈ ಚಳವಳಿ ಜನಪರವಾಗಲು ಕಾರಣರೆನಿಸಿದರು.

'ದಲಿತ ಬರಹಗಾರರ ಮತ್ತು ಕಲಾವಿದರ ಒಕ್ಕೂಟ' ರಚನೆಯಾದುದು ಭದ್ರಾವತಿಯಲ್ಲಿ - ೧೯೭೬ ಡಿಸೆಂಬರ್‌ನಲ್ಲಿ ನಡೆದ ದಲಿತ ಲೇಖಕರ ಮೊದಲನೇ ಸಮ್ಮೇಳನದಲ್ಲಿ. ಇಲ್ಲಿ ಸಹಜವಾಗಿಯೇ ಒತ್ತು ದೊರೆತುದು ದಲಿತ ಸಂಸ್ಕೃತಿಯ ಒಳನೋಟಗಳನ್ನು ನೀಡಬಲ್ಲ ಕೃತಿರಚನೆಗೆ. ೧೯೮೩ ಡಿಸೆಂಬರ್‌ನಲ್ಲಿ ಧಾರವಾಡದಲ್ಲಿ ನಡೆದ ಎರಡು ದಿವಸಗಳ ಸಮ್ಮೇಳನ ದಲಿತ ಸಾಹಿತ್ಯ ಚಳವಳಿಗೆ ನಿರ್ದಿಷ್ಟ ಸೈದ್ಧಾಂತಿಕ ಗತಿ ನೀಡುವಲ್ಲಿ ಯಶಸ್ವಿಯಾಯಿತು. ಅಲ್ಲದೆ, ದಲಿತ ಚಳವಳಿ ಸಾಹಿತ್ಯ ಚಳವಳಿ ಯಾಗಿಯೂ ಬೆಳೆಯಲು ಈ ಸಮ್ಮೇಳನ ಇನ್ನಷ್ಟು ನೆರವಾಯಿತು. ಈ ವೇದಿಕೆ ಏರ್ಪಡಿಸಿದ ಈ ಕಾರ್ಯಕ್ರಮದ ಹಿನ್ನೆಲೆಯಲ್ಲಿ ದಸಂಸದ ಪಾತ್ರ ಇದ್ದುದು ಸ್ಪಷ್ಟ. ಈ ಸಮ್ಮೇಳನ ರೂಪಿಸಿದ ಕಾರ್ಯಕ್ರಮಗಳೆಂದರೆ, ದಲಿತ ಸಾಹಿತ್ಯದ ಸಮಸ್ಯೆಗಳನ್ನು ಕುರಿತು ವಿಚಾರ ಸಂಕಿರಣ ಏರ್ಪಡಿಸುವುದು; ಕವಿ ಸಮ್ಮೇಳನಗಳನ್ನು ಸಂಘಟಿಸುವುದು; ಯುವ ಸಾಹಿತಿ ಕಲಾವಿದರನ್ನು ತರಬೇತಿಗೊಳಿಸಲು ಶಿಬಿರಗಳನ್ನು ಏರ್ಪಡಿಸುವುದು ಹಾಗೂ ದಲಿತ ಲೇಖಕರ ಕೃತಿಗಳನ್ನು ಪ್ರಕಟಿಸುವುದು. ಈ ಸಮ್ಮೇಳನದೊಡನೆ ಪ್ರಸ್ತಾಪಿಸಲಾದ ಇಂಥವೇ ಪ್ರಯತ್ನಗಳಲ್ಲಿ,

ಅದೇ ವರ್ಷ (೧೯೮೩) ಫೆಬ್ರವರಿಯಲ್ಲಿ ಕೋಲಾರದಲ್ಲಿ ನಡೆದ ಅಖಿಲ ಕರ್ನಾಟಕ ವಿದ್ಯಾರ್ಥಿ ಸಮ್ಮೇಳನವೂ ಒಂದು. ಇದು ಯಶಸ್ವಿಯಾದುದು ಮಾತ್ರವಲ್ಲ, ದಲಿತ ವಿದ್ಯಾರ್ಥಿ ಒಕ್ಕೂಟ ತನ್ನದೇ ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ಅವಕಾಶವಾಯಿತು.

ದಲಿತ ಚಳವಳಿಯ ಆರಂಭದಿಂದಲೂ ಅದರಲ್ಲಿ ತೊಡಗಿಕೊಂಡು ಪರಿಣಾಮಕಾರಿ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ದಲಿತ ವಿದ್ಯಾರ್ಥಿ ಒಕ್ಕೂಟದ ಪಾತ್ರವೂ ಹಿರಿದು. ೧೯೮೦ರ ವೇಳೆಗೆ ಸುಮಾರು ೨೦,೦೦೦ ವಿದ್ಯಾರ್ಥಿಗಳು ದಲಿತ ಚಳವಳಿಯಲ್ಲಿ ನೇರವಾಗಿ ಭಾಗವಹಿಸಿದ್ದರೆಂಬುದೇ ದಸಂಸದೊಡನೆ ಈ ವಿದ್ಯಾರ್ಥಿ ಒಕ್ಕೂಟ ಇರಿಸಿಕೊಂಡಿದ್ದ ಸಂಬಂಧಕ್ಕೆ ಉತ್ತಮ ಉದಾಹರಣೆ. ದಲಿತರ ಸಮಸ್ಯೆಗಳಿಗೆ ಸಂಬಂಧಿಸಿದವರಿಂದ ಪರಿಹಾರ ಕೊಡಿಸುವುದು, ದೌರ್ಜನ್ಯಕ್ಕೊಳಗಾದವರ ಪರವಾಗಿ ನಿಲ್ಲುವುದು, ಸರಳ ವಿವಾಹ ಕಾರ್ಯಕ್ರಮ ಏರ್ಪಡಿಸುವುದು, ದಲಿತ ವಿದ್ಯಾರ್ಥಿನಿಲಯಗಳು ಹಾಗೂ ವಿದ್ಯಾರ್ಥಿವೇತನಗಳನ್ನು ಹೆಚ್ಚಿಸುವುದು - ಇಂಥಾ ಹಲವಾರು ಕಾರ್ಯಕ್ರಮಗಳನ್ನು ಈ ವಿದ್ಯಾರ್ಥಿ ಒಕ್ಕೂಟ ಕೈಗೆತ್ತಿಕೊಂಡಿತು. ಗಂಗಾರಾಂ ಚಾಂಡಾಳರು ಭಾವಿಸುವಂತೆ, ನಿರುದ್ಯೋಗದ ಆತಂಕ ದಲಿತ ವಿದ್ಯಾರ್ಥಿಗಳನ್ನು ದಟ್ಟವಾಗಿ ಆವರಿಸಿಕೊಳ್ಳಲಿದೆ. ಕಾರಣ ತಾಂತ್ರಿಕ ಮತ್ತು ವೃತ್ತಿಪರ ಶಿಕ್ಷಣದಲ್ಲಿ ಪ್ರಾತಿನಿಧ್ಯ ಕಡಿಮೆ ಇದ್ದು ಉಳಿದಂತೆ ಪದವಿಗಳನ್ನು ಪಡೆದವರು ಅಧಿಕವಾಗಿದ್ದಾರೆ. ಈಗಾಗಲೇ ಇರುವ ದಲಿತ ನಿರುದ್ಯೋಗಿಗಳಿಗೆ ಸರಿಯಾದ ಭರ್ತಿ ಮಾಡುವಿಕೆ ರೋಸ್ಟರ್ ನಿಯಮಾವಳಿ ಮಾಡದಿರುವುದು, ಅರ್ಹ ಅಭ್ಯರ್ಥಿಗಳು ಅನುಭವದೊಂದಿಗೆ ಲಭ್ಯವಿಲ್ಲವೆಂದು ಇತರರಿಗೆ ತುಂಬುವುದು ಯಾವುದೇ ಅಡೆತಡೆ ಇಲ್ಲದೆ ನಡೆಯುತ್ತಿದೆ. ಆದ್ದರಿಂದ ವಿದ್ಯಾರ್ಥಿ ಒಕ್ಕೂಟದ ಮೇಲೆ ಹಿಂದಿಗಿಂತಲೂ ಹೆಚ್ಚಿನ ಜವಾಬ್ದಾರಿ ಬಿದ್ದಿದೆ (ಚಾಂಡಾಳ : ೧೯೯೨ : ೯೬). ದಲಿತ ವಿದ್ಯಾರ್ಥಿ ಒಕ್ಕೂಟ ೧೯೮೩ ರಲ್ಲಿ ಪ್ರಕಟಿಸಿದ ತನ್ನ ಪ್ರಣಾಳಿಕೆ ಮತ್ತು ಸಂವಿಧಾನದಲ್ಲಿ ಇದನ್ನೇ ಹೀಗೆ ಹೇಳಿದೆ : "ಶಿಕ್ಷಣವು ಮೇಲ್ಜಾತಿಯ ಗುತ್ತಿಗೆಯಾಗಿದೆ. ದಲಿತರ ಬದುಕಿಗೆ ಕಿಂಚಿತ್ತೂ ಸಂಬಂಧಿಸಿಲ್ಲ. ನಾಡಿನ ಉದ್ದಕ್ಕೂ ಬಾಬಾಸಾಹೇಬ ಅಂಬೇಡ್ಕರ್ ಚಿಂತನೆಗಳಿಂದ ಸ್ಫೂರ್ತಿಗೊಂಡು ವಿಮೋಚನೆಗಾಗಿ ಮುನ್ನಡೆಯುತ್ತಿದೆ. ಹಸಿವು, ಅಸ್ಪೃಶ್ಯತೆಗಳಿಂದ ವಿಮೋಚನೆಗೆ ದಲಿತ ವಿದ್ಯಾರ್ಥಿಗಳು ಸಂಘಟಿತರಾಗಿ ಆಶಾಕಿರಣವಾಗಿ ಮೂಡೋಣ."

ದಲಿತ ಮಹಿಳಾ ಒಕ್ಕೂಟ ಕುರಿತು ಇಲ್ಲಿಯೇ ಹೇಳಬೇಕು. ೧೯೮೩ರಲ್ಲಿ ನಡೆದ ಈ ಒಕ್ಕೂಟದ ಮೊದಲ ತರಬೇತಿ ಶಿಬಿರದಲ್ಲಿ ದಲಿತ ಚಳವಳಿಗೆ ಮಹಿಳೆಯರು ತೋರಿದ ಬೆಂಬಲ ಸಾಬೀತಾದಂತಾಯಿತು. ಆಗಲೇ ಮಹಿಳೆಯರ ರಾಜ್ಯ ಸಮಿತಿಯನ್ನೂ ರಚಿಸಲಾಯಿತು. ಈ ಒಕ್ಕೂಟದ ೨ನೇ ಶಿಬಿರ ಏರ್ಪಟ್ಟಿದ್ದು ೧೯೮೯ರಲ್ಲಿ, ರಾಜ್ಯ ಸಂಚಾಲಕಿ ಆರ್. ಭಾರತಿ ರಾಜಣ್ಣ ಮತ್ತು ಸಂಘಟನಾ ಸಂಚಾಲಕಿ ಕೆ. ಗಂಗಮ್ಮ ಕೆಂಪಯ್ಯ ಅವರ ಸಂಚಾಲಕತ್ವದಲ್ಲಿ. ಹೆಣ್ಣು ಖಾಸಗಿ ಆಸ್ತಿ ಎಂಬ ಕಲ್ಪನೆಯ ಕೆಡುಕುಗಳಿಂದ ದಲಿತ ಮಹಿಳೆಯರು ದೂರ ಉಳಿಯುವಂತಾಗಲು ಈ ಶಿಬಿರಗಳು ಪ್ರಭಾವ ಬೀರಿದುವೆನ್ನುವುದು ಗಮನಾರ್ಹ. ಈ ಒಕ್ಕೂಟದ ೨ನೇ ಶಿಬಿರದಲ್ಲಿ ಕೈಗೊಂಡ ನಿರ್ಣಯಗಳೆಂದರೆ, ಜನಸಾಮಾನ್ಯರ ಮೇಲೆ ಪರಿಣಾಮ ಬೀರಿ ಅವರ ಜೀವಕ್ಕೆ ಮಾರಕವಾಗುತ್ತಿರುವ ಹೆಂಡವನ್ನು ನಿಲ್ಲಿಸಿ ದಲಿತ ಮಕ್ಕಳ ಅಭಿವೃದ್ಧಿಗಾಗಿ ಮೋಬಳಿಗೊಂದು

ವಸತಿಶಾಲೆ ಮಂಜೂರು ಮಾಡಬೇಕು: ದಲಿತ ಮಹಿಳೆಯರ ಆರ್ಥಿಕ ಅಭಿವೃದ್ಧಿಗಾಗಿ ಗೃಹಕೈಗಾರಿಕೆಗಳನ್ನು ತೆರೆಯಲು ವಿಶೇಷ ಆರ್ಥಿಕ ಯೋಜನೆ ಮಾಡಿ ಪರಿಶಿಷ್ಟ ಜಾತಿ ವರ್ಗದ ಆರ್ಥಿಕ ಅಭಿವೃದ್ಧಿ ಇಲಾಖೆ ಮೂಲಕ ಹೆಚ್ಚು ಹಣ ತೊಡಗಿಸಬೇಕು; ದೇವದಾಸಿ ಪದ್ಧತಿ, ಬೆತ್ತಲೆಸೇವೆಗಳ ನಿರ್ಮೂಲನೆಗಾಗಿ ಪರಿಣಾಮಕಾರಿ ಕಾರ್ಯಗಳನ್ನು ರೂಪಿಸಿ, ದೇವದಾಸಿ ಮಕ್ಕಳಿಗೆ ವಿಶೇಷ ವಸತಿಶಾಲೆಗಳನ್ನು ರಚಿಸಬೇಕು: ದಲಿತರ ಮೇಲೆ ನಡೆಯುತ್ತಿರುವ ಕೊಲೆ, ಅತ್ಯಾಚಾರ, ಸಾಮಾಜಿಕ ಬಹಿಷ್ಕಾರ, ದೌರ್ಜನ್ಯಗಳನ್ನು ತಡೆಗಟ್ಟಲು ವಿಶೇಷ ಕೋರ್ಟ್‌ಗಳನ್ನು ಜಾರಿಗೆ ತರಬೇಕು; ಕೃಷಿಕ್ಷೇತ್ರದ ಕಾರ್ಮಿಕರಿಗೆ ಕೂಲಿ ಹೆಚ್ಚಿಸಬೇಕು. ಮಹಿಳಾ ಮತ್ತು ಪುರುಷ ಕಾರ್ಮಿಕರಿಗೆ ಸಮಾನ ವೇತನ ಜಾರಿಗೊಳಿಸಬೇಕು (ಚಂಡಾಳ : ೧೯೯೨ : ೯೬-೯೭).

ಹಾಗೆಯೇ, ೧೯೮೮ ನವೆಂಬರ್‌ನಲ್ಲಿ ಹಾಸನದಲ್ಲಿ ಏರ್ಪಟ್ಟ ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಮೊದಲನೇ ರಾಜ್ಯ ಸಮ್ಮೇಳನದಲ್ಲಿ ಮಂಡಿಸಿದ ಘೋಷಣೆಗಳನ್ನು ಇಲ್ಲಿ ಪ್ರಸ್ತಾಪಿಸಬಹುದು. ದಲಿತ ಚಳವಳಿಯನ್ನು ಸೈದ್ಧಾಂತಿಕ ನೆಲೆಯಲ್ಲಿ ಇನ್ನಷ್ಟು ಗಟ್ಟಿಗೊಳಿಸುವ ನಿಟ್ಟಿನಲ್ಲಿ ದಸಂಸ ಹೊಂದಿದ್ದ ಖಚಿತ ದೃಷ್ಟಿ-ಧೋರಣೆಗಳನ್ನು ಈ ಘೋಷಣೆಗಳು ಚೆನ್ನಾಗಿ ಸಮರ್ಥಿಸುತ್ತವೆ. ಈ ಘೋಷಣೆಗಳೆಂದರೆ, ೧. ನಮ್ಮ ದೇಶದಲ್ಲಿ ಬಹುಸಂಖ್ಯಾತ ಜನರು ಅದರಲ್ಲೂ ಪ್ರಮುಖವಾಗಿ ಅಸ್ಪೃಶ್ಯರು ಬೆವರು ಸುರಿಸಿ ದುಡಿಯುತ್ತಿದ್ದರೂ ಬಡವರಾಗಿಯೇ ಉಳಿದಿದ್ದಾರೆ. ಸಂಪತ್ತನ್ನು ಸೃಷ್ಟಿಸುತ್ತಿದ್ದರೂ ನಿರ್ಗತಿಕರಾಗಿ ಬದುಕುತ್ತಿದ್ದಾರೆ. ಈ ವಿಪರ್ಯಾಸವನ್ನು ಕೊನೆಗೊಳಿಸಲು ದೇಶದಲ್ಲಿನ ಎಲ್ಲಾ ಉತ್ಪಾದನಾ ಸಾಧನಗಳನ್ನು ರಾಷ್ಟ್ರೀಕರಿಸಬೇಕು; ೨. ದೇಶೀಯ ಬಂಡವಾಳಶಾಹಿಗಳು ಹಾಗೂ ಭೂಮಾಲೀಕರು ಸಾಮ್ರಾಜ್ಯಶಾಹಿಗಳೊಂದಿಗೆ ಕೈ ಜೋಡಿಸುವುದು ಸ್ಪಷ್ಟ. ಇದೇ ಸಾಮ್ರಾಜ್ಯಶಾಹಿಗಳೇ ಭಾರತವನ್ನೊಳಗೊಂಡಂತೆ ತೃತೀಯ ಜಗತ್ತಿನ ಎಲ್ಲಾ ದೇಶಗಳಲ್ಲೂ ಇರುವ ಬಡತನ, ನಿರುದ್ಯೋಗ, ಅನಕ್ಷರತೆ ಮತ್ತು ವಸಾಹತುಶಾಹಿ ಆಡಳಿತಕ್ಕೆ ಕಾರಣವಾದ್ದರಿಂದ ಸಾಮ್ರಾಜ್ಯಶಾಹಿ ಶಕ್ತಿಯನ್ನು ನಮ್ಮ ಶತ್ರುವೆಂದು ಪರಿಗಣಿಸುತ್ತೇವೆ. ತೃತೀಯ ದಕ್ಷಿಣ ಆಫ್ರಿಕಾ, ಲ್ಯಾಟಿನ್ ಅಮೆರಿಕಾ ಮುಂತಾದ ದಮನಕ್ಕೊಳಗಾದ ದೇಶಗಳನ್ನು ನಮ್ಮ ಮಿತ್ರರೆಂದು ಗುರುತಿಸಿಕೊಳ್ಳುತ್ತೇವೆ; ೩. ಮತಾಂತರವು ಅಸ್ಪೃಶ್ಯ ಜನರನ್ನು ವಿಮುಕ್ತಿಗೊಳಿಸುತ್ತದೆಂಬುದು ಸುಳ್ಳು ಎಂಬುದು ಐತಿಹಾಸಿಕ ಸತ್ಯ. ಆ ಕಾರಣದಿಂದ ಮತಾಂತರವನ್ನು ನಾವು ಧಿಕ್ಕರಿಸುತ್ತೇವೆ; ೪. ಮೀಸಲಾತಿ ಸೌಲಭ್ಯವು ಬಿ. ಆರ್. ಅಂಬೇಡ್ಕರ್‌ರವರ ಹೋರಾಟದ ಪ್ರತಿಫಲ. ಮೀಸಲಾತಿ ಸೌಲಭ್ಯದ ಮೂಲಕ ವಿದ್ಯಾವಂತರಾದವರೆಲ್ಲರಿಗೂ ಉದ್ಯೋಗ ನೀಡಬೇಕು; ೫. ಸ್ಥಳೀಯ ಭಾಷೆಗಳನ್ನು ಅಭಿವೃದ್ಧಿಪಡಿಸಲು, ಶಿಕ್ಷಣ ನೀಡಲು ನಾವು ಸಹಕಾರ ನೀಡುತ್ತೇವೆ; ೬. ಸಂವಿಧಾನದಲ್ಲಿ ಕಡ್ಡಾಯ ಶಿಕ್ಷಣವು ೧೪ ವರ್ಷ ವಯಸ್ಸಿನವರಿಗೆ ಕಡ್ಡಾಯವಾಗಿ ದೊರೆಯಲು ನಾವು ಹೋರಾಟವೇ ಏಕೈಕ ಮಾರ್ಗವೆಂದು ನಂಬುತ್ತೇವೆ; ೭. ದೇಶದಲ್ಲಿನ ಕೋಮುವಾದಿ ಹಾಗೂ ಜಾತೀವಾದಿ ಶಕ್ತಿಗಳು ಜನರನ್ನು ದಿಕ್ಕು ತಪ್ಪಿಸಿ, ವಿಮೋಚನೆಗೆ ಅಡ್ಡಿಯಾಗಿವೆ. ಆದ್ದರಿಂದ ಕೋಮುವಾದಿ ಹಾಗೂ ಜಾತೀವಾದಿ ಸಂಘಟನೆಗಳನ್ನು ನಿಷೇಧಿಸುವಂತೆ ಒತ್ತಾಯಿಸುತ್ತೇವೆ (ಚಂಡಾಳ : ೧೯೯೨ : ೧೩೫-೧೩೬).

ಇಲ್ಲಿ ಒಂದು ವಿಷಯವಂತೂ ಸ್ಪಷ್ಟ. ಅದು ಏನೆಂದರೆ, ದಸಂಸ ಮತ್ತು ಅದರೊಡನೆ ಸಂಬಂಧವಿರಿಸಿಕೊಂಡ ಹೋರಾಟಗಾರರಲ್ಲಿ ಬಹುಪಾಲು ಮಂದಿ ಬುದ್ಧಿಜೀವಿಗಳು ಹಾಗೂ ಬರಹಗಾರರೇ ಇರುವುದು. ದಸಂಸವು ಬರಹಗಾರರನ್ನು ಹೆಚ್ಚು ಅವಲಂಬಿಸಿದುದನ್ನು ಈ ಮೇಲಿನ ಸಮ್ಮೇಳನಗಳೂ ಸಮರ್ಥಿಸುತ್ತವೆ. ಹಾಗೆಯೇ, ದಲಿತ ಚಳವಳಿಗೆ ಚಾಲನೆ ನೀಡುವಲ್ಲಿ ಪ್ರಮುಖ ಪಾತ್ರವಹಿಸಿದವರು ದಲಿತ ಬರಹಗಾರರೇ ಎನ್ನುವುದರಲ್ಲಿ ಸಂಶಯವೇನೂ ಇಲ್ಲ.

ಕನ್ನಡ ದಲಿತ ಬರಹಗಾರರ ಬಗೆಗೆ ಇಲ್ಲಿ ಒಂದು ನೋಟ ಹರಿಸುವ ಅಗತ್ಯವಿದೆ. ಮೊದಲಿಗೆ, ೧೨ನೇ ಶತಮಾನದ ಮಾದಾರ ಚೆನ್ನಯ್ಯ, ಮಾದಾರ ಧೂಳಯ್ಯ, ಡೋಹರ ಕಕ್ಕಯ್ಯರಿಂದ ಗುರುತಿಸಬಹುದಾದ ದಲಿತ ಸಾಹಿತ್ಯ ಪರಂಪರೆ ೫೦ರ ದಶಕದ ಆಧುನಿಕ ಕನ್ನಡದ 'ಪ್ರಪ್ರಥಮ ದಲಿತ ಲೇಖಕ' ಜಿ. ವೆಂಕಟಯ್ಯ (ಮೊದಲ ಕೃತಿ : ಬುದ್ಧದೇವ, ೧೯೪೪) ಅವರವರೆಗೆ ಬಂದು ಮುಟ್ಟಿದುದನ್ನು ಗಮನಿಸಬಹುದು. ಡಾ. ಅಂಬೇಡ್ಕರ್‌ರನ್ನು ಹತ್ತಿರದಿಂದ ಬಲ್ಲವರಾಗಿದ್ದ ಜಿ. ವೆಂಕಟಯ್ಯನವರಂಥ ಸೃಜನಶೀಲ ದಲಿತ ಸಾಹಿತಿ, 'ಬುದ್ಧದೇವ' ಕೃತಿ ರಚಿಸುವಲ್ಲಿ ಸಮಕಾಲೀನ ದಲಿತ ಸಾಹಿತ್ಯದಿಂದಲೂ ಪ್ರೇರಣೆ ಪಡೆದಿದ್ದರೆನ್ನುವುದು ಮುಖ್ಯವಾದುದು. ಈ ಹಿನ್ನೆಲೆಯಲ್ಲಿ, ಅಂಬೇಡ್ಕರ್‌ರಿಗೆ ಪ್ರಿಯವಾಗಿದ್ದ ಬುದ್ಧನ ಜೀವನಚರಿತ್ರೆಯನ್ನು ವೆಂಕಟಯ್ಯನವರು ಕನ್ನಡದಲ್ಲಿ ಬರೆದು ಪ್ರಕಟಿಸಿದುದು ಸಹಜವೇ. ಇಲ್ಲಿಂದ ಆರಂಭಗೊಂಡ ದಲಿತ ಬರಹಗಾರರ ಸಾಹಿತ್ಯ ರಚನಾ ಕಾರ್ಯ ಏಕೀಕರಣೋತ್ತರ ಅವಧಿಯಲ್ಲಿ, ಮುಖ್ಯವಾಗಿ ೭೦ರ ದಶಕದ ನಂತರ ತೀವ್ರಗೊಂಡು ಇಂದಿನವರೆಗೆ ಅಡೆತಡೆಯಿಲ್ಲದೆ ಹರಿದುಬಂದಿರುವುದನ್ನು ನೋಡುತ್ತಿದ್ದೇವೆ. ಡಾ. ಮನಜ ಅವರು ಗುರುತಿಸುವಂತೆ, ಕನ್ನಡ ನವೋದಯ (ರೋಮ್ಯಾಂಟಿಕ್) ಸಾಹಿತ್ಯ ಟಿ. ಎಸ್. ವೆಂಕಣ್ಣಯ್ಯನವರಿಂದ ಆರಂಭವಾದರೆ, ಆಧುನಿಕ ದಲಿತ ಸಾಹಿತ್ಯ ಜಿ. ವೆಂಕಟಯ್ಯನವರಿಂದ ಆರಂಭವಾಗುತ್ತದೆ (ಜವರಯ್ಯ : ೧೯೯೪ : ೨೦೧).

ಕನ್ನಡ ದಲಿತ ಸಾಹಿತ್ಯದ ಮೂಲ ಪ್ರೇರಣೆಯಾದರೂ ಡಾ. ಅಂಬೇಡ್ಕರ್‌ರ ಬದುಕು - ಸಾಧನೆ - ವಿಚಾರಧಾರೆಗಳೇ ಎಂಬುದು ಸ್ಪಷ್ಟ. ಹಾಗೆಯೇ, ಮಾರ್ಕ್ಸ್‌ವಾದ ಮತ್ತು ವಿಚಾರವಾದಗಳಿಂದಲೂ ಈ ಸಾಹಿತ್ಯ ಪ್ರೇರಣೆಪಡೆದುದನ್ನು ಈಗಾಗಲೇ ಗುರುತಿಸಲಾಗಿದೆ. ದಲಿತ ಸಾಹಿತ್ಯದ ಹಿಂದಿರುವ ಪ್ರೇರಣೆಯ ವಿನ್ಯಾಸ ಕುರಿತು ವಿಶ್ಲೇಷಿಸಲೆತ್ನಿಸುವ ಡಾ. ಬಿ. ಎಂ. ಪುಟ್ಟಯ್ಯ, ದಲಿತರ ಈ ಬರವಣಿಗೆಗಳ ಹಿಂದಿರುವ ಪ್ರಾಥಮಿಕ ಪ್ರೇರಣೆ ಎಂದರೆ ಔಪಚಾರಿಕ ಶಿಕ್ಷಣದಿಂದ ಬಂದ ಒಂದು ರೀತಿಯ ಎಚ್ಚರಿಕೆ (ಅರಿವು, ಜಾಗೃತಿ ಎಂಬ ಅರ್ಥಗಳಲ್ಲಿ)ಯೇ ಆಗಿದೆ; ಅನಂತರ ಇವರು ಓದಿಕೊಂಡ ಕೆಲವು ಬರಹಗಳು, ಬದುಕಿನ ಕರಾಳ ಸಂಗತಿಗಳು, ಹೋರಾಟದ ನೇರ ಅನುಭವಗಳೂ ಬೆನ್ನೆಲುಬಾಗಿ ಬಂದಿವೆ; ಪೆರಿಯಾರ್, ಲೋಹಿಯಾ, ಅಂಬೇಡ್ಕರ್, ಮಾರ್ಕ್ಸ್ ಮತ್ತು ಗಾಂಧಿ - ಇವರ ಪ್ರಭಾವಗಳು ಬೇರೆ ಬೇರೆ ಪ್ರಮಾಣಗಳಲ್ಲಿ, ಬೇರೆ ಬೇರೆ ಸ್ವರೂಪಗಳಲ್ಲಿ ಪ್ರೇರಣೆಯಾಗಿವೆ ಎನ್ನುತ್ತಾರೆ. ಅವರು ಸಮೀಕರಿಸುವಂತೆ, ಕನ್ನಡ ದಲಿತ ಸಾಹಿತ್ಯ ಎಪ್ಪತ್ತರ ದಶಕದ ನಂತರದ ಸೃಷ್ಟಿ. ಎಪ್ಪತ್ತರ ದಶಕದ ಆರ್ಥಿಕ ಪಲ್ಲಟಗಳ, ಚಾರಿತ್ರಿಕ ಬಿಕ್ಕಟ್ಟುಗಳ ಒಡಲಿನಿಂದ ದಲಿತ ಸಾಹಿತ್ಯ ಮೈದಾಳಿದೆ. ದಲಿತ ಸಾಹಿತ್ಯದಲ್ಲಿ ಪ್ರತಿಪಾದಿತವಾಗಿರುವ

ಪ್ರತಿಸಂಸ್ಕೃತಿ ನೆಲೆಗಳಿಗೆ ಸಮಕಾಲೀನ ಒತ್ತಡಗಳಿವೆ. ಸಮಕಾಲೀನ ಒತ್ತಡಗಳಿಗಿರುವ ಸಾಮಾಜಿಕ ವೈರುಧ್ಯಗಳಿಗೆ, ತಾತ್ವಿಕ ಆಳದಲ್ಲಿ ಒಂದು ದೀರ್ಘವಾದ ಮಹಾನ್ ಪರಂಪರೆ ಇದೆ (ಪುಟ್ಟಯ್ಯ : ೧೯೯೭ : ೨೫೧-೫೨, ೨೬೧). ಈ ಥರದ ವಿವರಣೆಗಳು ದಲಿತ ಚಳವಳಿ ಸಂಬಂಧಿ ಸಾಹಿತ್ಯ ಬೆಳವಣಿಗೆಯ ಹಿನ್ನೆಲೆಯಲ್ಲಿ ಅವಶ್ಯ ಪರಿಭಾವಿಸಲರ್ಹವಾದುವೆನ್ನಲಡ್ಡಿಯಿಲ್ಲ.

ದಲಿತ ಚಳವಳಿಗೆ ಉತ್ಸಾಹ ತುಂಬುವ ಕೆಲಸದಲ್ಲಿ ಮುತುವರ್ಜಿಯಿಂದ ಕೆಲಸ ಮಾಡಿದ ದಲಿತ ಬರಹಗಾರರ ಪಟ್ಟಿ ನಿಜಕ್ಕೂ ದೊಡ್ಡದು. ಆದರೆ ದಲಿತ ಸಾಹಿತ್ಯ ಚಳವಳಿಯಲ್ಲಿ ಸಕ್ರಿಯರಾದ ಕೆಲವರನ್ನಾದರೂ ಈ ಮುಂದಿನಂತೆ ಹೆಸರಿಸಬಹುದು : ಜಿ. ವೆಂಕಟಯ್ಯ, ದೇವನೂರು ಮಹಾದೇವ, ಸಿದ್ಧಲಿಂಗಯ್ಯ, ಮ. ನ. ಜವರಯ್ಯ, ಚೆನ್ನಣ್ಣ ವಾಲೀಕಾರ, ಬಿ. ಕೃಷ್ಣಪ್ಪ, ಅರವಿಂದ ಮಾಲಗತ್ತಿ, ವಿ. ಮುನಿವೆಂಕಟಪ್ಪ, ಮುಳ್ಳೂರು ನಾಗರಾಜ, ಗಂಗಾರಾಂ ಚಾಂಡಾಳ, ಇಂದೂಧರ ಹೊನ್ನಾಪುರ, ದೇವಯ್ಯ ಹರವೆ, ಹೆಚ್. ಗೋವಿಂದಯ್ಯ, ಎಸ್. ಗಣೇಶನ್, ಯೋಳುಬಂಡೆಪ್ಪ, ಎಲ್. ಹನುಮಂತಯ್ಯ, ಬಿ. ಚೆನ್ನಸ್ವಾಮಿ, ಶ್ರೀಧರ ಕಲಿವೀರ, ಟಿ. ಎಲ್ಲಪ್ಪ ಬೂತಯ್ಯ, ಬಿ. ಕೃಷ್ಣಮೂರ್ತಿ, ಎಂ. ಗೋಪಿನಾಥ್, ರಾಮದೇವ ರಾಕೆ, ಮೊಗಳ್ಳಿ ಗಣೇಶ್, ಹೆಬ್ಬಾಲೆ ಲಿಂಗರಾಜು, ಎಂ. ಲೋಕೇಶ್, ಕೆ. ರಾಮಯ್ಯ, ಹೆಚ್. ರಾಮಕೃಷ್ಣ, ಹುಲ್ಲುಕೆರೆ ಮಹಾದೇವ, ಚಂದ್ರಕಾಂತ ವಡ್ಡು, ಸತ್ಯಾನಂದ ಪಾತ್ರೋಟ, ಎಂ. ವೆಂಕಟಸ್ವಾಮಿ, ಗುರುರಾಜ ಬೀದಿಕರ್, ಪರಮಶಿವ ನಡುಬೆಟ್ಟ, ಕೆ. ನಾರಾಯಣಸ್ವಾಮಿ, ಕೇಶವ ಧರಣಿ, ಜಿ. ಎಂ. ಪುಟ್ಟಯ್ಯ, ಹಂಪಣ್ಣ ಚಿತ್ರದುರ್ಗ, ನಾಗೇಂದ್ರಪ್ಪ ಅಗಸನಕಟ್ಟೆ, ನಾ. ನಾರಾಯಣಸ್ವಾಮಿ, ಕೆ. ಬಿ. ಸಿದ್ದಯ್ಯ, ಹೊಸೂರು ಮುನಿಶಾಮಪ್ಪ, ಸಿ. ಕೆ. ಮಹೇಶ್, ಜಂಬಣ್ಣ ಅಮರಚಿಂತ, ಶಿವರುದ್ರ ಕಲ್ಲೋಳಿಕರ್, ಬೀರಮಾನಹಳ್ಳಿ ರಾಮಕೃಷ್ಣ, ತೇಜಸ್ವಿ ಕಟ್ಟೀಮನಿ, ಕಗ್ಗೆರೆ ಪ್ರಕಾಶ್, ಜಿ. ಬಸವಂತಪ್ಪ, ಕಕ್ಕಯ್ಯ ಪೋಳ, ಜಿ. ಗೋಪಾಲ್, ಸೋಮಣ್ಣ ಹೊಂಗಳ್ಳಿ, ಮೂಡಲಗೊಲ್ಲಹಳ್ಳಿ ಕೆ. ನರಸಿಂಹಪ್ಪ, ಚಂದ್ರಪ್ರಸಾದ್ ತ್ಯಾಗಿ, ಕಮಲಾ ಹಂಪನಾ, ಸುಕನ್ಯಾ ಮಾರುತಿ, ಬಿ. ಟಿ. ಲಲಿತಾ ನಾಯಕ್, ಬರಗೂರು ರಾಮಚಂದ್ರಪ್ಪ, ಶಂಕರ ಕಟಗಿ ಮುಂತಾದವರು.

ಸೃಜನಶೀಲ ಬರಹಗಾರರಲ್ಲದೆ, ವೈಚಾರಿಕ ಪ್ರಬಂಧಗಳನ್ನು, ಕೃತಿಗಳನ್ನು ಪ್ರಕಟಿಸಿರುವ ಹಲವಾರು ಲೇಖಕರೂ ಈ ಮೇಲಿನ ಪಟ್ಟಿಯಲ್ಲಿದ್ದಾರೆ. ಆದರೆ ದಲಿತ ಚಳವಳಿ ಹಾಗೂ ದಲಿತ ಸಾಹಿತ್ಯ ಚಳವಳಿಗಳ ಬಗೆಗಿನ ವ್ಯಾಖ್ಯಾನ ವಿಮರ್ಶೆಗಳಿಗೇ ಸೀಮಿತರಾಗಿರುವ ಇನ್ನೂ ಕೆಲವು ಬರಹಗಾರರಿದ್ದು, ಚಳವಳಿಯ ಸಿದ್ಧಾಂತ ಹಾಗೂ ಆಚರಣೆಗಳ ಕ್ರಿಯಾತ್ಮಕ ನೆಲೆಯಲ್ಲಿ ಅವರು ತಮ್ಮನ್ನು ಗುರುತಿಸಿಕೊಳ್ಳದಿರುವುದೂ ಗಮನಿಸಬೇಕಾದ ಅಂಶ. ಇಂಥವರನ್ನು ದಲಿತ ವರ್ಗದ ಬರಹಗಾರರು ಎಂದಷ್ಟೆ ಕರೆಯಬಹುದು. ದಲಿತ ಹೋರಾಟಕ್ಕೆ ಮತ್ತು ದಲಿತ ಸಾಹಿತ್ಯ ಪ್ರಸಾರಕ್ಕೆ ಪ್ರಚಾರ ನೀಡುವಲ್ಲಿ, ಜನಜಾಗೃತಿ ಮಾಡುವಲ್ಲಿ ಕೆಲವು ಪತ್ರಿಕೆಗಳೂ ನೆರವಾದವು. ದಲಿತ, ಅಂಬೇಡ್ಕರ್ ವಾಹಿನಿ, ಶೋಷಿತ, ಸಾಹಿತ್ಯ ಸಂಗಾತಿ, ದಲಿತ ವಾಯ್ಸ್, ಹೊಸದಿಕ್ಕು. ಪಂಚಮ ಇವುಗಳಲ್ಲಿ ಕೆಲವು.

ಎಪ್ಪತ್ತರ ದಶಕದ ದಲಿತ ಚಳವಳಿ ಈಗಾಗಲೇ ಹತ್ತಿರ-ಹತ್ತಿರ ಮೂರು ದಶಕಗಳ ಕಾಲವನ್ನು ಸವೆಸಿದೆ; ಈ ಚಳವಳಿಯ ನೆಲೆಯಲ್ಲಿ ಪ್ರಮುಖವಾಗಿ ಪರಿಗಣಿಸಬೇಕಾದ ಸಂಘಟನೆಯೆಂದರೆ ದಸಂಸ ಎಂಬುದು ನಿರ್ವಿವಾದ ಸಂಗತಿ. ಇದೀಗ ಕರ್ನಾಟಕಾದ್ಯಂತ ಆಳವಾಗಿ ಬೇರುಬಿಟ್ಟಿರುವ ಪ್ರಬಲ ಹಾಗೂ ಪ್ರತಿಷ್ಠಿತ ಸಂಘಟನೆ. ಇದು ಹಮ್ಮಿಕೊಂಡ ಕಾರ್ಯಕ್ರಮಗಳು, ಏರ್ಪಡಿಸಿದ ಪ್ರತಿಭಟನೆಗಳು, ಸಂಯೋಜಿಸಿದ ಹೋರಾಟಗಳು ಚರಿತ್ರಾರ್ಹವಾಗಿದ್ದು, ನೂರಾರು ಪುಟಗಳಷ್ಟು ದಾಖಲೆಯನ್ನು ಸೃಷ್ಟಿಸಿವೆ. ದಲಿತರ ಮೇಲೆ ಹಲ್ಲೆ-ಅತ್ಯಾಚಾರಗಳಾದೆಡೆಯಲ್ಲೆಲ್ಲ ಕಾಣಿಸಿಕೊಂಡ ಏಕೈಕ ಸಂಘಟನೆಯೆಂದರೆ ದಸಂಸ. ನೂರಾರು ನಿಷ್ಠಾವಂತ ಕಾರ್ಯಕರ್ತರು ತಮ್ಮ ನೆಲೆಯನ್ನು ಗುರುತಿಸಿಕೊಂಡುದೇ ಈ ಸಂಘಟನೆ ವ್ಯವಸ್ಥಿತವಾಗಿ ಆರಂಭಿಸಿದ ದಲಿತ ಚಳವಳಿ ಮೂಲಕ. 'ದಲಿತರ ಸ್ವಾಭಿಮಾನ ಸಂಘಟನೆ'ಯೆಂತಲೇ ಇದು ಗುರುತಿಸಿಕೊಂಡುದು ಗಮನಾರ್ಹ. ಹಾಗೆಯೇ, ದಲಿತ ಚಳವಳಿಗೆ ಚಾಲನೆ ನೀಡಿದ ಸಂಘಟನೆಗಳಲ್ಲಿ ದಲಿತ ಕ್ರಿಯಾವೇದಿಕೆ, ಸಮತಾ ಸೈನಿಕರ ದಳ, ಪ್ರಜಾ ವಿಮೋಚನಾ ಚಳವಳಿ, ಕರ್ನಾಟಕ ಜನಾಂದೋಲನ ಸಂಘಟನೆ, ದಲಿತ್ ಹ್ಯೂಮನ್ ರೈಟರ್ಸ್ ಫೋರಮ್, ದಲಿತ ಒಕ್ಕೂಟ ಸಮಿತಿ, ದಲಿತ ಜಾಗೃತಿ ಸಮಿತಿ, ಅಂಬೇಡ್ಕರ್ ಜಾಗೃತ ಮಹಾಸಮಿತಿ, ರಾಜ್ಯ ಎಸ್. ಸಿ./ಎಸ್. ಟಿ. ಫೆಡರೇಷನ್ ಮೊದಲಾದುವು ಮುಖ್ಯವಾದುವು. ದಲಿತ ಸಂಘರ್ಷ ಸಮಿತಿಗಿಂತ ಮೊದಲೇ ಕ್ರಿಯಾಶೀಲವಾಗಿದ್ದ ಜಯಭೀಮ ಸಂಘ, ಅಂಬೇಡ್ಕರ್ ಸಂಘ, ಹರಿಜನ ಭಜನಾ ಮಂಡಲಿ, ಭೀಮಸೇನೆ ಮೊದಲಾದ ಸಂಘಟನೆಗಳ ಸೇವೆಯಾಗಲೀ ಪ್ರಭಾವವಾಗಲೀ ಕಡಿಮೆಯೇನಲ್ಲ. ಇಂಥಾ ಎಷ್ಟೋ ಸಂಘಟನೆಗಳ ಮೂಲಕ ದಲಿತ ಚಳವಳಿ ಹೆಚ್ಚು ಹೆಚ್ಚಾಗಿ ಬೆಳೆದಿದೆ; ಬಲಿಷ್ಠಗೊಂಡಿದೆ. ಇವು ದಲಿತರಿಂದ ದಲಿತರಿಗಾಗಿಯೇ ಹುಟ್ಟಿಕೊಂಡಂಥ ಹಾಗೂ ದಲಿತರ ಸಂಘಟನೆಯಾಗಿಯೇ ಇರುವಂಥವೆಂಬ ಮಾತು ಒಪ್ಪತಕ್ಕದ್ದೇ.

ದಲಿತ ಚಳವಳಿ ನಡೆದು ಬಂದ ದಾರಿಯನ್ನು ಹಿಂತಿರುಗಿ ನೋಡಿ ಆತ್ಮವಿಮರ್ಶೆ ಮಾಡಿಕೊಳ್ಳುವ ಪ್ರಯತ್ನ ಅಲ್ಲಲ್ಲಿ, ಆಗಾಗ್ಗೆ ನಡೆದಿರುವುದುಂಟು. ಹಾಗೆಯೇ, ಈ ಚಳವಳಿಯ ಸಾಧನೆಗಳನ್ನು ಕುರಿತು ಮುಕ್ತವಾಗಿ ಚರ್ಚಿಸಬೇಕೆನ್ನುವ ಅಭಿಪ್ರಾಯವೂ ಉತ್ಸಾಹವೂ ಕಂಡುಬಂದಿರುವುದುಂಟು. ದಲಿತ ಸಾಹಿತ್ಯ ವಿಮರ್ಶೆ ಅಥವಾ ದಲಿತ ಸಂಸ್ಕೃತಿ ವ್ಯಾಖ್ಯಾನ ನಡೆಯುವಾಗಲೆಲ್ಲ ದಲಿತಪರ ಸಂಘಟನೆಗಳ ಹಾಗೂ ಅವು ಕೈಗೊಂಡಿರುವ ಹೋರಾಟಗಳ ಬಗೆಗೂ ಸಾಂದರ್ಭಿಕ ಟೀಕೆ - ಟಿಪ್ಪಣಿಗಳನ್ನು ಲೇಖಕರನೇಕರು ಮಂಡಿಸಿರುವುದುಂಟು. ದಲಿತ ಚಳವಳಿಯ ವಿವಿಧ ಮಜಲುಗಳನ್ನು ಚಾರಿತ್ರಿಕ ನೆಲೆಯಲ್ಲಿ ವಿವರಿಸುವಂತೆಯೇ ಅದರ ಮುಂದಿನ ಮಾರ್ಗವನ್ನು ಕುರಿತು ವಿವೇಚಿಸುವ ಕಾರ್ಯವನ್ನೂ ದಲಿತ ವಿಮರ್ಶಕರು ಮಾಡಿರುವುದುಂಟು. ವಿವಿಧ ನೆಲೆಗಳ ಹಾಗೂ ಕ್ಷೇತ್ರಗಳ ದಲಿತ ಹೋರಾಟಗಾರರು, ಸಂಘಟಕರು ದಲಿತ ಚಳವಳಿ ಬಗೆಗೆ ಚಿಂತನೆ ನಡೆಸಿದ್ದಾರೆ.

ಇಂಥಾ ಕೆಲವು ಚಿಂತನೆಗಳತ್ತ ಇಲ್ಲಿ ಗಮನ ಹರಿಸೋಣ. ಚಳವಳಿಯ ಸಾಧನೆ ಬಗೆಗೆ ಮಾತಾಡುವಾಗ ಜನರಲ್ಲಿ ಮೂಡಿದ ಸಾಮಾಜಿಕ ಎಚ್ಚರ ಮತ್ತು ಸ್ವಾಭಿಮಾನವನ್ನು ನಿರಾಕರಿಸಲಾಗದೆನ್ನುತ್ತಾರೆ ಗಂಗಾರಾಂ ಚಾಂಡಾಳ. ನಿಕೃಷ್ಟ ಜೀವನಕ್ಕೆ ಒಗ್ಗಿ ಹೋಗಿ ನಾಗರಿಕ ಸಮಾಜದ ಅವಹೇಳನಕ್ಕೆ ಒಳಗಾಗಿರುವ ಜನರಿಗೆ ಬದುಕಲು ದಾರಿ ಉಂಟು

ಹಕ್ಕೂ ಉಂಟು. ಅದಕ್ಕೆ ಸಂಘಟನೆ ಬೇಕು ಎಂಬ ಮಾತೇ ಅವರ ಎದೆಯಲ್ಲಿಟ್ಟುಕೊಳ್ಳಬಲ್ಲ ಮಾತು. ಅದನ್ನು ಜನ ಹಾಗೆಯೇ ಸ್ವೀಕರಿಸಿ ಮೇಲಿನ ಮಾತನ್ನು ಹೇಳಿದ ಕಾರ್ಯಕರ್ತನನ್ನು ಮತ್ತು ನಾಯಕರನ್ನು ತಮ್ಮ ಎದೆಯಲ್ಲಲ್ಲ ಒಡಲಲ್ಲಿ ಇಟ್ಟುಕೊಂಡು ಗೌರವಿಸುತ್ತಿದ್ದರು. ಮನುಷ್ಯರಂತೆ ಯೋಚಿಸಿ ಸ್ವಾಭಿಮಾನಿಗಳಾಗಿ ವ್ಯವಸ್ಥೆಯ ಅಮಾನವೀಯತೆ ಮುಂದೆ ಎದೆ ಎತ್ತಿ ನಿಂತರು (ಚಾಂಡಾಳ : ೧೯೯೨ : ೧೫೫). ಅವರು ಹೇಳುವ ಇನ್ನೂ ಮುಖ್ಯವಾದ ಮಾತುಗಳೆಂದರೆ, ಜಾತಿಪದ್ಧತಿ ವಿರುದ್ಧ ವೈಚಾರಿಕ ಸಮರವನ್ನು ಇನ್ನೂ ರಭಸವಾಗಿ ನಡೆಸಬೇಕಾದ ಅಗತ್ಯವಿದೆ. ಸದ್ಯಕ್ಕೆ ಬೇಕಾದ ಧೈರ್ಯವನ್ನಷ್ಟೆ ಚಳವಳಿ ನೀಡಿದೆ. ಅಸ್ಪೃಶ್ಯರಲ್ಲಿನ ಹಲವು ಅವೈಚಾರಿಕ ಭ್ರಮೆಗಳನ್ನು ಹೋಗಲಾಡಿಸುವ ಕೆಲಸ ಆಗಬೇಕಾಗಿದೆ. ಪರ್ಯಾಯ ಸಂಸ್ಕೃತಿಯನ್ನು ಹುಟ್ಟುಹಾಕುವ ದಿಸೆಯಲ್ಲಿ ಮತ್ತು ಸ್ವಂತ ಅಸ್ತಿತ್ವವನ್ನು ಇನ್ನೂ ಉಳಿಸಿಕೊಳ್ಳಬೇಕಾಗಿದೆ. ಚಳವಳಿ ತನ್ನ ಇತಿಹಾಸದ ವೈಫಲ್ಯಗಳ ವಿಮರ್ಶೆಗೆ ಮತ್ತು ಅಧಿಕಾರ ರಾಜಕೀಯ ಪಕ್ಷಗಳಿಗೆ ಒಂದು ಕಾಯುವ ಮತ್ತು ಒತ್ತಡದ ಗುಂಪಾಗಿ ದುಡಿಯಬೇಕಿದೆ. ಹರಿಜನ ಪದವನ್ನು ಧಿಕ್ಕರಿಸಿ ದಲಿತರೆಂದು ಹೇಳಿಕೊಂಡ ಯುವ ಸಮೂಹ ಮುಂದೆಯೂ ಕೂಡ ಸಮರಶೀಲತೆಯನ್ನು ಉಳಿಸಿಕೊಳ್ಳಬೇಕಾದರೆ ಅಂಥದೇ ದಾರಿಯಲ್ಲಿ ನಡೆಯುವ ಅಗತ್ಯ ಚಳವಳಿಗೆ ಇದೆ. ಚಳವಳಿಯ ಗುರಿ ಮತ್ತು ದಾರಿಗಳ ಮಧ್ಯೆ ಸಾಕಷ್ಟು ಅಂತರವಿರುವುದನ್ನು ಅದರ ಪರಿಣಾಮಕಾರಿ ಪಾತ್ರ ಅದನ್ನು ಕಡಿಮೆಗೊಳಿಸಬೇಕೆಂಬುದರಲ್ಲಿ ಎರಡು ಮಾತಿಲ್ಲ ಎಂಬುದು (ಪು. ೧೫೫-೧೫೬).

ಡಾ. ಮುನಿವೆಂಕಟಪ್ಪ ಕೇಳುವ ಪ್ರಶ್ನೆಗಳು : ನಿರಂತರವಾಗಿ ನಡೆಯುತ್ತಿರುವ ದಲಿತರ ಮೇಲಿನ ದೌರ್ಜನ್ಯವನ್ನು ತಡೆಗಟ್ಟಲು ಸಾಧ್ಯವಾಗದ ಸಂದರ್ಭದಲ್ಲಿ ದಲಿತ ಸಂಘಟನೆಗಳ ಜವಾಬ್ದಾರಿಯಾದರೂ ಏನು? ದಲಿತ ನಾಯಕರ ಕರ್ತವ್ಯಗಳೇನು? ದಲಿತ ವಿದ್ಯಾವಂತ ವರ್ಗದ ಜವಾಬ್ದಾರಿ ಇಲ್ಲವೇ?- ಇತ್ಯಾದಿ. ಇಂಥಾ ಪ್ರಶ್ನೆಗಳಿಗೆ ಅವರೇ ತಕ್ಕಮಟ್ಟಿನ ಉತ್ತರವನ್ನು ನೀಡಲೆತ್ನಿಸುತ್ತಾರೆ. ಸಮಯಸಾಧಕತನ, ಸ್ವಾರ್ಥ ರಾಜಕೀಯ, ಅಧಿಕಾರದ ಆಸೆಗಳಿಂದ ದಲಿತ ವಿದ್ಯಾವಂತ ವರ್ಗ, ದಲಿತ ರಾಜಕಾರಣಿಗಳು, ದಲಿತ ನೌಕರ ವರ್ಗ ದಲಿತ ಜನಾಂಗದಿಂದ ದೂರ ಸಾಗುತ್ತಿದ್ದಾರೆ. ಅವಕಾಶಗಳನ್ನು, ಸೌಲಭ್ಯಗಳನ್ನು ಮಾತ್ರ ದೋಚುತ್ತಿದ್ದಾರೆ. ದಲಿತ ಚಳವಳಿಯನ್ನು ನಾಶಗೊಳಿಸಲು ವಿದೇಶಿ ಶಕ್ತಿಗಳು ಕೂಡ ಮುಂದಾಗಿವೆ. ಕರ್ನಾಟಕದಲ್ಲಿರುವ ವಿದೇಶಿ ಮೂಲದ ಸಂಘ-ಸಂಸ್ಥೆಗಳು ಮದ್ಯ, ಮಹಿಳೆ, ಹಣ ಬಳಸಿ ಪ್ರತಿಭಾವಂತ ಕಾರ್ಯಕರ್ತರನ್ನು ಸಂಘಟನೆಯಿಂದ ದೂರ ಮಾಡಿದರು. ವಿದೇಶಿ ಮೂಲದ ಸಂಘ-ಸಂಸ್ಥೆಗಳು ರಹಸ್ಯ ಚಟುವಟಿಕೆಗಳ ಮೂಲಕ ಪ್ರಗತಿಪರ ಸಂಘಟನೆಗಳಲ್ಲಿ ನುಸಿಳಿವೆ. ಅಲ್ಲದೆ, ಪ್ರಗತಿಪರ ಮುಖವಾಡದೊಂದಿಗೆ ಹಾಜರಾಗಿ ಹೆಚ್ಚಿನ ಆಸಕ್ತಿ ತೋರಿಸಿ ನಯವಾಗಿ ಸಂಘಟನೆಯನ್ನು ನಾಶಮಾಡುತ್ತಾರೆ. ಕರ್ನಾಟಕದಲ್ಲಿರುವ ವಿದೇಶಿ ಗೂಢಚಾರಿ ಸಂಸ್ಥೆಗಳು ಹೆಣ್ಣುಮಕ್ಕಳನ್ನು ಕೆಲಸಕ್ಕೆ ನೇಮಕ ಮಾಡಿಕೊಂಡು ರಹಸ್ಯ ಚಟುವಟಿಕೆಗಳನ್ನು ನಡೆಸುತ್ತಿವೆ ಎಂದು ವಿವರಿಸುತ್ತಾರೆ (ಮುನಿ ವೆಂಕಟಪ್ಪ : ೧೯೯೮ :xiii - xiv). ಈ ಹಿನ್ನೆಲೆಯಲ್ಲಿ ಪರಿಭಾವಿಸಬೇಕಾದ ಹಲವಾರು ಸಂಗತಿಗಳಿವೆ. ಇಲ್ಲಿ ವಿವರಿಸಿಕೊಳ್ಳಬೇಕಾದ ಅಂಶಗಳಲ್ಲಿ ದಲಿತ ಚಳವಳಿ ಹಿಂದಿನ ತನ್ನ ಮೂಲಸತ್ವ ಕಳೆದುಕೊಂಡಿದೆಯೆಂಬುದೂ ಒಂದು. ಇದನ್ನು ದಲಿತ

ಬುದ್ಧಿಜೀವಿಗಳು ಹಲವು ತೆರನಾಗಿ ವಿಶ್ಲೇಷಿಸುವುದರೊಡನೆ ಪ್ರಸ್ತುತ ಸಂದರ್ಭದ ಬಗೆಗೆ ವಿಷಾದಿಸಿರುವುದುಂಟು.

ಇಂಥಾ ವಿಮರ್ಶೆ - ವಿಶ್ಲೇಷಣೆಗಳನ್ನು ಗಮನಿಸುವ ಮುನ್ನ ದಲಿತ ಚಳವಳಿಗೆ ಪ್ರೇರಣೆ ನೀಡಿದ ಸಂಘಟನೆಗಳಲ್ಲಿ ಪ್ರಮುಖವೆನಿಸಿದ, ಕರ್ನಾಟಕ ದಲಿತ ಸಂಘರ್ಷ ಸಮಿಯ ಏಳು-ಬೀಳುಗಳನ್ನೂ ಇಲ್ಲಿ ಪರಿಶೀಲಿಸಬೇಕಾಗುತ್ತದೆ. ಆರಂಭದಲ್ಲಿ ಈ ಸಂಬಂಧದ ಆಕ್ಷೇಪಣೆಯೊಂದನ್ನು ದಾಖಲಿಸಿ ಮುಂದುವರೆಯುವುದು ಸೂಕ್ತ. ಸಿ. ಕೆ. ಮಹೇಶ್ ಆಕ್ಷೇಪಿಸುವಂತೆ, ಕರ್ನಾಟಕ ದಲಿತ ಸಂಘರ್ಷ ಸಮಿತಿ ಪೌರಕಾರ್ಮಿಕರ ಪೊರಕೆಯನ್ನು ತನ್ನ ಲಾಂಛನವನ್ನಾಗಿ ಅಳವಡಿಸಿಕೊಳ್ಳುತ್ತಾ ಅದಕ್ಕೊಂದು ದಾರ್ಶನಿಕ ಸ್ಪರ್ಶ ನೀಡಿದೆ. ಪೊರಕೆ ಕೇವಲ ಒಂದು ಭೌತಿಕ ವಸ್ತುವಲ್ಲ. ಊರಿನ ಕಸ-ಕಡ್ಡಿ, ಮಲ-ಮೂತ್ರ ತೆಗೆಯುವ ಉಪಕರಣವಲ್ಲ. ಅದು ವಿಶಾಲ ಅರ್ಥವುಳ್ಳದ್ದು. ಭಾರತೀಯರ ತಲೆಗಳಲ್ಲಿ ಬ್ರಾಹ್ಮಣ್ಯ ತುಂಬಿರುವ ಮಲ-ಮೂತ್ರ ಹೊರಗಾಕುವ ತಾತ್ವಿಕ ಸನ್ನೆಗೋಲು. ವರ್ಣಾಶ್ರಮಧರ್ಮ ಗುಡಿಸುವ ಆಯುಧ. ಪಾರ್ಲಿಮೆಂಟಿನ ಕುರ್ಚಿಗಳಲ್ಲಿ ಆಸೀನವಾಗಿ ಸಮಾನತೆ ಬಿತ್ತರಿಸುವ ಸಂಕೇತ. ಇಂಥಾ ವಿಸ್ತೃತ ತಳಹದಿಯ ಸೈದ್ಧಾಂತಿಕ ನೆಲೆಯನ್ನು ಪೊರಕೆಗೆ ನಿರ್ಮಿಸಿದೆ ದಸಂಸ. ಪೌರಕಾರ್ಮಿಕರ ಕೀಳಿರಿಮೆಯ ಪೊರೆ ಹರಿಯಲೂ ಇದರಿಂದ ಸಹಾಯಕವಾಗಿದೆ. ಆದಾಗ್ಯೂ, ಪೊರಕೆ ಹಿಡಿದ ಕೈಗಳ ನೋವುಗಳಿಗೆ ತಾತ್ಕಾಲಿಕವಾದ ಉಪಶಮನ ನೀಡುವ ಯಾವುದೇ ಬಗೆಯ ಪೂರ್ಣಪ್ರಮಾಣದ ಕಾರ್ಯಕ್ರಮವನ್ನು ದಸಂಸ ಈ ತನಕ ರೂಪಿಸಿಲ್ಲ ಎನ್ನುವುದು ಮಾತ್ರ ಅತ್ಯಂತ ಖೇದದ ಮತ್ತು ವ್ಯಥೆಯ ಸಂಗತಿ (ಮಹೇಶ್ : ೧೯೯೪ : ೯೭). ಇಂಥದೇ ಇತರ ಸಮಸ್ಯೆಗಳತ್ತಲೂ ದಸಂಸ ಗಮನ ಹರಿಸದಿರುವುದಕ್ಕೆ ಇರುವ ಕಾರಣಗಳನ್ನು ಕೆದಕುವ ಪ್ರವೃತ್ತಿ ಕಂಡು ಬರುವುದು ನಿಜ.

ಇಷ್ಟಾದರೂ ದಲಿತ ಚಳವಳಿಯ ಎಲ್ಲಾ ಬಗೆಯ ಪ್ರವೃತ್ತಿಗಳು ದಸಂಸದ ಚಟುವಟಿಕೆಗಳ ಸ್ವರೂಪವನ್ನು ಅವಲಂಬಿಸಿದುದನ್ನು ಕಡೆಗಣಿಸುವಂತಿಲ್ಲ. ಹೀಗಾಗಿ, ದಸಂಸ ಹಿಡಿದ ಹಾದಿಯೇ ದಲಿತ ಚಳವಳಿಯೂ ಹಿಡಿದ ಹಾದಿಯೆಂಬುದನ್ನು ಗಮನಿಸುವುದಾದರೆ, ದಸಂಸದ ಇಂದಿನ ಸ್ಥಿತಿ-ಗತಿಯವರೆಗಿನ ಬೆಳವಣಿಗೆಗಳನ್ನು ಸ್ಥೂಲವಾಗಿಯಾದರೂ ನೋಡ ಬಹುದು. ಗಮನಾರ್ಹ ಸಂಗತಿಯೆಂದರೆ, ದಸಂಸದ ಪರಿಸ್ಥಿತಿಯ ಪ್ರಸ್ತಾಪ ಬಂದಾಗಲೆಲ್ಲ ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್‌ನೊಡನೆ ಅದನ್ನು ಹೋಲಿಸಿ ವಿಶ್ಲೇಷಿಸುವುದು ಒಂದು ಅನಿವಾರ್ಯ ಉಪಕ್ರಮ ಆಗಿದೆಯೆನ್ನುವುದು. ಏಕೆಂದರೆ, ದಲಿತ ಪ್ಯಾಂಥರ್ಸ್ ಸಂಘಟನೆ ಅಸ್ತಿತ್ವಕ್ಕೆ ಬಂದುದು ೧೯೭೨ ಜುಲೈನಲ್ಲಿ. ಇದೇ ವರ್ಷ ಕರ್ನಾಟಕದಲ್ಲಿ ದಲಿತ ಕ್ರಿಯಾಸಮಿತಿ ಉದಯಿಸಿತು. ಇದರ ಬೆನ್ನ ಹಿಂದೆಯೇ ದಸಂಸ ಹುಟ್ಟಿಕೊಂಡಿತು. ಕಾಲಮಾನ, ಸ್ವರೂಪ, ಉದ್ದೇಶ-ಈ ಎಲ್ಲ ದೃಷ್ಟಿಯಿಂದಲೂ ಸಮಾನ ಗುಣವನ್ನು ಮೈಗೂಡಿಸಿಕೊಂಡಂಥ ಈ ಸಂಘಟನೆಗಳಲ್ಲಿ ದಸಂಸ ಹೆಚ್ಚು ಕ್ರಿಯಾಶೀಲವಾಗಿ ಬೆಳೆದುದು ಕಂಡಂತೆಯೇ ಇದೆ. ಆದರೆ ಬಲಿಷ್ಠವಾದ ದಲಿತ ಪ್ಯಾಂಥರ್ಸ್ ಸಂಘಟನೆ ಸೈದ್ಧಾಂತಿಕ ನೆಲೆಯಲ್ಲಿ ಪರಸ್ಪರ ಭಿನ್ನಾಭಿಪ್ರಾಯಗಳನ್ನು ಹೊಂದಿದ ನಾಯಕರಿಂದಾಗಿ ಒಡೆದು ಹೋಯಿತೆಂಬುದು ಚಾರಿತ್ರಿಕ ಸತ್ಯ.

ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್‌ನಂತೆಯೇ ಕರ್ನಾಟಕ ದಲಿತ ಸಂಘರ್ಷ ಸಮಿತಿಯೂ ಇಲ್ಲಿಯ ದಲಿತ ಚಳವಳಿಯ ಮುಂಚೂಣಿಯಲ್ಲಿದ್ದು ನಿರ್ಣಾಯಕ ಪಾತ್ರ ವಹಿಸುವಷ್ಟರ ಮಟ್ಟಿಗೆ ಬೆಳೆದುದನ್ನು ಕಾಣಲಾಗಿದೆ. ರಾಜ್ಯದ ಸಾಮಾಜಿಕ, ಆರ್ಥಿಕ, ರಾಜಕೀಯ ರಂಗಗಳಲ್ಲಿ ಪರಿಣಾಮಕಾರಿ ಪ್ರಯೋಗಗಳನ್ನಾರಂಭಿಸಿದುದು ದಸಂಸ. ೧೯೭೨-೭೪ರ ಕಾಲಾವಧಿಯಲ್ಲಿ ಮಹಾರಾಷ್ಟ್ರದ ಪ್ರಮುಖ ನಗರಗಳಲ್ಲಿ ದಲಿತ ಪ್ಯಾಂಥರ್ಸ್‌ನ ಶಾಖೆಗಳು ಹುಟ್ಟಿಕೊಂಡವು; ದೆಹಲಿ ಮತ್ತು ಭೂಪಾಲ್‌ಗಳಲ್ಲಿ ಹಾಗೂ ಕರ್ನಾಟಕದ ನಿಪ್ಪಾಣಿ ಮತ್ತು ಬೆಳಗಾವಿಗಳಲ್ಲಿ ಅಸ್ತಿತ್ವಕ್ಕೆ ಬಂದವು. ೧೯೭೪ರ ವೇಳೆಗೆ ಮುಂಬಯಿ ನಗರವೊಂದರಲ್ಲೇ ೭೫ ಶಾಖೆಗಳಿದ್ದು, ಒಟ್ಟು ೨ ಲಕ್ಷ ಸದಸ್ಯರನ್ನು ಹೊಂದಿದ್ದುವು. ೧೯೭೭ರ ವೇಳೆಗೆ ಈ ಬಲಿಷ್ಠ ಸಂಘಟನೆ ಹೋರಾಟದ ತನ್ನ ಮೂಲಗುಣವನ್ನು ಕಳೆದುಕೊಂಡುದನ್ನು ನೋಡಿದರೆ ಅದೊಂದು ಅನಿರೀಕ್ಷಿತ ಹಾಗೂ ಅನಪೇಕ್ಷಿತ ಘಟನೆ ಎನ್ನುವುದರಲ್ಲಿ ಸಂಶಯವಿಲ್ಲ. ಸಮರ್ಥ ನಾಯಕತ್ವದ ಕೊರತೆ, ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು, ರಾಜಕೀಯ ಹಸ್ತಕ್ಷೇಪ ಇತ್ಯಾದಿಗಳು ಸಂಘಟನೆಯ ಮೇಲೆ ತೀವ್ರ ಪರಿಣಾಮ ಬೀರಿದವು. ಪ್ರಮುಖ ನಾಯಕರಾದ ನಾಮದೇವ ಢಸಾಳ (ಮಾರ್ಕ್ಸ್ ಸಿದ್ಧಾಂತ) ಮತ್ತು ರಾಜಾ ಢಾಲೆ (ಬುದ್ಧ ಸಿದ್ಧಾಂತ) ಅವರು ತಳೆದ ಪರಸ್ಪರ ವಿರುದ್ಧವಾದ ಸೈದ್ಧಾಂತಿಕ ನಿಲುವುಗಳಿಂದಾಗಿ ಸಂಘಟನೆಯಲ್ಲಿ ಗೊಂದಲವೇರ್ಪಟ್ಟುದು ಸಹಜ. ಅಲ್ಲದೆ, ಈ ಸಂಘಟನೆಯಿಂದ ಪ್ರತ್ಯೇಕಗೊಂಡ ಅರುಣ ಕಾಂಬಳೆ ಬಣ, ಸಂಘಟನೆ ಪ್ರವೇಶಿಸಿದ ಸಾಂಗರೆ ಮತ್ತು ಮಹಾತೆಕರ್‌ರ ಬಣ - ಇವು ಸಹಾ ಸಂಘಟನೆಯಲ್ಲಿ ಇನ್ನಷ್ಟು ಬಿಕ್ಕಟ್ಟಿಕ್ಕೆ ಅನುವು ಮಾಡಿಕೊಟ್ಟವು.

ಮಹಾರಾಷ್ಟ್ರದಲ್ಲಿ ದಲಿತ ಪ್ಯಾಂಥರ್ಸ್ ಚಳವಳಿ ಕುರಿತು ಅಧ್ಯಯನ ನಡೆಸಿರುವ ಲತಾ ಮುರುಗ್‌ಕರ್ ಅವರು, ಸಂಘಟನೆಯಲ್ಲಿ ಅನೈಕ್ಯತೆಯುಂಟಾಗಿ ಬಹುನಾಯಕತ್ವ ಹುಟ್ಟಿಕೊಂಡುದನ್ನು; ತನ್ನ ಮೂಲ ಸಂಘಟನಾ ಸಂರಚನೆಯನ್ನು ಪರಿಣಾಮಕಾರಿಯಾಗಿ ಕಾರ್ಯರೂಪಕ್ಕೆ ತರುವಲ್ಲಿ ವಿಫಲವಾದ್ದರಿಂದ ಈ ಸಂಘಟನೆಯ ನಾಯಕರನ್ನು ಮತ್ತು ಕಾರ್ಯಕರ್ತರನ್ನು ಇತರ ಶಕ್ತಿಗಳು ತಮ್ಮ ಲಾಭಕ್ಕಾಗಿ ಶೋಷಿಸತೊಡಗಿದ್ದನ್ನು; ದೀರ್ಘಕಾಲೀನ ಹಾಗೂ ನಿರ್ದಿಷ್ಟ ಸ್ವರೂಪದ ಕಾರ್ಯಕ್ರಮಗಳನ್ನು ರೂಪಿಸದ ಕಾರಣ ಚಳವಳಿಗೆ ಆರ್ಥಿಕ ಮುಗ್ಗಟ್ಟು ಎದುರಾದುದನ್ನು; ಚಳವಳಿಯನ್ನು ಮುನ್ನಡೆಸಬಲ್ಲ ನಿಸ್ವಾರ್ಥ, ಪ್ರತಿಭಾವಂತ ಹಾಗೂ ನಿಷ್ಠಾವಂತ ನಾಯಕರ ಕೊರತೆ ಉಂಟಾದುದನ್ನು; ಯಾವುದೇ ನಿರ್ದಿಷ್ಟ ಸೈದ್ಧಾಂತಿಕ ನೆಲೆಯಿಲ್ಲದೆ, ವರ್ಗವ್ಯವಸ್ಥೆ ಬಗೆಗೆ ಬೇಕಾಬಿಟ್ಟಿ ನಿಲುವು ತಾಳಿ ಆಂತರಿಕವಾಗಿ ಜಾತಿವ್ಯವಸ್ಥೆಯನ್ನು ಅನುಸರಿಸಿದ್ದರಿಂದ ಉಂಟಾದ ಪರಿಣಾಮವನ್ನು; ಸಮಾನತಾ ಹೋರಾಟದ ನೆಲೆಯಲ್ಲಿ ನಡೆಯುತೊಡಗಿದ್ದ ಇತರ ಸಮಕಾಲೀನ ಚಳವಳಿಗಳನ್ನು ಸರಿಯಾಗಿ ಗ್ರಹಿಸದೆ ಹಾಗೂ ಅವುಗಳೊಡನೆ ಸಂಪರ್ಕ ಏರ್ಪಡಿಸಿಕೊಳ್ಳದೆ ಹೋದುದನ್ನು; ಸಂಘಟನೆ ಮತ್ತು ಹೋರಾಟಗಳು ಕೇವಲ ನಗರಕೇಂದ್ರಿತವಾಗಿದ್ದುದು, ಸಮಸ್ಯೆಗಳ ನಿವಾರಣೆಗಾಗಿ ಇತರ ವರ್ಗಗಳವರ ಸಹಕಾರವನ್ನು ಬಳಸಿಕೊಳ್ಳದೆ ಹೋದುದು ಹಾಗೂ ದಲಿತವರ್ಗದ ಸುಧಾರಣೆಗಾಗಿ ಸ್ಪಷ್ಟ ರೂಪ-ರೇಖೆಗಳನ್ನು, ಉಚಿತ ಕಾರ್ಯಕ್ರಮಗಳನ್ನು ನಿರ್ಧರಿಸದೆ ನಿರ್ಲಕ್ಷಿಸಿದ್ದನ್ನು ಗುರುತಿಸುತ್ತಾರೆ (ಮುರುಗ್‌ಕರ್ : ೧೯೯೧ : ೨೨೭-೨೮). ವಾಸ್ತವದಲ್ಲಿ, ಇವೆಲ್ಲವೂ ಚಳವಳಿಯ ಶಕ್ತಿಯನ್ನೇ ಹಿಂಡಿದಂಥವೆಂದರೆ ತಪ್ಪಿಲ್ಲ. ಅದು

ನವಬೌದ್ಧರನ್ನು ಪ್ರತಿನಿಧಿಸುವ ಚಳವಳಿಯೆನಿಸಿದ್ದಕ್ಕೆ ಇವೆಲ್ಲವೂ ಕಾರಣ. ದಲಿತ ಪ್ಯಾಂಥರ್ಸ್ ಸಂಘಟನೆ ೧೯೭೨ ಮತ್ತು ೧೯೭೯ರ ಅವಧಿಯಲ್ಲಿದ್ದಂತೆ ಕ್ರಿಯಾಶೀಲವಾಗಿಲ್ಲದಿದ್ದರೂ ಇಂದಿಗೂ ಇದರ ಕಾರ್ಯಕರ್ತರು ಬ್ರಾಹ್ಮಣಶಾಹಿ, ನೌಕರಶಾಹಿ, ಜಮೀನ್ದಾರಿ ಶಕ್ತಿಗಳ ಉಪಟಳದಿಂದ ದಲಿತರನ್ನು ರಕ್ಷಿಸುವಲ್ಲಿ ಹೋರಾಡಲು ಮತ್ತು ರಕ್ಷಿಸಲು ಹಿಂದೆ ಬೀಳುವುದಿಲ್ಲವೆಂಬುದನ್ನು ಗಮನಿಸಬಹುದು. ಕರ್ನಾಟಕದಲ್ಲಿ, ಮುಖ್ಯವಾಗಿ ಉತ್ತರ ಕರ್ನಾಟಕದಲ್ಲಿರುವ ದಲಿತ ಪ್ಯಾಂಥರ್ಸ್ ಶಾಖೆಗಳು ಇಂದಿಗೂ ಕ್ರಿಯಾಶೀಲವಾಗಿರುವುದನ್ನು, ದಲಿತ ಸಮಸ್ಯೆಗಳ ನಿವಾರಣೆಯಲ್ಲಿ ಆಗಾಗ್ಗೆ ತಲೆ ಹಾಕುತ್ತಿರುವುದನ್ನು ನೋಡುತ್ತಿದ್ದೇವೆ.

ಇಲ್ಲಿಗೆ ಒಂದೂವರೆ ದಶಕಗಳ ಹಿಂದೆಯೇ ಕರ್ನಾಟಕ ದಲಿತ ಸಂಘರ್ಷ ಸಮಿತಿಯಲ್ಲಿ ಬಿರುಕು ಬಿಟ್ಟಿದುದನ್ನು ಚರಿತ್ರೆ ಗುರುತಿಸಿದೆ. ಒಡಕು, ಬಿರುಕು ಇತ್ಯಾದಿಗಳನ್ನು ಪರಿಭಾವಿಸಿ ಹೇಳುವುದಾದರೆ, ಮೇಲೆ ಪ್ರಸ್ತಾಪಿಸಿದ ದಲಿತ ಪ್ಯಾಂಥರ್ಸ್ ಸಂಘಟನೆ ಮತ್ತು ದಸಂಸಗಳ ನಡುವೆ ಹಲವು ಸಾಮ್ಯಗಳಿರುವುದು ಮೇಲ್ನೋಟಕ್ಕೇ ಸ್ಪಷ್ಟಪಡುತ್ತದೆ. ದಸಂಸದಲ್ಲಿ ಇಂಥಾ ಬಿರುಕು ಕಂಡುಬಂದಿತೆಂದು ಗುರುತಿಸುವುದು ೧೯೮೩ರಿಂದ. ಅಂದಿನಿಂದ ಇಂದಿನವರೆಗೆ ಈ ಬಿರುಕು ವಿಸ್ತಾರಗೊಳ್ಳಲು ಕಾರಣರಾದವರ, ಕಾರಣರಾಗುತ್ತಿರುವವರ ಬಗೆಗೆ ಸಾಕಷ್ಟು ವಿವರಗಳು ದಾಖಲುಗೊಂಡಿವೆ. ಆದರೆ ವೈಯಕ್ತಿಕ ನೆಲೆಯಲ್ಲಿ ಅಂಥಾ ವಿವರಗಳನ್ನು ವಿಶ್ಲೇಷಿಸುವುದು ಇಲ್ಲಿಯ ಉದ್ದೇಶವಲ್ಲವಾದ್ದರಿಂದ, ಅಂಥಾ ಘಟನೆ ನಡೆಯಲು ಕಾರಣವಾದ ಸಂದರ್ಭವನ್ನು ಕೇವಲ ಸ್ಥೂಲವಾಗಿ ಪರಿಶೀಲಿಸಬಹುದಷ್ಟೆ.

ದಲಿತ ಚಳವಳಿ ಹಿಡಿದ ಭಿನ್ನಮಾರ್ಗದ ಬಗೆಗೆ, ದಸಂಸದ ತತ್ವಾಧಾರಿತ ಹೋರಾಟ ಕ್ಷೀಣಿಸತೊಡಗಿದ ಬಗಗ ಇಲ್ಲಿ ಪರಾಮರ್ಶಿಸುವ ಅಗತ್ಯವಿದೆ. ೧೯೮೩-೮೪ರಲ್ಲಿ ದಸಂಸದ ರಾಜ್ಯ ಸಮಿತಿ ಆಗಿನ ಜನತಾ ಸರ್ಕಾರವನ್ನು ಬೇಷರತ್ತಾಗಿ ಬೆಂಬಲಿಸುವುದರೊಡನೆ ಸಮಿತಿಯಲ್ಲಿ ಒಡಕು ಮೂಡಲು ಅವಕಾಶ ಕಲ್ಪಿಸಿತೆಂಬುದು ಮೊದಲನೇ ಆರೋಪ. ಅಂದರೆ, ಸಮಿತಿಯ ರಾಜಕೀಯ ಪ್ರವೇಶವನ್ನು ಪ್ರಶ್ನಿಸಲಾಯಿತು. ಇದನ್ನು 'ಪ್ರಯೋಗ'ವೆಂತಲೂ ಗುರುತಿಸಿರುವುದುಂಟು. ಒಂದು ವಿಧದಲ್ಲಿ ದಸಂಸದ 'ರಾಜಕೀಯ ಗೀಳು' ಆರಂಭಗೊಂಡುದು ಆಗಲೇ ಎನ್ನಲಾಗುತ್ತದೆ. ಸಂಘಟನೆಗೆ ರಾಜಕೀಯ ರೂಪ ನೀಡಲು ಹೊರಟ ದಲಿತ ಸಾಹಿತಿಗಳ ಒಂದು ವರ್ಗ ಸಂಘಟನೆಯನ್ನು ಬಲಹೀನಗೊಳಿಸುವ ಕಾರ್ಯದಲ್ಲಿ ಸಫಲವಾಯಿತೆಂಬ ಅಭಿಪ್ರಾಯ ವ್ಯಾಪಕಗೊಂಡಿ ರುವುದು ಗಮನಾರ್ಹ. ದಸಂಸದ ಸ್ಥಾಪಕರೆನಿಸಿದ ಬಿ. ಕೃಷ್ಣಪ್ಪನವರೇ ರಾಜಕೀಯ ಪ್ರವೇಶಿಸುವುದರೊಡನೆ ಸಂಘಟನೆ ಹಾಗೂ ದಲಿತ ಚಳವಳಿಗಳಿಗೆ ಮಿತಿ ಇದೆಯೆಂಬುದನ್ನು ದೃಢಪಡಿಸಿದುದು ಚರಿತ್ರಾರ್ಹ ಘಟನೆ. ಇದರಿಂದ ಉಂಟಾದ ಹಾಗೂಉಂಟಾಗುತ್ತಿರುವ ಪರಿಣಾಮಗಳು ಹತ್ತು ಹಲವು ಬಗೆಯವು. ಏನೇ ಇದ್ದರೂ ಒಂದು ಸಂಕ್ರಮಣ ಪರಿಸ್ಥಿತಿಯಲ್ಲಿ ದಸಂಸ ಒಡೆದು ಹೋದುದು ನಿಜ.

ಕರ್ನಾಟಕ ದಲಿತ ಸಂಘರ್ಷ ಸಮಿತಿಯನ್ನು 'ವಸ್ತುನಿಷ್ಠ'ವಾಗಿ ವಿಶ್ಲೇಷಿಸಲು ಕೆಲವು ಬರಹಗಾರರು ಪ್ರಯತ್ನಿಸಿದ್ದಾರೆ. ದಸಂಸ ಈಗಿನ ಗತಿಗೆ ಬರಲು ಮುಖ್ಯ ಕಾರಣ ತಾನು ೧೯೮೩ರಲ್ಲಿ ಎಲ್ಲಾ ರಾಜಕೀಯ ಪಕ್ಷಗಳೂ ಬೂರ್ಜ್ವಾ ಜನರೇ ತುಂಬಿರುವ ಪಕ್ಷಗಳು ಎಂದು ಹೀಗಳೆಯುತ್ತಿದ್ದ ಈ ಹೋರಾಟಗಾರರು ಅಂದು ಜನತಾಪಕ್ಷಕ್ಕೆ ಸಂಪೂರ್ಣ

ಬೆಂಬಲ ಕೊಟ್ಟು ಇತಿಹಾಸ ಸೃಷ್ಟಿಸಿದರೆಂದು ಜಾಣಗೆರೆ ವೆಂಕಟರಾಮಯ್ಯನವರು ಬರೆಯುತ್ತಾರೆ. ಅವರು ವ್ಯಾಖ್ಯಾನಿಸುವಂತೆ, ಜನತಾಪಕ್ಷವೂ ತನ್ನಲ್ಲಿದ್ದ ಕೋಟಿಗಟ್ಟಲೆ ಕಪ್ಪುಹಣದಲ್ಲಿ ಇವರಿಗೂ ಒಂದಿಷ್ಟು ಹಂಚಿತು. ಆ ಪಕ್ಷ ಅಧಿಕಾರಕ್ಕೆ ಬಂತು. ಆ ಮೇಲೆ ಈ ಬಾಂಧವ್ಯ ಇನ್ನಷ್ಟು ಗಾಢವಾಗಬೇಕಲ್ಲವೇ? ಅನೇಕ ನಾಯಕರು ಸರ್ಕಾರದ ಮಂತ್ರಿಗಳ, ಮುಖ್ಯಮಂತ್ರಿಗಳ ಬಾಗಿಲಲ್ಲಿ ನಿಂತು ಕಾಯತೊಡಗಿದರು. ತಮಗೆ ಮಾತ್ರ ಬೇಕಾದ್ದನ್ನು ಪಡೆಯುವಲ್ಲಿ ಯಶಸ್ವಿಯಾದರು. ತಮ್ಮಂದಿರಿಗೆ ಚೇರ್ಮನ್‌ಗಿರಿ, ತಮಗೆ ಸುಖವಾಗಿರಲು ಮನೆ ಮಠ ಮುಂತಾದವನ್ನು ಗಿಟ್ಟಿಸಿಕೊಳ್ಳಲು ಕೈ ಒಸೆದರು. ನಾಯಕರು ಸರ್ಕಾರಕ್ಕೆ ಹತ್ತಿರವಾದರು. ಕಾರ್ಯಕರ್ತರು ಇನ್ನಷ್ಟು ದೂರದೂರ ಆದರು. ನಾಯಕರು ಕೂಡಾ ಕಾರ್ಯಕರ್ತರನ್ನು ಮರೆತರು. ಇದರಿಂದ ನೂರಾರು ಕಾರ್ಯಕರ್ತರಲ್ಲಿ ಅಸಮಾಧಾನ, ಬೇಗುದಿ ಭುಗಿಲೆದ್ದಿತು. ನಾಯಕರ ವರ್ತನೆ, ಕೆಲಸ, ಧೋರಣೆಗಳ ವಿರುದ್ಧವೇ ಕರಪತ್ರ ಹಂಚುವಿಕೆ, ಪ್ರತಿಭಟನೆ ಹೀಗೆಲ್ಲಾ ನಡೆಯಿತು. ಆದ್ದರಿಂದಲೇ ಡಿ. ಎಸ್. ಎಸ್. ಒಡೆಯಿತು. ಈಗ ಅದರಲ್ಲಿ ಕೆಲ ಗುಂಪುಗಳೇ ಇವೆ (ಮುನಿವೆಂಕಟಪ್ಪ : ೧೯೯೮:೪೯-೫೦). ಜನರ ನೋವು, ದುಃಖ, ದುಮ್ಮಾನಗಳ ಪರಿಹಾರಕ ಪ್ರತಿನಿಧಿಗಳಂತೆ ೭೦ರ ದಶಕದಲ್ಲಿ ತಲೆಯೆತ್ತಿದ ಎರಡು ಪ್ರಮುಖ ಚಳವಳಿಗಳಿಂದ ರೈತ ಹೋರಾಟ ಮತ್ತು ದಲಿತ ಹೋರಾಟ ಕೇವಲ ಇಪ್ಪತ್ತು ವರ್ಷಗಳಲ್ಲಿ ಕುಟುಕು ಜೀವ ಹಿಡಿದುಕೊಂಡು ಬದುಕಬೇಕಾದ ಸ್ಥಿತಿ ಮುಟ್ಟಿರುವುದು ನಮ್ಮೆಲ್ಲರ ದುರಂತ. ಇವೆರಡೂ ಆತ್ಮಾಹುತಿಯ ಹಾದಿಯಲ್ಲಿ ಈಗಾಗಲೇ ಬಹಳ ದೂರಕ್ಕೆ ನಡೆದು ಬಂದದ್ದಾಗಿದೆಯೆಂದು ಮಂಜುನಾಥ ಎಂ. ಅದ್ದೆಯವರು ವಿಷಾದಿಸುತ್ತಾರೆ. ಲಕ್ಷೋಪಲಕ್ಷ ಜನರ ಹೀನಾಯ ಬದುಕೇ ಧ್ವನಿಯಾದಂತೆ ರೂಪುಗೊಂಡ, ನಾಡಿನ ಮೂಲೆ ಮೂಲೆಯಲ್ಲಿ ಹೊಸ ಬದುಕೊಂದರ ಲವಲೇಶ ತಿಳಿವಳಿಕೆಯೂ ಇಲ್ಲದೆ ಎದೆಯ ಹಾಡು, ಪಡುವ ಪಾಡು ಎಂದುಕೊಂಡಿದ್ದ ಜೀವಗಳಲ್ಲಿ ಹೊಸ ಸಂಚಾರವೊಂದನ್ನು ದಸಂಸ ತಂದದ್ದು ನಿಜವೆಂದು ಒಪ್ಪುವ ಅವರು, ಇನ್ನೊಂದು ವಿಷಯವೂ ಇಲ್ಲಿ ಅಷ್ಟೇ ನಿಜ ಎನ್ನುತ್ತಾ ದಸಂಸವನ್ನು ಮಾರಿಬಲಿಯನ್ನಾಗಿಸಿದವರ ವಿರುದ್ಧ ತಮ್ಮ ಆಕ್ರೋಶ ವ್ಯಕ್ತಪಡಿಸುತ್ತಾರೆ. ಬಲಿಯಾದ ಕೋಣದ ಮಾಂಸವನ್ನು ನಿನಗಿಷ್ಟು ನನಗಿಷ್ಟು ಎಂಬಂತೆ ಗುಡ್ಡೆ ಹಾಕಿಕೊಂಡರು. ದಸಂಸ ಎಂಬ ಒಟ್ಟುಗೂಡಿದ್ದ ನೈತಿಕ ಆಕ್ರೋಶವನ್ನು ತಲೆಗೆ ತೋಚಿದಂತೆ ಕಡಿದು, ತಲೆಗೊಂದರಂತೆ ಸಂಘಟನೆಗಳನ್ನು ಮಾಡಿಕೊಂಡು ಲೆಟರ್‌ಹೆಡ್ ಅನ್ನು ಅಚ್ಚು ಹಾಕಿಸಿಕೊಂಡು ಸರ್ಕಾರಿ ಕಛೇರಿಗಳ ಸುತ್ತಾ ಗಿರಕಿ ಹೊಡೆಯಲಾರಂಭಿಸಿದರು. ಬಿ. ಕೃಷ್ಣಪ್ಪನವರು ಮಾತ್ರ ಈ ಎಲ್ಲವನ್ನೂ ನೋಡುತ್ತಲೆ ಕೊನೆಯುಸಿರೆಳೆದುಬಿಟ್ಟರೆಂದು ವ್ಯಕ್ತಪಡಿಸುವಲ್ಲಿ ದಸಂಸದ ಇಂದಿನ ಸ್ಥಿತಿ-ಗತಿಯ ಸ್ಪಷ್ಟ ಚಿತ್ರ ನೀಡಲೆತ್ನಿಸುತ್ತಾರೆ ಅದ್ದೆ (ಅಗ್ನಿ: ೫ ಏಪ್ರಿಲ್ ೧೯೯೯ : ೧೦-೧೧). ಇವುಗಳಿಗಿಂತಲೂ ಹೆಚ್ಚು ಖಾರವಾದ, ಖಚಿತವಾದ ಪ್ರತಿಕ್ರಿಯೆಗಳು ಕಂಡುಬರುವುದರಿಂದ, ದಸಂಸದ ಪರಿಸ್ಥಿತಿ ಕುರಿತು ಹೆಚ್ಚು ವಿವರಿಸುವ ಅಗತ್ಯವಿಲ್ಲ. ಒಂದು ಮಾತಂತೂ ಸ್ಪಷ್ಟ : 'ಅಸ್ಪೃಶ್ಯರ ಸಮಗ್ರ ಬಿಡುಗಡೆಗೆ ದಲಿತ ಸಂಘರ್ಷ ಸಮಿತಿಯೇ ಉಳಿದಿರುವ ಆಶೆ' ಎಂದು ತಮ್ಮ ಮನದಾಳದ ಬಯಕೆಯನ್ನು ತೋಡಿಕೊಂಡ ಪ್ರೊ. ಬಿ. ಕೃಷ್ಣಪ್ಪನವರು, ತಮ್ಮ ಎದುರಲ್ಲೆ ದಸಂಸ 'ಪರಿನಿರ್ವಾಣ' ಕೈಗೊಂಡುದನ್ನು ಕಣ್ಣಾರೆ ಕಂಡರು.

ಡಾ. ಅಂಬೇಡ್ಕರ್‌ರ ರಿಪಬ್ಲಿಕನ್ ಪಕ್ಷ ರಾಜಕೀಯ ಪಕ್ಷವಾಗಿ ಆಳುವ ವರ್ಗಗಳ ದಾಸ್ಯದಲ್ಲಿ ಸೋತಿರುವ ಉದಾಹರಣೆ ಎದುರಿಗೇ ಇರುವಾಗ, ದಲಿತ ಚಳಿವಳಿ ಒಂದು ರಾಜಕೀಯ ಪಕ್ಷವಾಗಿ ಗೆಲ್ಲಲು ಹೇಗೆ ಸಾಧ್ಯವೆಂಬ ತಾತ್ವಿಕ ಪ್ರಶ್ನೆಯೂ ಮೇಲೇಳುತ್ತದೆ. ಇದಕ್ಕೆ ದೊರೆಯುವ ಉತ್ತರವೆಂದರೆ, ಮೂಲದಲ್ಲಿ ದಲಿತ ಚಳವಳಿ ರಾಜಕೀಯ ಪಕ್ಷವಾಗಿರದೆ ಅದೊಂದು ಪ್ರಗತಿಪರ ಧೋರಣೆಯುಳ್ಳ ಸಾಂಸ್ಕೃತಿಕ ಜನಸಂಘಟನೆಯೆಂಬ ವಿವರಣೆ. ಜಾತಿಪದ್ಧತಿ ಮತ್ತು ಜನವಿರೋಧಿ ಸಾಂಸ್ಕೃತಿಕ ಮೌಲ್ಯಗಳ ವಿರುದ್ಧ ಹೋರಾಟ ನಡೆಸುವಷ್ಟರ ಮಟ್ಟಿಗೆ ದಲಿತ ಚಳವಳಿಗೆ ಮಿತಿಯಿದೆಯೆಂಬುದನ್ನು ಎತ್ತಿ ತೋರಿಸಲಾಗುತ್ತದೆ. ಆದರೆ ದಲಿತ ಮತ್ತು ದಲಿತ ಸಾಹಿತ್ಯಗಳೆರಡೂ ಕೇವಲ ಸಾಂಸ್ಕೃತಿಕ ಚಳವಳಿಗೆ ಸೀಮಿತವಾಗಿರದೆ ಅವು ಪ್ರಧಾನವಾಗಿ ರಾಜಕೀಯ ಸಮಸ್ಯೆಗಳೆಂದು ವ್ಯಾಖ್ಯಾನಿಸಲಾಗುತ್ತದೆ. ಒತ್ತಿ ಹೇಳಲಾಗುವ ಅಂಶವೆಂದರೆ, ರಾಜಕೀಯವೇ ಅವುಗಳ ಬೆನ್ನೆಲುಬು ಎಂಬುದು. ಇದನ್ನು ಸಮರ್ಥಿಸುವಂತೆ ದಸಂಸದ ನಾಯಕರು ಜನತಾ- ಜನತಾದಳ-ಬಹುಜನ ಸಮಾಜ ಪಕ್ಷ(ಬಿ.ಎಸ್.ಪಿ.)ಗಳೊಡನೆ ನಿರಂತರ ಸಂಬಂಧವಿರಿಸಿಕೊಂಡು ಮುಂದುವರೆದುದು, ಮುಂದುವರೆಯುತ್ತಿರುವುದು ಗಮನಕ್ಕೆ ಬರುತ್ತದೆ. ಕೇವಲ 'ಭಾವುಕತೆಯ' ನೆಲೆಯಲ್ಲಿ ಸೊರಗುತ್ತಿರುವ ದಲಿತ ಕಾರ್ಯಕರ್ತರು, ಪಕ್ಷ ರಾಜಕಾರಣ ಸಂಬಂಧದಿಂದ ತಮ್ಮ ಕಣ್ಣೆದುರಿಗೇ ತಮ್ಮ ನಾಯಕರು ಬದಲಾಗುತ್ತಾ ಸಂಘಟನೆಯ ಹಾದಿ ತಪ್ಪಿಸುತ್ತಿರುವುದನ್ನು ಕಂಡೂ ಕಾಣದಂತೆ ಸಹಿಸಿಕೊಳ್ಳುತ್ತಿರುವುದನ್ನು ಇನ್ನೊಂದು ಕಾರಣವಾಗಿ ಗುರುತಿಸಲಾಗುತ್ತದೆ; ದುರಂತಗಳಲ್ಲೊಂದೆಂಬುದಾಗಿ ವ್ಯಾಖ್ಯಾನಿಸಲಾಗುತ್ತದೆ.

* * *

ದಲಿತರಲ್ಲಿ ಆತ್ಮವಿಶ್ವಾಸ ಮೂಡಿಸಿದ, ದಲಿತರ ಬದುಕಿನಲ್ಲಿ ಹೊಸ ಅರ್ಥ-ಆಶಯಗಳನ್ನು ಮೂಡಿಸಲೆತ್ನಿಸಿದ ದಸಂಸ ಒಡೆದು ಹೋಳಾದ ಸಂದರ್ಭವನ್ನು ಸ್ಥೂಲವಾಗಿಯಾದರೂ ವಿಶ್ಲೇಷಿಸುವ ಅಗತ್ಯವಿದೆ. ಅಂದಿನ ಜನತಾ ಪಕ್ಷವನ್ನು ದಸಂಸ ಬೆಂಬಲಿಸಿತೆನ್ನುವ ಹಿನ್ನೆಲೆಯಲ್ಲಿ, ಹಾಗೂ ಆ ಮೂಲಕ ರಾಜ್ಯ ಸಂಚಾಲಕರು (ದೇವನೂರು ಮಹಾದೇವ) ಸಂಘಟನೆಗೆ 'ಎಳ್ಳು-ನೀರು' ಬಿಡುತ್ತಿರುವರೆಂಬ 'ಸುದ್ದಿಗಳನ್ನು ಓದಿ' ಏಕಕಾಲದಲ್ಲಿ 'ದುಃಖ, ನಿರಾಶೆ ಮತ್ತು ಆಕ್ರೋಶ'ಗಳನ್ನು ಅನುಭವಿಸಿದ ಪ್ರೊ. ಬಿ. ಕೃಷ್ಣಪ್ಪನವರು ಅವರಿಗೆ ಪತ್ರಮುಖೇನ ಪ್ರತಿಕ್ರಿಯಿಸಿದರು. (ಮೂಲಪತ್ರದ ಯಥಾಪ್ರತಿಗೆ ನೋಡಿ: ಚಾಂಡಾಳ: ೧೯೯೨: ೧೬೭-೧೬೮). ಅವರು ರಾಜ್ಯ ಸಂಚಾಲಕರಿಗೆ ಬರೆದ ಪತ್ರದಲ್ಲಿಯ ಕೆಲವು ಸಾಲುಗಳನ್ನು ಇಲ್ಲಿ ಉದ್ಧರಿಸುವುದು ಉಚಿತವೆನಿಸುತ್ತದೆ. "ದಸಂಸ ಮೂಲತಃ ಒಂದು ಚಳವಳಿ - ಹೋರಾಟ ಎಂದು ನಾನು ಭಾವಿಸಿದ್ದೇನೆ. ರಾಜಕಾರಣಕ್ಕೂ-ಹೋರಾಟಕ್ಕೂ ಬಹಳ ದೂರ. ರಾಜಕಾರಣ ಮಾಡ ಹೊರಟವರು ಚಳವಳಿ-ಹೋರಾಟ ಗಳನ್ನು ಕೊಂದಿದ್ದಾರೆ ಎನ್ನುವುದಕ್ಕೆ ಇತಿಹಾಸ ಅಸಂಖ್ಯ ಉದಾಹರಣೆಗಳನ್ನು ಒದಗಿಸಿದೆ..." - ಇವೇ ಆ ಸಾಲುಗಳು. 'ಅನ್ನ-ನೀರಿಲ್ಲದೆ, ಕಣ್ಣಿಗೆ ನಿದ್ದೆ ಇಲ್ಲದೆ ಕಟ್ಟಿದ ಸಂಘಟನೆ' ಈ ದಸಂಸ ಎಂತಲೂ ಅವರು ಪ್ರಸ್ತಾಪಿಸಿರುವರು. ಹಾಗಾದರೆ, ಅವರೇ ಕಟ್ಟಿದ ದಸಂಸ ಅವರ ಎದುರಿಗೇ ಕುಸಿದುದು ಹೇಗೆ? ಕೇವಲ ಹೋರಾಟದ ನೆಲೆಯಲ್ಲಿ ತನ್ನ

ಅಸ್ತಿತ್ವ ಕಂಡುಕೊಂಡ ದಸಂಸ ರಾಜಕಾರಣದೊಡನೆ ನಂಟು ಬೆಳೆಸಿಕೊಂಡೊಡನೆ ದುರ್ಬಲಗೊಂಡಿತೇ? ಇದನ್ನು ಅರಿತಿದ್ದೂ ಕೃಷ್ಣಪ್ಪನವರು ಆ ನಂತರ ಬಿ.ಎಸ್.ಪಿ.ಯನ್ನು ಪ್ರವೇಶಿಸಿದ್ದು ಹೇಗೆ?

ಸ್ವತಃ ಕೃಷ್ಣಪ್ಪನವರೇ ಇದಕ್ಕೆ ತಕ್ಕ ವಿವರಣೆ ನೀಡಿದ್ದಾರೆ. ಮೊದಲಿಗೆ, ದಸಂಸ ಎಡವಿದ ಬಗೆಗೆ ಅಥವಾ ತಪ್ಪು ಮಾಡಿದ ಬಗೆಗೆ ಅವರು ಹೇಳುವುದು, ದಸಂಸದಲ್ಲಿ 'ಯಥಾಸ್ಥಿತಿವಾದ' ನಿಧಾನವಾಗಿ ನುಸುಳಿದ್ದು; ದಸಂಸ ಆರಂಭಿಸಿದ ಸಂಘರ್ಷವನ್ನು ದಮನ ಮಾಡಲು ರೈತ ಚಳವಳಿ (ಫ್ಯೂಡಲ್ ಚಳವಳಿ ಅಥವಾ ಶ್ರೀಮಂತ ರೈತರ ಚಳವಳಿ)ಯು ಬಳಕೆಯಾದದ್ದು; ಫ್ಯೂಡಲ್ ಶಕ್ತಿಗಳೊಡನೆ ರಾಜಕೀಯ ಹೊಂದಾಣಿಕೆ ಮಾಡಿಕೊಂಡದ್ದು. ಈ ಮೂರು ಮುಖ್ಯ ಕಾರಣಗಳನ್ನು ತೋರಿಸುವುದರೊಡನೆ ಅವರು ಮುಂದುವರೆದು ಹೇಳಿದುದು, ದಸಂಸದ ನಾಯಕರು ಜನತಾದಳ ಏಜೆಂಟರಾಗಿ ಸಂಘಟನೆಯ ಮೂಲಸತ್ವವನ್ನು ನಾಶ ಮಾಡಿದರು ಎಂಬುದನ್ನು.

ದಸಂಸದ ರಾಜಕೀಯ ಪ್ರವೇಶ ಕುರಿತು ಅವರು ತಮ್ಮ ನಿಲುವನ್ನು ವಿವರಿಸಿದುದೇನೆಂದರೆ, ನಾಶವಾಗುತ್ತಿರುವ ಸಂಘಟನೆಯ ಮೂಲಸತ್ವವನ್ನು ದಸಂಸಕ್ಕೆ ಮತ್ತೆ ತಂದುಕೊಡಬೇಕು; ಸಂಘರ್ಷ, ಸ್ವಾಭಿಮಾನ, ಪ್ರತಿಭಟನೆ ಇವು ದಸಂಸದ ಮೂಲಧ್ಯೇಯ, ಮೂಲ ಆಶಯ ಆಗಬೇಕು; ಸಮಾಜದ ಪರಿವರ್ತನೆಯೆಂಬುದು 'ಪೊಲಿಟಿಕಲ್ ಪವರ್' ಹಿಡಿಯುವುದರ ಮೂಲಕವೇ ಆಗುವಂಥಾದ್ದು; ಈ ರಾಜಕೀಯ-ಅಧಿಕಾರವನ್ನು ಹಿಡಿಯಬೇಕು ಎನ್ನುವುದಾದರೆ ನಾವು 'ಬ್ಯಾಕ್‌ವರ್ಡ್ ಕ್ಲಾಸ್' ಜತೆಗೆ ಸೇರಿಕೊಂಡು ನಮ್ಮ ಶಕ್ತಿಯನ್ನು ಹೆಚ್ಚಿಸಿಕೊಳ್ಳಬೇಕು (ವಿವರಗಳಿಗೆ : ಪ್ರೊಫೆಸರ್ 'ಬೀಕೆ' ಬಿಚ್ಚುನುಡಿ : ೧೯೯೮ : ೨೧-೨೩, ೨೯).

ದಸಂಸವನ್ನು ರಾಜಕೀಯ ಪ್ರವೇಶಗೊಳಿಸುವ ಪ್ರಯತ್ನವನ್ನಾರಂಭಿಸಿದ ಕೃಷ್ಣಪ್ಪನವರು, ತಾವೂ ಸೇರಿಕೊಂಡಂತೆ ಮೂರು ಜನರ ರಾಜ್ಯ ಸಮಿತಿಯನ್ನು ರಚಿಸಿದರು. ಇವರೊಡನಿದ್ದ ಇನ್ನಿಬ್ಬರು ಸದಸ್ಯರೆಂದರೆ ಶ್ರೀಧರ ಕಲಿವೀರ ಮತ್ತು ಸಿ. ಕೆ. ಮಹೇಶ್. ದೀರ್ಘ ಚರ್ಚೆಯ ನಂತರ ಡಾ. ಅಂಬೇಡ್ಕರರ ರಾಜಕೀಯ ಸಿದ್ಧಾಂತವೇ ಅಂತಿಮವೆಂದು ಘೋಷಿಸಿದ ಸಮಿತಿ, ಅಂಥಾ ಸಿದ್ಧಾಂತವನ್ನು ಆಧರಿಸಿದಂಥಾ ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾ (ಆರ್.ಪಿ.ಐ.) ಮತ್ತು ಬಹುಜನ ಸಮಾಜ ಪಕ್ಷ (ಬಿ.ಎಸ್.ಪಿ.) ರಾಜಕೀಯ ಪಕ್ಷಗಳನ್ನು ತಮ್ಮ ರಾಜಕೀಯ ವೇದಿಕೆ ಮಾಡಿಕೊಳ್ಳಲು ಉದ್ದೇಶಿಸಿತು. ಆರ್.ಪಿ.ಐ. ಪಕ್ಷ ಈಗಾಗಲೇ ಹೆಸರು ಕೆಡಿಸಿಕೊಂಡು ಹಾಳಾಗಿಬಿಟ್ಟಿದೆಯೆಂದು ಘೋಷಿಸಿದ್ದರಿಂದ ಅದನ್ನು ಕೈಬಿಡಲಾಯಿತು. ಆದರೆ ಆಗಾಗಲೇ ಒಂದು ರಾಜ್ಯದಲ್ಲಿ ಅಧಿಕಾರ ಗ್ರಹಣ ಮಾಡಿದ್ದ ಬಿ.ಎಸ್.ಪಿ.ಯನ್ನೇ ತಮ್ಮ ರಾಜಕೀಯ ಪಕ್ಷವಾಗಿ ಆಯ್ಕೆ ಮಾಡಿಕೊಳ್ಳುವುದು ಉಚಿತವೆನಿಸಿತು. ಪ್ರೊ. ಕೃಷ್ಣಪ್ಪ ಹಾಗೂ ಅವರ ಬಣದವರು ಬಿ.ಎಸ್.ಪಿ.ಯತ್ತ ವಾಲಿದುದು ಹೀಗೆ.

ಪ್ರೊ. ಕೃಷ್ಣಪ್ಪನವರು ಬಿ.ಎಸ್.ಪಿ.ಗೆ ಹೋಗುವ ನಿಲುವು ತಳೆದ ನಂತರ ಕೆಲವಾರು ಬೆಳವಣಿಗೆಗಳು ಉಂಟಾದವು. ಇದನ್ನು ಒಂದು ವಿವಾದವಾಗಿ ಬೆಳೆಸುವ ಎಲ್ಲಾ ಪ್ರಯತ್ನಗಳೂ ನಡೆದವು. ವಾಸ್ತವದಲ್ಲಿ, ಉತ್ತರಪ್ರದೇಶದಲ್ಲಿ ಬಿ.ಎಸ್.ಪಿ.ಯು ಬಿ.ಜೆ.ಪಿ. ಜತೆ ಹೊಂದಾಣಿಕೆ ಮಾಡಿಕೊಂಡಿದ್ದರಿಂದ ದಸಂಸದ ಕೆಲವು ಮುಖಂಡರು ಸಿಟ್ಟಿಗೆದ್ದು

ಕಾರಣವಾಯಿತೆಂಬುದು ಇಲ್ಲಿ ಮುಖ್ಯವಾಗುತ್ತದೆ. ಈ ಕಾರಣದಿಂದಲೇ ಬಿ.ಎಸ್.ಪಿ. ಮತ್ತು ದಸಂಸಗಳ ನಡುವಣ ಬಾಂಧವ್ಯ ಕಡಿದುಬಿದ್ದಿತೆಂದು ವ್ಯಾಖ್ಯಾನಿಸಲಾಗುತ್ತದೆ. ಇದೇ ವೇಳೆಗೆ, ಕ್ರಿಶ್ಚಿಯನ್ ಮಿಷನರಿಗಳು ಮತ್ತು ಬಿ.ಎಸ್.ಪಿ. ಮುಖಂಡರು ಸೇರಿಕೊಂಡು ದಸಂಸವನ್ನು ಒಡೆಯಲೆತ್ನಿಸಿರುವರೆಂಬ ಆರೋಪವೂ ಕೇಳಿ ಬಂದಿತು. ದಲಿತ ಕ್ರಿಶ್ಚಿಯನ್ನರಿಗೆ ಪ್ರತ್ಯೇಕ ಮೀಸಲಾತಿ ನೀಡಬೇಕು; ಪರಿಶಿಷ್ಟ ಜಾತಿ ಮತ್ತು ಪಂಗಡದ ಮೀಸಲಾತಿಯಲ್ಲಿ ಅವರಿಗೆ ಪಾಲು ಕೊಡಬಾರದೆಂದು ದಸಂಸ ಒತ್ತಾಯಿಸಿದುದು ಇಂಥಾ ಒಡಕಿಗೆ ಕಾರಣವಾಯಿತೆಂದು ವ್ಯಕ್ತಪಡಿಸಲಾಯಿತು.

ಪ್ರೊ. ಕೃಷ್ಣಪ್ಪನವರ ರಾಜಕೀಯ ನಿಲುವನ್ನು ವಿರೋಧಿಸುವವರ ಜತೆ ದಳ ಸರ್ಕಾರದ ಕೆಲವು ಸಚಿವರೂ ಸೇರಿರುವರೆಂಬ ಗುಮಾನಿ ಉಂಟಾಯಿತು. ಕೃಷ್ಣಪ್ಪನವರು ತಾವಾಗಿಯೇ ಬಿ.ಎಸ್.ಪಿ.ಗೆ ಹೋಗಲಿಲ್ಲ; ಕರ್ನಾಟಕ ದಸಂಸ ರಾಜ್ಯ ಘಟಕವೇ ಅವರನ್ನು ಸರ್ವಾನುಮತದಿಂದ ಬಿ.ಎಸ್.ಪಿ.ಗೆ ಕಳುಹಿಸಿತೆಂದು ಅವರ ಪರವಾಗಿದ್ದವರು ಸಮರ್ಥಿಸತೊಡಗಿದರು. ಬಿ.ಎಸ್.ಪಿ.ಯಲ್ಲಿ ಕೃಷ್ಣಪ್ಪನವರು ಇರುವುದು ಅವರ ವೈಯಕ್ತಿಕ ನಿಲುವನ್ನು ಆಧರಿಸಿ ಎಂಬ ಟೀಕೆಯನ್ನು ತಿರಸ್ಕರಿಸಿದ ದಸಂಸದ ಕೆಲವು ಮುಖಂಡರು, ದಲಿತ ಚಳವಳಿಯನ್ನು ಒಡೆಯುವ ದಳ ಸರ್ಕಾರದ ಹುನ್ನಾರದಲ್ಲಿ ವಿರೋಧಕರು ಶಾಮೀಲಾಗಿದ್ದಾರೆಂದು ದೂರಿದರು.

ದಸಂಸ ರಾಜಕೀಯೇತರ ಸಂಘಟನೆಯಾಗಿದ್ದಾಗ ಒಂದು ವಿಧದಲ್ಲಿ ಎಲ್ಲವೂ ಸಲೀಸಾಗಿ ನಡೆಯುತ್ತಿದ್ದಿತು; ಮುಖಂಡರುಗಳಲ್ಲಿ ಹೊಂದಾಣಿಕೆ ಇದ್ದಿತೆಂಬುದು ತಕ್ಕಮಟ್ಟಿಗೆ ಒಪ್ಪತಕ್ಕ ಮಾತೇ. ಆದರೆ ಬಿ.ಎಸ್.ಪಿ.ಯೊಡನೆ ರಾಜಕೀಯ ಸಂಬಂಧ ಏರ್ಪಡಿಸಿ ಕೊಳ್ಳುತ್ತಿದ್ದಂತೆಯೇ ದಸಂಸದಲ್ಲಿ ಬಿಕ್ಕಟ್ಟು ಶುರುವಾಯಿತೆಂಬುದನ್ನು ಒಪ್ಪದಿರಲೂ ಕಷ್ಟವಾಗುತ್ತದೆ. ಇಷ್ಟಿದ್ದರೂ ದಸಂಸದ ಕೆಲವು ಪ್ರಾಂತೀಯ ಮುಖಂಡರು ಜನತಾದಳದೊಡನೆ ಹೊಂದಾಣಿಕೆ ಮಾಡಿಕೊಂಡು ಚುನಾವಣೆಯಲ್ಲಿ ಸ್ಪರ್ಧಿಸುವ ಮನೋಧರ್ಮ ಪ್ರದರ್ಶಿಸಿದುದರಿಂದ ಆದ ಪರಿಣಾಮವಾಗಿ, ಬಿ. ಕೃಷ್ಣಪ್ಪನವರ ಬಣ ಮತ್ತು ದಸಂಸದ ಇನ್ನೋರ್ವ ಮುಖಂಡ ಡಿ.ಜಿ. ಸಾಗರರ ಬಣಗಳ ನಡುವೆ ಸಹಜವಾಗಿಯೇ ಬಿಕ್ಕಟ್ಟು ಉಂಟಾಯಿತೆಂಬ ಅಭಿಪ್ರಾಯವೇ ವ್ಯಾಪಕವಾಗಿದೆ. ಆ ನಂತರ ಎರಡು ಬಣಗಳವರೂ ಆರೋಪ- ಪ್ರತ್ಯಾರೋಪಗಳ ಬಿರುಮಳೆಯನ್ನೆ ಸುರಿಸಿದರು. ದಸಂಸದ ಆಶಯಗಳನ್ನು ಗಾಳಿಗೆ ತೂರಿ ಅದನ್ನು ರಾಜ್ಯ ಜನತಾದಳದ ಪರಿಶಿಷ್ಟ ಜಾತಿಯ ಸೆಲ್ಲಾಗಿ ಪರಿವರ್ತಿಸಿದ ಆರೋಪವನ್ನು ಬಿ. ಕೃಷ್ಣಪ್ಪ ಬಣದವರು ಡಿ. ಜಿ. ಸಾಗರರ ಮೇಲೆ ಹೊರಿಸಿದರೆ; ದಸಂಸವನ್ನು ಬಿ.ಎಸ್.ಪಿ.ಯ ಸೆಲ್‌ನಂತೆ ಬಳಸಿಕೊಳ್ಳ ಬಯಸಿದ ಕೃಷ್ಣಪ್ಪನವರು ಅಂಬೇಡ್ಕರ್ ವಿಚಾರಧಾರೆಯನ್ನು ಮರೆತಿದ್ದು, ಅವರಿಗೆ ಈಗ ಕಾನ್ಷೀರಾಂ ಅವರು ಆರಾಧ್ಯದೈವವಾಗಿದ್ದಾರೆಂದು ಸಾಗರ್ ಬಣದವರು ಟೀಕಿಸಿದರು. ಯಾವುದು ನಿಜವಾದ ದಸಂಸ ಎಂಬ ಜಿಜ್ಞಾಸೆ ಆರಂಭವಾದುದು ಆಗಲೇ.

ಪ್ರೊ. ಬಿ. ಕೃಷ್ಣಪ್ಪ ಬಣದ ಮಾವಳ್ಳಿ ಶಂಕರ್, ಎಂ. ಜಯಣ್ಣ, ದೇವದಾಸು ಮೊದಲಾದವರು ತಾವು ಚಿತ್ರದುರ್ಗದಲ್ಲಿ ಕರೆದ ಸಭೆಯೊಂದರಲ್ಲಿ (ಡಿಸೆಂಬರ್ ೧೯೯೭), ತಮ್ಮದೇ ನಿಜವಾದ ರಾಜ್ಯ ಸಂಘಟನೆಯೆಂದು ಘೋಷಿಸುವುದರೊಡನೆ ಎದುರು ಬಣದ

ಮುಖಂಡ ಡಿ.ಜಿ. ಸಾಗರರನ್ನು ಸಂಘಟನೆಯಿಂದ ಐದು ವರ್ಷಕಾಲ ಉಚ್ಚಾಟಿಸುವ ನಿರ್ಣಯ ಕೈಗೊಂಡರು; ವಿವಾದಕ್ಕೆ ಹೊಸ ತಿರುವು ನೀಡಿದರು. ಈ ನಿರ್ಣಯದ ವಿರುದ್ಧ ಪ್ರತಿ ಹೇಳಿಕೆ ನೀಡಿದ ಸಾಗರ್ ಬಣ, 'ಈ ಸಭೆ ಕೈಗೊಂಡ ನಿರ್ಣಯಗಳಿಗೆ ಯಾವುದೇ ರೀತಿಯ ಬೆಲೆಯಿಲ್ಲ'ವೆಂದು ಖಾರವಾಗಿ ಪ್ರತಿಕ್ರಿಯಿಸಿತು. ಒಟ್ಟಿನಲ್ಲಿ, ದಸಂಸ ಒಡೆದು ಎರಡು ಪ್ರಮುಖ ಹೋಳುಗಳಾಗುವುದರೊಡನೆ ರಾಜ್ಯ ದಸಂಸದ ಕಾರ್ಯಕರ್ತರಲ್ಲಿ ಗೊಂದಲದ ಅಲೆಗಳನ್ನು ಸೃಷ್ಟಿಸಿದುದು ವಾಸ್ತವ ಸಂಗತಿ. ಕಾರ್ಯಕರ್ತರು ರಾಜ್ಯಮಟ್ಟದ ಎರಡು ಬಣಗಳ ಮಧ್ಯೆ ಹರಿದು ಹಂಚಿಹೋದರು. ಡಿ.ಜಿ. ಸಾಗರರ ಬಣ ಜನತಾದಳದತ್ತ ಮತ್ತು ಎಂ. ಜಯಣ್ಣ ಅವರ ಬಣ ಬಿ.ಎಸ್.ಪಿ.ಯತ್ತ ಒಲವು ತೋರಿದುದು ದಸಂಸದಲ್ಲಿ ಒಡಕು ಉಂಟಾಗಲು ಮುಖ್ಯ ಕಾರಣವೆಂದು ಸ್ಪಷ್ಟಪಟ್ಟಿತು. ಎರಡೂ ಬಣಗಳು ಹೊಂದಿದ ರಾಜಕೀಯ ಸಂಬಂಧಗಳಿಂದಾಗಿ ದಸಂಸ ದಿಕ್ಕುತಪ್ಪಿತು.

ದಸಂಸದಲ್ಲಿ ಉಂಟಾದ ಈ ಮೇಲಿನ ಬೆಳವಣಿಗೆಗಳಿಂದ ಕರ್ನಾಟಕದಲ್ಲಿ ದಲಿತ ಚಳವಳಿ ನೆಲೆ-ಬೆಲೆ ಎರಡನ್ನೂ ಕಳೆದುಕೊಂಡಿತೆಂಬುದು ದಿಟ. ಒಳಜಗಳಗಳಿಂದ ತನ್ನ ಮಹತ್ವ ಮತ್ತು ಕ್ರಿಯಾಶೀಲತೆಗಳನ್ನು ಕಳೆದುಕೊಳ್ಳಲಾರಂಭಿಸಿದ್ದ ದಸಂಸ, ಈ ಘಟನೆಗಳ ತರುವಾಯ ಇನ್ನಷ್ಟು ದುರ್ಬಲಗೊಂಡಿತು; ಜನಸಾಮಾನ್ಯರ ದೃಷ್ಟಿಯಲ್ಲಿ 'ಹಗುರ' ಎನಿಸಿತು.

ಸರ್ಕಾರದ, ಮಂಡಳಿಗಳ ವಿವಿಧ ಕೇಂದ್ರಗಳಲ್ಲಿ ಅಧಿಕಾರ ಸ್ಥಾನಗಳನ್ನು ಪಡೆಯುವಲ್ಲಿಯೂ ದಲಿತ ನಾಯಕರು ನಡೆಸಿದ ಪೈಪೋಟಿ ಚಳವಳಿಯ ಹುರುಪನ್ನು ಕಡಿಮೆಗೊಳಿಸಿದುದು ನಿಜ. ದಲಿತ ಚಳವಳಿಯ ಓಸ್ನಡೆಯಾಗುತ್ತಿರುವಂತೆಯೇ, 'ದಲಿತ' ಪರಿಕಲ್ಪನೆಯ ಆಧಾರದ ಮೇಲೆ ಒಂದಾಗಿದ್ದ ಅಸ್ಪೃಶ್ಯ ಜಾತಿಗಳು ಮತ್ತೆ ಹಿಂದಿನಂತೆ ಹಾಗೂ ಎಂದಿನಂತೆ ತಮ್ಮ ತಮ್ಮ ಪ್ರತ್ಯೇಕತೆಯನ್ನು ಉಳಿಸಿಕೊಳ್ಳಲು ಅಥವಾ ಪಡೆದುಕೊಳ್ಳಲು ಹಿಂದಕ್ಕೆ ಸರಿಯತೊಡಗಿವೆಯೆಂತಲೇ ಬಹಳಷ್ಟು ಬುದ್ಧಿಜೀವಿಗಳು ಭಾವಿಸುವುದುಂಟು. ಈ ಜಾತಿಗಳು ವಿವಿಧ ರಾಜಕೀಯ ಸಂಘಟನೆಗಳಲ್ಲಿ ಪ್ರವೇಶ ಪಡೆಯುವುದರೊಡನೆ ತಮ್ಮ ಅಸ್ತಿತ್ವಕ್ಕೆ ಅರ್ಥ ಕಂಡುಕೊಳ್ಳಲು ಪ್ರಯತ್ನಿಸುತ್ತಲಿರುವುದು ಎದ್ದುಕಾಣುವಂಥಾದ್ದು. ಹೋರಾಟದ ವೇಳೆಗೆ 'ದಲಿತ'ರೆನಿಸಿಕೊಂಡ ಗುಂಪುಗಳು ಇದೀಗ ಮತ್ತೆ ಒಳಜಾತಿಗಳ ನೆಲೆಯಲ್ಲಿ ಪ್ರತ್ಯೇಕವಾಗುಳಿಯಲು ಪ್ರಯತ್ನಿಸುತ್ತಿರುವುದು ಸ್ಪಷ್ಟ. ದಲಿತಶಕ್ತಿಯಾಗಿ ಒಂದುಗೂಡಿ ಶೋಷಕಶಕ್ತಿಗಳಿಗೆ ಮುಖಾಮುಖಿಯಾದುದು ಒಂದು ಹಂತದ ಮಟ್ಟಿಗೆ ಎಷ್ಟು ನಿಜವೋ ಈಗ ಪ್ರತ್ಯೇಕ ಗುಂಪುಗಳಾಗಿ ಒಡೆದು ಶೋಷಕವರ್ಗಗಳಾಗಿ ರೂಪುಗೊಳ್ಳುತ್ತಿರುವುದೂ ಅಷ್ಟೇ ನಿಜ.

ಸಮಾಜದ ಇತರ ಸಂಘಟನೆಗಳೊಡನೆ ಬೆಸೆದುಕೊಂಡು ಹೋರಾಟ ನಿರ್ಧರಿಸುವುದು, ಚುನಾವಣಾ ದಾರಿಯಿಂದ ನಿರ್ಗಮಿಸುವುದು, ಚಳವಳಿಯನ್ನು ಕೇವಲ ಭಾವನಾತ್ಮಕವಾಗಿ ನೋಡದಿರುವುದು, ನಿಷ್ಠಾವಂತ ಕಾರ್ಯಕರ್ತರನ್ನು ತರಬೇತುಗೊಳಿಸುವುದು, ಜಾಗತೀಕರಣ-ಉದಾರೀಕರಣದ ನೆಪದಲ್ಲಿ ನ್ಯಾಯಬದ್ಧ ಮೀಸಲಾತಿಗೆ ಧಕ್ಕೆ ಒದಗದಂತೆ ನೋಡಿಕೊಳ್ಳುವುದು, ಭೌತಿಕವಾಗಿ ಮಾತ್ರ ಪ್ರವೇಶಿಸಿರುವ ಡಾ. ಅಂಬೇಡ್ಕರರನ್ನು ದಲಿತ ಬೌದ್ಧಿಕ ವಲಯವನ್ನು ಪ್ರವೇಶಿಸುವಂತೆ ಮಾಡುವುದು, ಕನ್ನಡದೊಡನೆ ಇಂಗ್ಲಿಷನ್ನು ಚೆನ್ನಾಗಿ ಕಲಿತುಕೊಳ್ಳುವ ನಿಟ್ಟಿನಲ್ಲಿ ಆಲೋಚಿಸುವುದು, ದಸಂಸದಲ್ಲಿ ಸಮರಶೀಲತೆಯನ್ನು ಮತ್ತು

ಸಂಘಟನಾ ಶಕ್ತಿಯನ್ನು ಮತ್ತೆ ತುಂಬುವುದು, ದಸಂಸವನ್ನು ಸಮರ್ಥ ನಾಯಕತ್ವದ ಬೆಂಬಲದೊಡನೆ ಮುನ್ನಡೆಸುವುದು, ಎಂದಿನಂತೆ ನಿರ್ದಿಷ್ಟ ಗೊತ್ತು-ಗುರಿಯೊಡನೆ ಸಾಮಾಜಿಕ ನೆಲೆಯಲ್ಲಿ ಹೋರಾಟ ಮಾಡಲು ಸಿದ್ಧಗೊಳಿಸುವುದು-ಹೀಗೆ ಹಲವು ನಿಟ್ಟಿನಿಂದ ವ್ಯಕ್ತಗೊಂಡ ಅಭಿಪ್ರಾಯಗಳು ಗಮನ ಸೆಳೆಯುತ್ತವೆ. ಒಟ್ಟಿನಲ್ಲಿ, ದಲಿತ ಚಳವಳಿ ಇಂದು ಸಂದಿಗ್ಧ ಸ್ಥಿತಿಯಲ್ಲಿದ್ದರೆ, ಕರ್ನಾಟಕ ದಲಿತ ಸಂಘರ್ಷ ಸಮಿತಿ ಆಪತ್ತಿನಲ್ಲಿದೆಯೆಂಬುದರಲ್ಲಿ ಸಂಶಯವಿಲ್ಲ.

### ೪.೪. ಬಹುಜನ ಸಮಾಜ ಪಕ್ಷ : ದಲಿತರ ರಾಜಕೀಯ ಆಯ್ಕೆ?

ದಲಿತ ಸಂಘರ್ಷ ಸಮಿತಿಯನ್ನು ಕರ್ನಾಟಕದಲ್ಲಿ ಸ್ಥಾಪಿಸಿ ಬೆಳೆಸಿದ ಪ್ರೊ.ಬಿ. ಕೃಷ್ಣಪ್ಪನವರು, ಡಾ.ಅಂಬೇಡ್ಕರ್‌ರ ನಂತರದ ವಿಮೋಚನಾಕಾರರೆಂದು ಗುರುತಿಸಲ್ಪಟ್ಟ ದಲಿತ ನೇತಾರ ಕಾನ್ಷೀರಾಂ ಅವರ ಬಹುಜನ ಸಮಾಜ ಪಕ್ಷ(ಬಿ.ಎಸ್.ಪಿ.)ದೊಡನೆ ಗುರುತಿಸಿಕೊಂಡುದು, ದಲಿತರನ್ನು ಎರಡು ಗುಂಪುಗಳಾಗಿ ಒಡೆಯಲು ಅದು ಕಾರಣವೆನಿಸಿದುದು ಈಗ ಚರಿತ್ರೆಯಾಗಿದೆ. ೧೯೭೪ರಲ್ಲಿ ಭದ್ರಾವತಿಯಲ್ಲಿ ಜನಿಸಿದ ದಸಂಸ ಸರಿಯಾಗಿ ೨೦ ವರ್ಷಗಳ ನಂತರ, ಅಂದರೆ ೧೯೯೪ರಲ್ಲಿ ಬಿ.ಎಸ್.ಪಿ.ಯನ್ನು ತನ್ನ ರಾಜಕೀಯ ಪಕ್ಷವನ್ನಾಗಿ ಒಪ್ಪಿಕೊಂಡಿತು. ಆ ನಂತರವೇ ಕಾನ್ಷೀರಾಮರು ಕರ್ನಾಟಕದಲ್ಲಿ ಬಿ.ಎಸ್.ಪಿ.ಯನ್ನು ಅಧಿಕೃತವಾಗಿ ಪ್ರಾರಂಭಿಸಲು ನಿರ್ಧರಿಸಿದರೆಂಬುದು ಸ್ಪಷ್ಟ. ಕಾನ್ಷೀರಾಮರು ಬಿ.ಎಸ್.ಪಿ.ಯ ರಾಷ್ಟ್ರೀಯ ಅಧ್ಯಕ್ಷರಾಗಿದ್ದರೆ, ಪ್ರೊ. ಕೃಷ್ಣಪ್ಪನವರು ರಾಜ್ಯ ಪ್ರಧಾನ ಕಾರ್ಯದರ್ಶಿಯಾದರು.

ಕರ್ನಾಟಕದಲ್ಲಿ ಬಿ.ಎಸ್.ಪಿ. ನೆಲೆಯೂರಿದ ಸಂದರ್ಭದ ಬಗೆಗೆ ಇಲ್ಲಿ ಗಮನಿಸಬೇಕು. ಈ ಸಂಬಂಧದಲ್ಲಿ ಶ್ರೀಧರ ಕಲಿವೀರರು ಒದಗಿಸುವ ವಿವರಗಳು ಉಪಯೋಗಕ್ಕೆ ಬರುತ್ತವೆ. ೧೯೯೪ಳ ಜೂನ್‌ನಲ್ಲಿ ಕಾನ್ಷೀರಾಮರು ಬಿ.ಎಸ್.ಪಿ. ರಾಜ್ಯ ಕಛೇರಿಯನ್ನು ಬೆಂಗಳೂರಿನಲ್ಲಿ ಉದ್ಘಾಟಿಸಿದರು. ೧೯೯೪ಳ ಜುಲೈ ೩ ರಂದು ಬೆಂಗಳೂರಿನಲ್ಲಿ ದಸಂಸ ಮತ್ತಿತರ ಸಂಘಟನೆಗಳಿಂದ ನಿಯೋಜಿಸಲ್ಪಟ್ಟ ಬಹುಜನ ಸಮಾವೇಶವು ಕರ್ನಾಟಕದ ರಾಜಕೀಯದಲ್ಲಿ ಹೊಸ ದಿಕ್ಸೂಚಿಯಾಗುವ ನಿರೀಕ್ಷೆ ಮೂಡಿಸಿತು. ರಾಜ್ಯದ ಹಲವಾರು ಹಿಂದುಳಿದ ಜಾತಿಗಳ ಸಂಘ-ಸಂಸ್ಥೆಗಳು, ಧಾರ್ಮಿಕ ಅಲ್ಪಸಂಖ್ಯಾತರ ಸಂಘ-ಸಂಸ್ಥೆಗಳು, ಜಾತ್ಯತೀತ ಒಲವುಳ್ಳ ಪ್ರಗತಿಪರರು ಸಾಮಾಜಿಕ ಪರಿವರ್ತನೆಯ ಈ ಆಂದೋಲನವನ್ನು ಬೆಂಬಲಿಸಿದರು. ಕರ್ನಾಟಕದಲ್ಲಿ ದೇವರಾಜ ಅರಸರ ಕಾಲದಿಂದ ಹಿಂದುಳಿದ ವರ್ಗಗಳಿಗೆ ರಾಜಕೀಯ ಅಧಿಕಾರ ಮತ್ತು ಹಾವನೂರು ಆಯೋಗದ ಮೂಲಕ ಮೀಸಲಾತಿ ಲಭಿಸಿದ್ದರೂ, ಇಲ್ಲಿಯ ಹಿಂದುಳಿದವರ ನಾಯಕತ್ವವು ದೆಹಲಿಯ ಮೇಲ್ಜಾತಿ ಮತ್ತು ಮೇಲ್ವರ್ಗಗಳ ಸೂಪರ್ ನಾಯಕರ ಹಿಡಿತದಲ್ಲಿದ್ದುದರಿಂದ ಈ ನಾಯಕತ್ವವು ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಬದಲಾಯಿಸಲು ವಿಫಲವಾಯಿತು. ಇಂಥಾ ನಾಯಕತ್ವದಿಂದ ಬಹುಜನ ಸಮಾಜದ ವಿಮುಕ್ತಿ ಸಾಧ್ಯವಿಲ್ಲ. ಮೇಲ್ಮಟ್ಟದಲ್ಲಿ ಬಹುಜನರಿಂದಲೇ ರಚಿತವಾದ ಬದಲಾವಣೆಗೆ ಗುರಿ ಹೊಂದಿದ ನಾಯಕತ್ವದಿಂದ ಮಾತ್ರ ವ್ಯವಸ್ಥೆಯಲ್ಲಿ ಪರಿವರ್ತನೆ ತರಬಹುದು. ೭೦ರ ದಶಕದಲ್ಲಿ ದಕ್ಷಿಣ ಭಾರತದಲ್ಲಿ ಬಲವಾದ ದಲಿತ ಚಳವಳಿಯನ್ನು ಸಂಘಟಿಸಿದ

ದಸಂಸವು ಹಮ್ಮಿಕೊಂಡ ಕಾರ್ಯಕ್ರಮಗಳು ಕಾನ್ಷೀರಾಮರು ಹಮ್ಮಿಕೊಂಡ ಕಾರ್ಯಗಳಂತೆಯೇ ಇವೆ (ಕಲಿವೀರ : ೧೯೯೪ : ೨೨).

ಕಾನ್ಷೀರಾಂ ವಿಚಾರಧಾರೆಯನ್ನು ಗಮನಿಸುವುದಾದರೆ, ಬಹುಜನ ಸಮಾಜ ಕಟ್ಟುವುದು ಅವರ ಆಂದೋಲನದ ಪ್ರಮುಖ ಧ್ಯೇಯ. ದಲಿತ, ಹಿಂದುಳಿದ ಮತ್ತು ಅಲ್ಪಸಂಖ್ಯಾತರ ಮಿಳಿತವೇ ಬಹುಜನ ಸಮಾಜವೆಂಬುದು ಅವರ ವಿವರಣೆ. ಅವರು ಹೇಳುವುದು, ರಾಜಕೀಯ ಶಕ್ತಿ ಹೊಂದುವುದರಿಂದ ಹಾಗೂ ಆಳ್ವಿಕೆ ಮತ್ತು ಆಡಳಿತಗಳಲ್ಲಿ ಭಾಗವಹಿಸುವುದರಿಂದ ಶೋಷಿತರಿಗೆ ಸ್ವಾತಂತ್ರ್ಯ ಲಭಿಸುತ್ತದೆ. ಬಹುಜನ ಸಮಾಜದ ಸದಸ್ಯರಿಗೆ ರಾಜಕೀಯ ಸಾಮರ್ಥ್ಯ ದೊರೆತುದಲ್ಲದೆ ಅವರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವುದು ಸಾಧ್ಯವಿಲ್ಲ. ಮತ್ತು ಆರ್ಥಿಕ ಸುಧಾರಣೆಯಾಗದೆ ಅವರು ರಾಜಕೀಯ ಕ್ಷೇತ್ರದಲ್ಲಿ ಸ್ಪರ್ಧಿಸಲು ಸಾಧ್ಯವಿಲ್ಲ. ಈ ಎರಡೂ ವಲಯಗಳು ಸೌಕರ್ಯವುಳ್ಳ ಕೆಲವರಿಂದ ಮಾತ್ರವೇ ಏಕಸ್ವಾಮ್ಯತ್ವವನ್ನು ಹೊಂದಿವೆ. ಬಹುಜನ ಸಮಾಜವು ಈ ಎರಡು ಅಸಹಾಯಕತೆಗಳಿಂದ ಉರಿಯುತ್ತದೆ (ಕಾನ್ಷೀರಾಂ : ೪೫). ಸಿ. ಕೆ. ಮಹೇಶ್ ಹೇಳುವಂತೆ, ಬಿ.ಎಸ್.ಪಿ. ಒಂದು ಸಂಘಟನೆಯೇ ಅಲ್ಲ, ಅದೊಂದು ಆಂದೋಲನ (ಮಹೇಶ್ : ೧೯೯೪ : ೫೪). ಆದರೆ ಕಾನ್ಷೀರಾಂ ಅವರ ಏಕವ್ಯಕ್ತಿ ನಾಯಕತ್ವವೇ ಬಿ.ಎಸ್.ಪಿ.ಯ ಯಶಸ್ಸಿನ ಹಿಂದಿರುವ ದೈತ್ಯ ಪ್ರತಿಭಾ ಶಕ್ತಿ ಎಂಬುದನ್ನು ಗಮನಿಸುವುದಾದರೆ, 'ವ್ಯಕ್ತಿಯೇ ಪಕ್ಷ'ವೆಂಬುದು ಪಕ್ಷಕ್ಕೆ ತಗುಲಿರುವ ದೊಡ್ಡ ದುರ್ಬಲ ಅಂಶವಾಗುತ್ತದೆಂಬ ಅಭಿಪ್ರಾಯವನ್ನು ಒಪ್ಪದಿರುವಂತಿಲ್ಲ. ಇಷ್ಟಾದರೂ ಬಹುಜನ ಸಮಾಜದಲ್ಲಿ ಒಂದು ನಿರ್ದಿಷ್ಟ ಪ್ರಜ್ಞೆ ಮೂಡಿಸುತ್ತಾ ರೂಪುಗೊಂಡ ಧುರೀಣರಾಗಿ, ದೇಶದ ಸಮಸ್ತ ಶೋಷಿತರ, ದಲಿತರ ವಿಮೋಚನೆಯಲ್ಲಿ ಪ್ರಾಮಾಣಿಕ ಕಾಳಜಿ ಹೊಂದಿದವರಾಗಿ ಕಾನ್ಷೀರಾಂ ಗುರುತಿಸಲ್ಪಡುತ್ತಾರೆ.

ಬಿ.ಎಸ್.ಪಿ.ಯು ಇತರ ರಾಜಕೀಯ ಪಕ್ಷಗಳು ಗಮನ ಹರಿಸದ ಐದು ವಿಧದ ಹೋರಾಟಗಳತ್ತ ಗಮನ ಹರಿಸಿತು. ಅವುಗಳೆಂದರೆ, ೧. ಸ್ವಾಭಿಮಾನ ಮತ್ತು ಆತ್ಮಗೌರವ, ೨. ಸಂಪೂರ್ಣ ಸ್ವಾತಂತ್ರ್ಯ, ೩. ಸಮಾನತೆ, ೪. ಜಾತಿವಿನಾಶ, ಜಾತಿ ಜಾತಿಗಳ ನಡುವೆ ಬಾಂಧವ್ಯ ಬೆಸುಗೆ ಕಾರ್ಯಕ್ರಮ, ೫. ಅಸ್ಪೃಶ್ಯತೆ, ಅನ್ಯಾಯ, ದೌರ್ಜನ್ಯ ಮತ್ತು ಭಯೋತ್ಪಾದನೆ ಮತ್ತು ಸರ್ಕಾರಿ ಭಯೋತ್ಪಾದನೆಗಳಿಗೆ ವಿರೋಧ. ಇವು ಬಿ.ಎಸ್.ಪಿ. ಕರೆಕೊಟ್ಟ ಐದು ವಿಧದ ಸಾಮಾಜಿಕ ಪರಿವರ್ತನ ಆಂದೋಲನಗಳು. ದಸಂಸ ಸಹಾ ಈ ನಿಟ್ಟಿನಲ್ಲಿ ಸಾಗಬೇಕಾಗಿರುವುದು ಸ್ಪಷ್ಟ. ಬಿ.ಎಸ್.ಪಿ.ಯ ಸಿದ್ಧಾಂತ ಮತ್ತು ಕಾರ್ಯಕ್ರಮಗಳುಳ್ಳ ಕೈಪಿಡಿಗೆ ಬರೆದ ಮುನ್ನುಡಿಯಲ್ಲಿ ಪ್ರೊ. ಕೃಷ್ಣಪ್ಪನವರು, ಭಾರತದ ರಾಜಕೀಯ ಇತಿಹಾಸದಲ್ಲಿ ಬಿ.ಎಸ್.ಪಿ. ಸಿದ್ಧಾಂತ ತುಳಿತಕ್ಕೊಳಗಾದ ಜನಸಮೂಹಕ್ಕೆ ಒಂದು ಹೊಸ ಆಯಾಮವನ್ನು ಒದಗಿಸಿಕೊಟ್ಟಿದೆಯೆಂದಿದ್ದರು. ೧೯೯೭ ಮಾರ್ಚ್‌ನಲ್ಲಿ ಮೈಸೂರಿನ ಸಭೆಯೊಂದರಲ್ಲಿ ಮಾಡಿದ ಭಾಷಣದಲ್ಲಿ, "೨೫ ವರ್ಷಗಳಷ್ಟು ಹಿಂದೆ ನಾನು ಆರಂಭಿಸಿದ ದಲಿತ ಚಳವಳಿಯ ನಾಯಕರು ಇಂದು, ಆಳುವ ಜಾತಿಗಳ ಮನೆ ಬಾಗಿಲಲ್ಲಿ ಭಿಕ್ಷೆ ಬೇಡುತ್ತಾ ನಿಂತಿದ್ದಾರೆ. ಆದರೆ ೧೩ ವರ್ಷಗಳ ಹಿಂದೆ, ಬಹುಜನ ಸಮಾಜ ಪಾರ್ಟಿಯನ್ನು ಕಟ್ಟಿದ ಕಾನ್ಷೀರಾಮರವರು, ಇಂಡಿಯಾದ ಅತಿ ದೊಡ್ಡ ರಾಜ್ಯದಲ್ಲಿ ಸರ್ಕಾರ ರಚಿಸಿದ್ದಾರೆ ಮತ್ತು ಇಡೀ ದಲಿತ ಸಮೂಹದ ನಡುವೆ ಸ್ವಾಭಿಮಾನವನ್ನು ತುಂಬಿದ್ದಾರೆ ಹಾಗೂ ನಾಳೆ ಈ

ನಾಡನ್ನು ಆಳುವ ಕನಸುಗಳನ್ನು ನಮಗೆ ಕೊಟ್ಟಿದ್ದಾರೆ" (ಮುನಿವೆಂಕಟಪ್ಪ : ೧೯೯೮ : ೧೫೧) ಎಂದಿದ್ದರು.

ಪ್ರೊ. ಕೃಷ್ಣಪ್ಪನವರು ೧೯೯೭ ಏಪ್ರಿಲ್ ೨೭ರಂದು, ದಲಿತ ಸಂಘಟನೆಗಳು ಮತ್ತು ದಲಿತ, ಹಿಂದುಳಿದ, ಅಲ್ಪಸಂಖ್ಯಾತ ಸಮುದಾಯಗಳು ರಾಜಕೀಯವಾಗಿ ಧ್ರುವೀಕರಣಗೊಂಡು ಸ್ವತಂತ್ರ ರಾಜಕೀಯ ಶಕ್ತಿಯಾಗಿ ಅಧಿಕಾರವನ್ನು ಹಿಡಿಯಬೇಕೆಂದು ನೀಡಿದ ಕರೆಯ ಪಾಠವನ್ನು ಇಲ್ಲಿ ಗಮನಿಸುವುದು ಅಗತ್ಯ: "...ಕಳೆದ ೨೫ ವರ್ಷಗಳಿಂದ ಕರ್ನಾಟಕದ ನೆಲದಲ್ಲಿ ಚಳುವಳಿಯನ್ನು ಮಾಡುತ್ತ ನಾವು ಸಾಧಿಸಿದ್ದು ಅತ್ಯಲ್ಪ. ನಮ್ಮ ಸಮಸ್ಯೆಗಳು ಹೆಚ್ಚು ರಾಜಕೀಯ ಅಧಿಕಾರಮೂಲವಾಗಿದ್ದು, ನಾವು ಸ್ವತಂತ್ರ ರಾಜಕೀಯ ಶಕ್ತಿಯಾಗಬೇಕಾದ ಅನಿವಾರ್ಯತೆ ಇದೆ. ಅದಕ್ಕಾಗಿ ನಾವು ಈಗಾಗಲೆ ಬಿ.ಎಸ್.ಪಿ.ಯನ್ನು ರಾಜಕೀಯ ಶಕ್ತಿಯನ್ನಾಗಿ ಒಪ್ಪಿಕೊಂಡಿರುತ್ತೇವೆ. ಇದರ ಮೇಲೆ ಚರ್ಚೆಮಾಡುವ ಅಗತ್ಯವಿಲ್ಲ. ನಮ್ಮ ಸಂಘಟನೆಗಳಿಗೆ ಮತ್ತು ಅವು ಪ್ರತಿಬಿಂಬಿಸುತ್ತಿರುವ ಆಶಯಗಳು ಅಂಬೇಡ್ಕರ್ ವಿಚಾರಗಳೇ ಆಗಿರುವುದರಿಂದ ನನಗೆ ಇಂದು ಅಂಬೇಡ್ಕರ್ ವಾದ, ವಿಚಾರಗಳು ಅತ್ಯಂತ ಜರೂರು, ಅನಿವಾರ್ಯವೂ ಆಗಿರುತ್ತವೆ. ಈ ಹಾದಿಯಲ್ಲಿ ನಾವು ಹೋಗಬೇಕಾಗಿದೆ. ಇದುವರೆಗೂ ಮಾರ್ಕ್ಸ್, ಲೋಹಿಯಾ, ಗಾಂಧಿ ಮುಂತಾಗಿ ವಿಚಾರ ಮಾಡುತ್ತಾ ನಾವು ಗೊಂದಲದಲ್ಲಿ ಬಿದ್ದು ನಮ್ಮ ಜನರನ್ನು ಗೊಂದಲಕ್ಕೆ ತಳ್ಳಿದ್ದೇವೆ. ಅಂಬೇಡ್ಕರ್ ವಿಚಾರದ ಅಡಿಯಲ್ಲಿ ಸಂಘಟನೆ ರಾಜಕೀಯ ಶಕ್ತಿಯಾಗಬೇಕಾಗಿದೆ. ಇದನ್ನು ನಾವು ಒಪ್ಪಿ ಸಂಘಟನೆಗೆ ತೊಡಗಿದ್ದೇವೆ. ದಲಿತರ ಬಿಡುಗಡೆಗೆ ಇದು ಹೊರತು ಮತ್ತಾವ ಮಾರ್ಗವಿಲ್ಲ ಎಂದು ಕಳೆದ ೨೧/೨ ದಶಕಗಳ ನಮ್ಮ ಅನುಭವವಾಗಿದೆ. ತಾವುಗಳೂ ಕೂಡ ಈ ದಾರಿಯಲ್ಲಿ ಬಂದು ದಲಿತರ ಬಿಡುಗಡೆಯ ಈ ಪವಿತ್ರ ಕಾರ್ಯದಲ್ಲಿ ಭಾಗಿಯಾಗುತ್ತೀರೆಂದು ಆಶಿಸುತ್ತೇವೆ" (ಕೊದ್ದಡ್ಡಿ: ೧೯೯೭ : ೪೮). ಪ್ರೊ. ಕೃಷ್ಣಪ್ಪನವರು ಬಿ.ಎಸ್.ಪಿ.ಯನ್ನು ದಲಿತರ ರಾಜಕೀಯ ಸಂಘಟನೆಯಾಗಿಸಲು ಸಂಕಲ್ಪಿಸಿದುದು ಅವರ ಮೇಲಿನ ಮಾತುಗಳಿಂದ ಸ್ಪಷ್ಟಗೊಳ್ಳುತ್ತದೆ.

ಡಾ. ಅಂಬೇಡ್ಕರ್ ಚಿಂತನೆಯ ಬೆಳಕಿನಲ್ಲಿ ದಸಂಸ ಮತ್ತು ಬಿ.ಎಸ್.ಪಿ.ಗಳ ನಡುವಣ ಸಂಬಂಧವನ್ನು ಕುರಿತು ವಿಶ್ಲೇಷಿಸಲೆತ್ನಿಸಿರುವ ಓ. ಶ್ರೀಧರನ್, ಬಿ.ಎಸ್.ಪಿ. ಯನ್ನು ದಸಂಸವು ತನ್ನ ರಾಜಕೀಯ ಆಯ್ಕೆಯನ್ನಾಗಿ ಒಪ್ಪಿಕೊಂಡಿರುವುದು ಸರಿಯಾಗಿದೆ ಎನ್ನುತ್ತಾರೆ. ಅವರು ಸಮರ್ಥಿಸುವಂತೆ, ಬಿ.ಎಸ್.ಪಿ.ಯು ದಸಂಸದ ಸ್ವಾಭಾವಿಕ ಆಯ್ಕೆಯೇ ಆಗಿದೆ. ಬೇರಾವ ರಾಜಕೀಯ ಪಕ್ಷವನ್ನು, ಅದರಲ್ಲೂ ಸಮಾಜವಾದಿಗಳಿಂದ ಕೂಡಿದ ಜನತಾದಳವನ್ನು ಸಮಿತಿ ಒಪ್ಪಲಾರದು. ಇಲ್ಲಿ ಸ್ವಲ್ಪ ಸ್ಪಷ್ಟ ವಿವರಣೆ ಅಗತ್ಯವಿದೆ. ಬಿ.ಎಸ್.ಪಿ.ಯು ಡಾ. ಅಂಬೇಡ್ಕರ್ ವಾದವನ್ನು ತನ್ನ ರಾಜಕೀಯ ಸಿದ್ಧಾಂತವನ್ನಾಗಿ ಒಪ್ಪಿಕೊಂಡಿದೆ. ದಸಂಸ ಸಹಾ ಅಂಬೇಡ್ಕರ್ ವಾದವನ್ನೆ ತನ್ನ ಕಾರ್ಯಕ್ರಮದಲ್ಲಿ ಅಳವಡಿಸಿಕೊಂಡಿದೆ. ಹಾಗಾದರೆ ಇವುಗಳ ನಡುವಿನ ವ್ಯತ್ಯಾಸವಾದರೂ ಏನು? ದಸಂಸದಿಂದ ಬಿ.ಎಸ್.ಪಿ.ಯನ್ನು ಹಾಗೂ ಬಿ.ಎಸ್.ಪಿ.ಯಿಂದ ದಸಂಸವನ್ನೂ ಪ್ರತ್ಯೇಕಿಸುವ ರೇಖೆ ಯಾವುದು? ಹಾಗಾದರೆ ಬಿ.ಎಸ್.ಪಿ.ಯನ್ನು ಬೆಂಬಲಿಸಿದ ದಸಂಸದ ಸದಸ್ಯರು ಯಾವ ಸೀಮಾರೇಖೆಯನ್ನು ದಾಟಿದಂತಾಯಿತು? (ಶ್ರೀಧರನ್ : ೧೯೯೭ : ೫). ಒಟ್ಟಿನಲ್ಲಿ, ಬಿ.ಎಸ್.ಪಿ.ಯನ್ನು ದಸಂಸವು ತನ್ನ ರಾಜಕೀಯ ಆಯ್ಕೆಯಾಗಿ ಒಪ್ಪಿರುವುದು

ಮತ್ತು ಹೋರಾಟದ ಹಾದಿಯಲ್ಲಿರುವುದು ಡಾ. ಅಂಬೇಡ್ಕರ್ ಹೇಳಿದ ಸಂಘರ್ಷ ಮತ್ತು ರಾಜಕೀಯ ಅಧಿಕಾರ ಹಿಡಿಯುವ ಎರಡು ಮಾರ್ಗಗಳು ಸಂಗಮವಾಗಿದೆಯೆಂಬುದೇ ಇಲ್ಲಿ ವ್ಯಕ್ತಪಟ್ಟಿರುವಂಥಾದ್ದು.

ಕರ್ನಾಟಕದ ಮಟ್ಟಿಗೆ, ಬಹುಜನ ಸಮಾಜ ಪಕ್ಷದಲ್ಲಿ ದಸಂಸ ವಿಲೀನಗೊಳ್ಳುವ ಬಗೆಗೆ ಈಗಾಗಲೇ ಚರ್ಚೆ ನಡೆದಿದೆ. ದಸಂಸವನ್ನು ಉಳಿಸಿಕೊಂಡೇ ಬಿ.ಎಸ್.ಪಿ.ಯನ್ನು ರಾಜ್ಯದಲ್ಲಿ ಕಟ್ಟುವ ಬಗೆಗೆ ದಸಂಸ ಮುಖಂಡರೂ ಹೇಳಿರುವುದುಂಟು. ಉತ್ತರಭಾರತದಲ್ಲಿ ೧೯೮೪ರಲ್ಲಿ ಆರಂಭವಾದ ಬಿ.ಎಸ್.ಪಿ. ಅಲ್ಲಿ ಬೇಗನೆ ಬೆಳೆದು ನಿಂತಿತು. ಕರ್ನಾಟಕದಲ್ಲಿ ಹಿಂದಿನ ಮುಖ್ಯ ಚುನಾವಣೆ ಮತ್ತು ಉಪ ಚುನಾವಣೆಗಳಲ್ಲಿ ಬಿ.ಎಸ್.ಪಿ. ಯಶಸ್ವಿಯಾಗದಿದ್ದರೂ ಬೆಳೆಯುವ ರೀತಿಯಲ್ಲಿ ಹೊರಹೊಮ್ಮಿದ್ದು ಗಮನಾರ್ಹ. ಆದರೆ ಚುನಾವಣೆಗಳಲ್ಲಿ ಜಾತಿ ಮತ್ತು ಹಣದ ಪ್ರಭಾವ ಸಹಜವಾಗಿಯೇ ದಟ್ಟವಾಗಿ ಕಂಡುಬರುವುದರಿಂದ, ೧೯೯೪ರ ಕರ್ನಾಟಕ ವಿಧಾನಸಭಾ ಮತ್ತು ಲೋಕಸಭಾ ಚುನಾವಣೆಗಳಲ್ಲಿ ಬಿ.ಎಸ್.ಪಿ. ಅಭ್ಯರ್ಥಿಗಳು ಸೋತು ಹೋದುದರಲ್ಲಿ ಆಶ್ಚರ್ಯವೇನೂ ಇಲ್ಲ. ದಲಿತ ಮತ್ತು ಅಲ್ಪಸಂಖ್ಯಾತರ ಮತಗಳು ದೊರೆಯುತ್ತವೆಂದು ಬಿ.ಎಸ್.ಪಿ. ಅಭ್ಯರ್ಥಿಗಳು ನಿರೀಕ್ಷಿಸುವುದು ಸಹಜ. ಆದರೆ ಕಳೆದ ಚುನಾವಣೆಗಳಲ್ಲಿ ಅಲ್ಪಸಂಖ್ಯಾತರಿರಲಿ, ದಲಿತರೂ ತಮ್ಮದೇ ವರ್ಗದ ಅಭ್ಯರ್ಥಿಗಳನ್ನು ಬೆಂಬಲಿಸಲಿಲ್ಲ ವೆಂಬುದು ವಿಪರ್ಯಾಸದ ಸಂಗತಿ.

ಕಳೆದ ಬಾರಿಯ ಚುನಾವಣಾ ಸಮೀಕ್ಷೆಗಳು ತೋರಿಸಿಕೊಡುವಂತೆ, ದಲಿತರು ಬಿ.ಎಸ್.ಪಿ.ಯಿಂದ ಇನ್ನೂ ದೂರವೇ ಇರುವುದು ಸ್ಪಷ್ಟ. ರಾಜಕೀಯದ ಅರಿವು ಬೆಳೆಸಿಕೊಂಡ ದಲಿತ ಯುವಜನರು ಬಿ.ಎಸ್.ಪಿ. ಅಭ್ಯರ್ಥಿಗಳ ಪರ ಅಲ್ಲಲ್ಲಿ (ಮೊಳಕಾಲ್ಮೂರು ಮೊದಲಾದ ಕ್ಷೇತ್ರಗಳಲ್ಲಿ) ಬಿರುಸಿನಿಂದ ಪ್ರಚಾರ ಕೈಗೊಂಡಿದ್ದರೂ ದೊರೆತ ಫಲಿತಾಂಶ ಮಾತ್ರ ಸೊನ್ನೆ. ಕಳೆದ ವಿಧಾನಸಭಾ ಚುನಾವಣೆಯಲ್ಲಿ ಬಿ.ಎಸ್‌ಪಿ.ಯಿಂದ ಸ್ಪರ್ಧಿಸಿದ ೯೩ ಅಭ್ಯರ್ಥಿಗಳ ಪೈಕಿ ಯಾರೂ ಗೆಲ್ಲಲಿಲ್ಲವೆಂಬುದು ಒಂದು ಅಂಶವಾದರೆ, ಅವರಲ್ಲಿ ೮೯-೯೦ ಅಭ್ಯರ್ಥಿಗಳಿಗೆ ಠೇವಣಿ ನಷ್ಟವಾಗಿದೆ ಯೆಂಬುದು ಪರಿಗಣಿಸಬೇಕಾದ ಇನ್ನೊಂದು ಅಂಶವಾಗುತ್ತದೆ. ಹಾಗೆಯೇ, ಲೋಕಸಭಾ ಚುನಾವಣೆಯಲ್ಲಿ ಸ್ಪರ್ಧಿಸಿದ ೪ ಅಭ್ಯರ್ಥಿಗಳ ಸ್ಥಿತಿಯೂ ಇದಕ್ಕಿಂತ ಉತ್ತಮವಾಗಿರಲಿಲ್ಲ.

ಕರ್ನಾಟಕದಲ್ಲಿ ಬಿ.ಎಸ್.ಪಿ. ದಲಿತರ ರಾಜಕೀಯ ಆಯ್ಕೆಯಾಗಿರುವುದೇ ಎಂಬುದಿನ್ನೂ ಇತ್ಯರ್ಥವಾಗಬೇಕಿದೆ. ಕಳೆದ ಬಾರಿಯ ವಿಧಾನಸಭಾ ಮತ್ತು ಲೋಕಸಭಾ ಚುನಾವಣೆಗಳ ಫಲಿತಾಂಶಗಳನ್ನು ಗಮನಿಸಿದರೆ, ಬಿ.ಎಸ್.ಪಿ. ಎಲ್ಲಾ ದಲಿತರನ್ನು ಮತ್ತು ಅಲ್ಪಸಂಖ್ಯಾತರನ್ನು ಪ್ರತಿನಿಧಿಸುವ ಪಕ್ಷವಾಗಿ ಇನ್ನೂ ಬೆಳೆದಿಲ್ಲದಿರುವುದು ಸ್ಪಷ್ಟಪಡುತ್ತದೆ. ಈ ಪಕ್ಷದ ಅಯಶಸ್ಸಿಗೆ ಇರಬಹುದಾದ ಮೇಲ್ನೋಟದ ಕಾರಣಗಳನ್ನು ಪಟ್ಟಿ ಮಾಡುವುದಾದರೆ, ಕೆಲವು ಕುತೂಹಲಕಾರಿ ಸಂಗತಿಗಳು ಗಮನಕ್ಕೆ ಬರುತ್ತವೆ. ಉದಾಹರಣೆಗೆ, ರಾಜ್ಯಮಟ್ಟದಲ್ಲಿ ಬಿ.ಎಸ್.ಪಿ.ಯನ್ನು ಇನ್ನೂ ಸರಿಯಾಗಿ ಸಂಘಟಿಸಿಲ್ಲ ದಿರುವುದು; ಪರಿಶಿಷ್ಟ ಜಾತಿ-ಉಪಜಾತಿಗಳ ಮಧ್ಯೆ ಸಮೀಕರಣ ಇಲ್ಲದಿರುವುದು; ಚುನಾವಣೆಯಲ್ಲಿ ಸ್ಪರ್ಧಿಸಲು ಸರಿಯಾದ ಅಭ್ಯರ್ಥಿಗಳನ್ನು ಆಯ್ಕೆ ಮಾಡದಿರುವುದು;

ಸಾಕಷ್ಟು ಹಣಕಾಸಿನ ಕೊರತೆ; ಓಟನ್ನು ಸೆಳೆಯಬಲ್ಲ ವರ್ಚಸ್ವಿ ವ್ಯಕ್ತಿತ್ವದ ಕೊರತೆ; ನಿರೀಕ್ಷೆ ಮೀರಿ ಹೆಚ್ಚು ಸ್ಥಾನಗಳಲ್ಲಿ ಸ್ಪರ್ಧಿಸಿದ್ದು, ಇತ್ಯಾದಿ.

ಕರ್ನಾಟಕ ದಲಿತ ಸಂಘರ್ಷ ಸಮಿತಿ ಸಂಘಟನೆಯಲ್ಲಿ ಶ್ರಮಿಸಿದವರು ಹಾಗೂ ಅದು ಹೋಳಾಗಲು ಕಾರಣರಾದವರು - ಈ ಎರಡೂ ಬಣಗಳವರು ಬೇರೆ ಬೇರೆ ಕಾರಣಗಳಿಗಾಗಿ, ನೆಪಗಳಿಗಾಗಿ ರಾಜಕೀಯ ಪಕ್ಷಗಳಲ್ಲಿ ವಿಲೀನಗೊಂಡುದನ್ನು ಚರಿತ್ರೆ ಸ್ಪಷ್ಟಪಡಿಸುತ್ತದೆ.



## ೫. ಪ್ರಚಲಿತ ಚಳವಳಿಗಳು

ಪ್ರಚಲಿತ ಚಳವಳಿಗಳನ್ನು ಕುರಿತು ಹೇಳುವುದೆಂದರೆ, ಈ ಹಿಂದಿನ ಚಳವಳಿಗಳ-ಮುಖ್ಯವಾಗಿ, ಹಿಂದುಳಿದ ವರ್ಗಗಳ ಮತ್ತು ದಲಿತ ಸಮುದಾಯಗಳ ಚಳವಳಿಗಳ ಬಗೆಗಿನ ಚರ್ಚೆಯ ಮುಂದುವರಿಕೆಯೇ ಆಗುತ್ತದೆ. ಆದರೆ ಚರಿತ್ರೆಯ ಪುಟಗಳಲ್ಲಿ ಸೇರಿಹೋಗಿರುವ ಇಂಥಾ ಹೋರಾಟ ಸಂದರ್ಭಗಳು ಇನ್ನೂ ಜೀವಂತವಿದ್ದು, ಆಗಾಗ್ಗೆ ಮರುಕಳಿಸುವ ಲಕ್ಷಣಗಳನ್ನು ತೋರುವುದರಿಂದ ಹಾಗೂ ಹೋರಾಟಗಳು ನಿರಂತರವೆಂಬ ಕಟುವಾಸ್ತವವನ್ನು ಮನಗಾಣಿಸಿಕೊಡುವುದರಿಂದ, ಯಾವುದೇ ಚಳವಳಿ ಸ್ಥಗಿತಗೊಂಡಿದೆಯೆಂಬುದನ್ನು ಒಪ್ಪಲಾಗದು. ಪ್ರಸ್ತುತ ಅಧ್ಯಯನವೂ ವ್ಯಕ್ತಪಡಿಸುವುದು ಇದನ್ನೇ. ಪೂರ್ತಿ ಸಾಧಿಸಲಾಗದ ಅಥವಾ ವ್ಯವಸ್ಥಿತವಾಗಿ ಈಡೇರಿಸಿಕೊಳ್ಳಲಾಗದ ಬೇಡಿಕೆಗಳಿಗಾಗಿ ಹಿಂದಿನಂತೆಯೇ ಚಳವಳಿಗಳನ್ನು ಪುನರಾರಂಭಿಸುವ ಹೇಳಿಕೆಗಳು, ಘೋಷಣೆಗಳು ಮೇಲಿಂದ ಮೇಲೆ ಕೇಳಿಬರುತ್ತಿರುವುದು ಸಹಾ ಇದನ್ನೆ ಸಮರ್ಥಿಸುತ್ತದೆ.

ಹಿಂದುಳಿದ ವರ್ಗಗಳ ಚಳವಳಿಗಳ ಪ್ರಸ್ತಾಪ ಬಂದಾಗಲೆಲ್ಲ, ಹಾವನೂರು, ವೆಂಕಟಸ್ವಾಮಿ ಮತ್ತು ಚಿನ್ನಪ್ಪರೆಡ್ಡಿ ಇವರ ಅಧ್ಯಕ್ಷತೆಯಲ್ಲಿ ಕರ್ನಾಟಕ ಸರ್ಕಾರ ರಚಿಸಿದ ಮೂರು ಹಿಂದುಳಿದ ವರ್ಗಗಳ ಆಯೋಗಗಳೊಡನೆ, ಕೇಂದ್ರ ಸರ್ಕಾರ ಕಾಕಾಸಾಹೇಬ ಕಾಲೇಲ್ಕರ್ ಅವರ ಅಧ್ಯಕ್ಷತೆಯಲ್ಲಿ ರಚಿಸಿದ ಮೊದಲನೇ ಹಿಂದುಳಿದ ವರ್ಗಗಳ ಆಯೋಗ (೧೯೫೩) ಮತ್ತು ಬಿ.ಪಿ. ಮಂಡಲ್ ಅವರ ಅಧ್ಯಕ್ಷತೆಯಲ್ಲಿ ನೇಮಿಸಲಾದ ಎರಡನೇ ಹಿಂದುಳಿದ ವರ್ಗಗಳ ಆಯೋಗ(೧೯೭೮)ಗಳ ಪ್ರಸ್ತಾಪ ಬರುವುದು ಅನಿವಾರ್ಯ. ಇವುಗಳ ಹಿನ್ನೆಲೆಯೊಡನೆ ಕರ್ನಾಟಕ ಹಿಂದುಳಿದ ಆಯೋಗಗಳ ವಿವರಗಳನ್ನು ಪರಿಶೀಲಿಸಬೇಕಾಗುತ್ತದೆ; ಹಿಂದುಳಿದ ಸಮುದಾಯಗಳ ಹಾಗೂ ದಲಿತ ಜಾತಿಗಳ ಪ್ರಚಲಿತ ಸ್ಥಿತಿ-ಗತಿಗಳನ್ನು ವಿಶ್ಲೇಷಿಸಬೇಕಾಗುತ್ತದೆ.

### ೫.೧. ಕೇಂದ್ರದ ಕಾಲೇಲ್ಕರ್ ಮತ್ತು ಮಂಡಲ ಆಯೋಗಗಳು

ಕಾಕಾಸಾಹೇಬ ಕಾಲೇಲ್ಕರ್ ಅವರ ಅಧ್ಯಕ್ಷತೆಯಲ್ಲಿ ಕೇಂದ್ರ ಸರ್ಕಾರ ರಚಿಸಿದ ಮೊದಲನೇ ಹಿಂದುಳಿದ ವರ್ಗಗಳ ಆಯೋಗ ಅಸ್ತಿತ್ವಕ್ಕೆ ಬಂದುದು ೧೯೫೩ ಜನವರಿಯಲ್ಲಿ. ಈ ಆಯೋಗದ ಇತರ ಸದಸ್ಯರೆಂದರೆ ನಾರಾಯಣ ಸದೋಬಾ ಕಾಜ್ರೋಲ್ಕರ್, ಭೀಕಾಭಾಯಿ, ಶಿವದಯಾಲಸಿಂಗ್ ಚೌರಾಸಿಯಾ, ರಾಜೇಶ್ವರ ಪಟೇಲ್, ಅಬ್ದುಲ್ ಖಯ್ಯಾಂ ಅನ್ಸಾರಿ, ಟಿ. ಮರಿಯಪ್ಪ, ಲಾಲಾ ಜಗನ್ನಾಥ್, ಅತ್ಮಾಸಿಂಗ್ ನಾಮಧಾರಿ, ಎನ್.ಆರ್.ಎಂ. ಸ್ವಾಮಿ ಮತ್ತು ಅರುಣಾಂಗ ಶೂ. ಇವರಲ್ಲಿ ಟಿ. ಮರಿಯಪ್ಪ ಮೈಸೂರಿನವರು. ಈ ಆಯೋಗ ತನ್ನ ೧೭೮ ಪುಟಗಳ ವರದಿಯನ್ನು ಕೇಂದ್ರ ಸರ್ಕಾರಕ್ಕೆ

ಸಲ್ಲಿಸಿದ್ದು ೧೯೫೫ ಮಾರ್ಚ್‌ನಲ್ಲಿ. ಈ ವರದಿಯ ಸಫಲತೆ ಬಗೆಗೆ ಹೇಳುವುದಾದರೆ, ಹಿಂದುಳಿದ ವರ್ಗಗಳೆಂದು ಘೋಷಿಸಲು ಬೇಕಾದ ಮಾನದಂಡವನ್ನು ಮತ್ತು ಹಿಂದುಳಿದಿರುವಿಕೆಯನ್ನು ಯಾವ ಅಂಶಗಳ ಆಧಾರದ ಮೇಲೆ ಗುರುತಿಸಬೇಕೆಂಬ ನಿರ್ಧಾರಕ್ಕೆ ಬರಲು ಈ ಆಯೋಗಕ್ಕೆ ಸಾಧ್ಯವಾಗಲಿಲ್ಲ. ಈ ಕಾರಣಕ್ಕಾಗಿಯೇ ಕೇಂದ್ರ ಸರ್ಕಾರ ಈ ವರದಿಯನ್ನು ಒಪ್ಪಿಕೊಳ್ಳಲಿಲ್ಲ. ಈ ಆಯೋಗ ಮಾಡಿದ ಮುಖ್ಯ ಕೆಲಸವೆಂದರೆ, ಒಟ್ಟು ೨,೩೯೯ ಜಾತಿಗಳನ್ನು ಪರೀಕ್ಷಿಸಿ ಹಿಂದುಳಿದ ವರ್ಗಗಳೆಂದು ಗುರುತಿಸಿ, ಅವುಗಳ ಏಳಿಗೆಗೆ ಯೋಜನೆ ರೂಪಿಸುವಂತೆ ಸರ್ಕಾರಕ್ಕೆ ಶಿಫಾರಸು ಮಾಡಿದುದು.

ಈ ಆಯೋಗ ಗುರುತಿಸಿದ ೨, ೩೯೯ ಜಾತಿಗಳ ವರ್ಗೀಕರಣವನ್ನು ಸಾಮಾಜಿಕ ಮತ್ತು ಶೈಕ್ಷಣಿಕ ನೆಲೆಯಲ್ಲಿ ಕೈಗೊಂಡು, ಅವುಗಳನ್ನು ಹಿಂದುಳಿದ ವರ್ಗಗಳೆಂದು ಕರೆಯಲಾಗಿತ್ತು. ಒಂದು ಅಂದಾಜಿನಂತೆ, ಈ ಜಾತಿಗಳಲ್ಲಿ ೯೧೩ ಜಾತಿಗಳ ಒಟ್ಟು ಜನಸಂಖ್ಯೆ ೧೫೦ ಮಿಲಿಯನ್. ಈ ಜಾತಿಗಳವರು ಅನುಸರಿಸಿದ ಸಂಪ್ರದಾಯಬದ್ಧ ಉದ್ಯೋಗ ಮತ್ತು ವೃತ್ತಿಕಸುಬು, ಸಾಕ್ಷರತೆಯ ಮಟ್ಟ ಅಥವಾ ಶೈಕ್ಷಣಿಕ ಪ್ರಗತಿ, ಸಾಮಾಜಿಕವಾಗಿ ಜಾತಿಶ್ರೇಣಿಯಲ್ಲಿ ಆಯಾ ಜಾತಿಯ ಅಂತಸ್ತು, ಸರ್ಕಾರಿ ಹುದ್ದೆ ಮತ್ತು ಕೈಗಾರಿಕಾ ಕ್ಷೇತ್ರಗಳಲ್ಲಿರುವವರ ಸಂಖ್ಯೆ, ಇತ್ಯಾದಿಗಳ ಆಧಾರದ ಮೇಲೆ ಹಿಂದುಳಿದ ವರ್ಗಗಳೆಂದು ಪರಿಗಣಿಸಬೇಕೆಂದು ಆಯೋಗ ಭಾವಿಸಿತು. ಈ ಆಯೋಗದ ಮಿತಿಯೆಂದರೆ, ಹಿಂದುಳಿದ ವರ್ಗಗಳನ್ನು ಗುರುತಿಸಲು ಸದಸ್ಯರು ಸರಿಯಾದ ಮಾನದಂಡಗಳನ್ನು ಅನುಸರಿಸದೇ ಇದ್ದುದು ಹಾಗೂ ಜಾತಿ ಆಧಾರದ ಮೇಲೆಯೇ ಹಿಂದುಳಿದಿರುವಿಕೆಯನ್ನು ಇತ್ಯರ್ಥ ಮಾಡಬೇಕೆಂದು ತೀರ್ಮಾನಿಸಿ ಹಿಂದುಳಿದ ವರ್ಗಗಳ ಯಾದಿಯನ್ನು ಸಿದ್ಧಪಡಿಸಿದುದು. ಜಾತಿ ಆಧಾರದ ಮೇಲೆ ಹಿಂದುಳಿದ ವರ್ಗಗಳನ್ನು ಗುರುತಿಸುವ ವಿಧಾನದ ಬಗೆಗೆ ಆಯೋಗದ ಅಧ್ಯಕ್ಷ ಕಾಲೇಲ್ಕರ್ ಅವರೇ ತಮ್ಮ ಅಸಮಾಧಾನ ಸೂಚಿಸಿದುದು ಗಮನಾರ್ಹ.

ಕಾಲೇಲ್ಕರ್ ವರದಿಯ ಮೇಲೆ ಕೇಂದ್ರ ಸರ್ಕಾರ ನೀಡಿದ 'ಮೆಮೋರ್‍ಯಾಂಡಮ್'ನಲ್ಲಿ ಆಯೋಗದ ಶಿಫಾರಸುಗಳ ಬಗೆಗೆ ಟೀಕೆಗಳನ್ನು ಮಾಡಲಾಯಿತು. ಸಮಾಜದಲ್ಲಿ ಸಮಾನತೆ ತರುವ ಹಾದಿಯಲ್ಲಿ ಜಾತಿವ್ಯವಸ್ಥೆ ಅಡ್ಡಿಯನ್ನು ಉಂಟುಮಾಡುವಂಥದ್ದೆಂಬುದನ್ನು ನಿರಾಕರಿಸಲಾಗುವುದಿಲ್ಲ; ಆದರೆ ಈಗ ಸೂಚಿತವಾಗಿರುವ ಜಾತಿಗಳನ್ನು ಹಿಂದುಳಿದ ವರ್ಗಗಳೆಂದು ಒಪ್ಪಿಕೊಳ್ಳುವುದಾದರೆ, ಈಗ ಪ್ರಚಲಿತವಿರುವ ತಾರತಮ್ಯವನ್ನೆ ಮುಂದುವರೆಸಿದಂತಾಗಬಹುದೆಂದು ಅಭಿಪ್ರಾಯ ಪಡಲಾಯಿತು. ಇದರಿಂದ ಎಂದಿನಂತೆ ದುರ್ಬಲವರ್ಗಗಳ ಬದಲಾಗಿ ಸಬಲವರ್ಗಗಳಿಗೇ ಇನ್ನೂ ಹೆಚ್ಚು ಅನುಕೂಲ ದೊರಕಿದಂತಾಗುತ್ತದೆಂಬ ಅಂಶವನ್ನು ಪ್ರತಿಪಾದಿಸಿದಂತಾಯಿತು. ಆಯೋಗ ಅನುಸರಿಸಿದ ಕೆಲವು ಪರೀಕ್ಷಾ ವಿಧಾನಗಳು ಅಸ್ಪಷ್ಟತೆಯಿಂದ ಕೂಡಿವೆಯೆಂದು ವ್ಯಕ್ತಪಡಿಸಲಾಯಿತಲ್ಲದೆ, ಆಯೋಗದ ಶಿಫಾರಸುಗಳನ್ನು ಜಾರಿಗೆ ತರಲು ಪ್ರಯತ್ನಪಟ್ಟಲ್ಲಿ ಇಡೀ ದೇಶದ ಜನಸಮುದಾಯವನ್ನೇ ಹಿಂದುಳಿದ ವರ್ಗಗಳೆಂದು ಗುರುತಿಸಬೇಕಾಗುತ್ತದೆಂದು ಭಾವಿಸಲಾಯಿತು. ಅದು ತನ್ನ ಒಲವನ್ನು ತೋರಿದುದು ಆರ್ಥಿಕ ಕಾರಣಗಳ ಕಡೆಗೆ. ಮುಖ್ಯವಾಗಿ, ರಾಷ್ಟ್ರಮಟ್ಟದಲ್ಲಿ ಹಿಂದುಳಿದ ವರ್ಗಗಳ ಪಟ್ಟಿಯನ್ನು ತಯಾರಿಸುವುದು

ಸಾಧ್ಯವಲ್ಲದ ಕೆಲಸವೆಂದು ತೀರ್ಮಾನಿಸಿತು. ಈ ಹಿನ್ನೆಲೆಯಲ್ಲಿ ಈ ಕೆಲಸವನ್ನು ರಾಜ್ಯ ಸರ್ಕಾರಗಳು ಕೈಗೆತ್ತಿಕೊಳ್ಳಬೇಕೆಂದು ಸೂಚಿಸಿದ್ದನ್ನು ಹಿಂದೆಯೇ ಗಮನಿಸಲಾಗಿದೆ.

ಹಿಂದುಳಿದ ವರ್ಗಗಳಿಗೆ ಸಂಬಂಧಿಸಿದ ಕಾಲೇಲ್ಕರ್ ವರದಿ ಲೋಪ ದೋಷಗಳಿಂದ ಕೂಡಿದುದೆಂಬ ವ್ಯಾಪಕ ಅಭಿಪ್ರಾಯ ದೇಶಾದ್ಯಂತ ಹರಡಿದ್ದರಲ್ಲಿ ಆಶ್ಚರ್ಯವಿಲ್ಲ. ವರದಿಯನ್ನು ಜಾರಿಗೆ ತಂದರೆ ಸರ್ವೋಚ್ಚ ನ್ಯಾಯಾಲಯ ಅದನ್ನು ರದ್ದುಗೊಳಿಸುವ ಸಾಧ್ಯತೆ ಬಗೆಗೂ ಎಚ್ಚರಿಸಲಾಯಿತು. ಕಾಲೇಲ್ಕರ್ ಸಮಿತಿಯಲ್ಲಿದ್ದ ಸದಸ್ಯರು-ಅಧ್ಯಕ್ಷರೂ ಸೇರಿ ೧೧ ಮಂದಿ. ಅಧ್ಯಕ್ಷರೂ ಸೇರಿದಂತೆ ಈ ವರದಿಗೆ ೬ ಮಂದಿ ಸದಸ್ಯರು ವಿರುದ್ಧ ಅಭಿಪ್ರಾಯ ಸೂಚಿಸಿದ್ದರೆಂಬುದು ಗಮನಾರ್ಹ. ಸದಸ್ಯರಲ್ಲೊಬ್ಬರಾಗಿದ್ದ ಕರ್ನಾಟಕದ ಟಿ. ಮರಿಯಪ್ಪನವರೂ ಇದನ್ನು ವಿರೋಧಿಸಿದ್ದವರಲ್ಲಿ ಒಬ್ಬರು. ೧೯೫೫ರಲ್ಲಿ ಸಲ್ಲಿಸಲ್ಪಟ್ಟ ಕಾಲೇಲ್ಕರ್ ವರದಿಯನ್ನು ಕೇಂದ್ರ ಸರ್ಕಾರ ನಿರಾಕರಿಸಿದ್ದು ೧೯೫೯ರಲ್ಲಿ. ವರದಿಯಲ್ಲಿ ಉಲ್ಲೇಖಗೊಂಡಂತೆ, ೧೦ ವರ್ಷಗಳ ನಂತರ ಹಿಂದುಳಿದ ವರ್ಗಗಳ ಪಟ್ಟಿಯನ್ನು ಪುನರ್ವಿಮರ್ಶಿಸಬೇಕೆಂದು ಸೂಚಿಸಲಾಗಿದ್ದಿತು. ಸರ್ವೋಚ್ಚ ನ್ಯಾಯಾಲಯವು ಅನೇಕ ಬಾರಿ ಈ ಪಟ್ಟಿಯನ್ನು ಆಗಾಗ್ಗೆ ಪುನರ್ವಿಮರ್ಶಿಸುತ್ತಿರಲು ಸೂಚಿಸುವುದರೊಡನೆ ಈ ವರದಿಯನ್ನು ತಳ್ಳಿಹಾಕಿತು. ಕಾಲೇಲ್ಕರ್ ಆಯೋಗವು ಹಿಂದುಳಿದಿರುವಿಕೆಗೆ ಜಾತಿಯೊಂದನ್ನೇ ಆಧಾರವಾಗಿಟ್ಟುಕೊಂಡಿರುವುದೇ ವಿನಾ ಯಾವುದೇ ರಾಜ್ಯದಲ್ಲಿಯ ಜನಸಂಖ್ಯೆಯ ಅಂಕಿ-ಅಂಶ, ಶಿಕ್ಷಣಮಟ್ಟ, ಸೇವೆಯಲ್ಲಿನ ಪ್ರಾತಿನಿಧ್ಯ, ಆರ್ಥಿಕ ಪರಿಸ್ಥಿತಿ ಮೊದಲಾದುವನ್ನು ಪರಿಗಣಿಸಿಯೇ ಇಲ್ಲವೆಂದು ಟೀಕಿಸಲಾಯಿತು. ಕ್ರೈಸ್ತರು ಮತ್ತು ಮುಸಲ್ಮಾನರ ಬಗೆಗೂ ಆಯೋಗ ಇದೇ ನೀತಿಯನ್ನು ಅನುಸರಿಸಿದ್ದನ್ನು ಗಮನಿಸಲಾಯಿತು.

ವಾಸ್ತವದಲ್ಲಿ, ಕಾಲೇಲ್ಕರ್ ಆಯೋಗ ಹಿಂದುಳಿದ ವರ್ಗಗಳ ಪಟ್ಟಿಯನ್ನು ತಯಾರಿಸಿದ್ದು ೧೯೫೬ಕ್ಕೆ ಮೊದಲು. ಅಂದರೆ, ರಾಜ್ಯಗಳ ಪುನರ್ವಿಂಗಡಣೆಗಿಂತ ಹಿಂದೆ. ಪುನರ್ವಿಂಗಡಣೆ ಕಾಲಕ್ಕೆ ಕರ್ನಾಟಕಕ್ಕೆ ಎ. ಬಿ. ಮತ್ತು ಸಿ. - ಈ ಮೂರು ವರ್ಗಗಳ ರಾಜ್ಯಗಳ ಭಾಗಗಳು ಸೇರಿದ ನಂತರದ ಸ್ಥಿತಿಯೆಂದರೆ, ಒಂದು ರಾಜ್ಯದಲ್ಲಿ ಅಥವಾ ಪ್ರದೇಶದಲ್ಲಿ ಹಿಂದುಳಿದ ಜಾತಿಯೆಂದು ಪರಿಗಣಿತವಾದುದು ಇನ್ನೊಂದು ರಾಜ್ಯದಲ್ಲಿ ಹಿಂದುಳಿದ ಜಾತಿಯಾಗಿಲ್ಲವೆಂಬುದು. ಕಾಲೇಲ್ಕರ್ ಆಯೋಗ ಅನುಸರಿಸಿದ ಜಾತಿಗಳ ಪಟ್ಟಿ ಈ ದೃಷ್ಟಿಯಿಂದ ಹಳೆಯದೆಂಬುದನ್ನು ಗಮನಿಸಿ ಅದನ್ನು ತಿರಸ್ಕರಿಸಲಾಯಿತು. ಮುಖ್ಯವಾಗಿ, ಪರಿಶಿಷ್ಟ ಜಾತಿ-ಪಂಗಡಗಳವರಿಗೆ ಸ್ಥಾನ ಮೀಸಲಿಡುವುದನ್ನು ತೆಗೆದುಹಾಕಬೇಕೆಂಬ ಶಿಫಾರಸನ್ನೂ ಈ ವರದಿ ಒಳಗೊಂಡಿದ್ದು ಗಮನಾರ್ಹ. ಆದರೆ ಈ ವರದಿಯ ಇನ್ನೊಂದು ಮುಖವನ್ನು ಗಮನಿಸಿದರೆ, ಇದರ ನಿಲುವು ಪ್ರತಿಷ್ಠಿತವರ್ಗಕ್ಕೆ ನಷ್ಟಕಾರಿಯಾದ್ದರಿಂದ, ಹಾಗೂ ಹಿಂದುಳಿದ ವರ್ಗಗಳಲ್ಲಿ ಜಾಗೃತಿ ಇನ್ನೂ ಮೂಡಿಲ್ಲವಾದ್ದರಿಂದ ಈ ವರದಿ ಜಾರಿಗೆ ತಡೆಯುಂಟಾಯಿತೆಂದು ವಿಶ್ಲೇಷಿಸಲಾಗುತ್ತದೆ. ಈ ಮೂಲಕ ಪ್ರಭಾವಶಾಲಿಯಾದ ಹಿಂದುಳಿದ ಬಹುಸಂಖ್ಯಾತ ವರ್ಗಗಳವರು ಹಿಂದುಳಿದ ಅಲ್ಪಸಂಖ್ಯಾತರ ಹಕ್ಕಿಗೆ ಚ್ಯುತಿಯನ್ನುಂಟು ಮಾಡಿದರೆಂದು ವ್ಯಾಖ್ಯಾನಿಸಲಾಗುತ್ತದೆ. ವರದಿ ಜಾರಿಗೆ ಕಾನೂನಿನ ಆತಂಕ ಒಂದೆಡೆಯಾದರೆ, ಇನ್ನೊಂದೆಡೆ ಬಲಿಷ್ಠರು ಒಡ್ಡಿದ ಪ್ರತಿರೋಧ ಅದರ ರದ್ದಿಗೆ

ಕಾರಣವಾಯಿತು. ಯಾರ ಹಿತಕ್ಕಾಗಿ ವರದಿ ಮಂಡಿಸಲ್ಪಟ್ಟಿತೋ ಅವರದೇ ಹುನ್ನಾರದಿಂದ ಅದು ತಿರಸ್ಕೃತಗೊಂಡುದು ವಿಷಾದನೀಯ.

'ಜಾತಿಯೇ ಹಿಂದುಳಿದಿರುವಿಕೆಯ ಆಧಾರ'ವೆಂದು ನಿರೂಪಿಸಿದ ಕಾಲೇಲ್ಕರ್ ಆಯೋಗದ ವರದಿ ಜಾರಿಗೆ ಬಾರದೆ ಹೋದುದರಿಂದ, ೧೯೭೮ ಡಿಸೆಂಬರ್‌ನಲ್ಲಿ ಕೇಂದ್ರ ಸರ್ಕಾರ ಲೋಕಸಭಾ ಸದಸ್ಯ ಬಿ.ಪಿ. ಮಂಡಲ್ ಅವರ ಅಧ್ಯಕ್ಷತೆಯಲ್ಲಿ ೨ನೇ ಹಿಂದುಳಿದ ವರ್ಗಗಳ ಆಯೋಗವನ್ನು ರಚಿಸಿತು. ಇದರಲ್ಲಿದ್ದ ಸದಸ್ಯರೆಂದರೆ ಆರ್.ಆರ್. ಭೋಳೆ, ದೇವನ್ ಮೋಹನಲಾಲ್, ಎಲ್.ಆರ್. ನಾಯಕ್ (ದೀನಬಂಧು ಅವರ ಸ್ಥಾನದಲ್ಲಿ), ಕೆ. ಸುಬ್ರಹ್ಮಣ್ಯಂ ಹಾಗೂ ಎಸ್. ಎಸ್. ಗಿಲ್(ಕಾರ್ಯದರ್ಶಿ). ಈ ಆಯೋಗ ೧೯೮೦ ಡಿಸೆಂಬರ್‌ನಲ್ಲಿ ತನ್ನ ವರದಿ ಸಲ್ಲಿಸುವುದರೊಂದಿಗೆ ದೇಶದಲ್ಲಿ ಪರ-ವಿರೋಧದ ದೊಡ್ಡ ಚಳವಳಿಯನ್ನೆ ಹುಟ್ಟುಹಾಕಿದುದು ಚರಿತ್ರಾರ್ಹ ಘಟನೆ. ಸ್ಥೂಲವಾಗಿ ಹೇಳುವುದಾದರೆ, ವರದಿ ಮಂಡನೆಯಾದ ೧೦ ವರ್ಷಗಳ ದೀರ್ಘ ಅವಧಿಯ ನಂತರ, ಅಂದರೆ ೧೯೯೦ರಲ್ಲಿ, ಕೆಲವು ರಾಜಕೀಯ ಒತ್ತಡಗಳಿಂದಾಗಿ ಈ ವರದಿಯನ್ನು ತಾತ್ವಿಕವಾಗಿ ಒಪ್ಪಿಕೊಳ್ಳಲಾಯಿತು. ವಿ.ಪಿ.ಸಿಂಗ್ ಸರ್ಕಾರ ಈ ವರದಿಯ ಆಂಶಿಕ ಜಾರಿಗೆ ಒಪ್ಪಿಗೆ ನೀಡಿತಲ್ಲದೆ, ಕೇಂದ್ರ ಸರ್ಕಾರದ ನೌಕರಿಗಳಲ್ಲಿ ಶೇ.೨೭ ಸ್ಥಾನಗಳನ್ನು ಹಿಂದುಳಿದವರಿಗೆ ಮೀಸಲಿರಿಸುವ ಐತಿಹಾಸಿಕ ಘೋಷಣೆ ಮಾಡಿತು. ೧೯೯೨ರಲ್ಲಿ ಪಿ.ವಿ. ನರಸಿಂಹರಾವ್ ಸರ್ಕಾರ ಈ ಆಯೋಗದ ಶಿಫಾರಸನ್ನು ಆಧರಿಸಿ ಹಿಂದುಳಿದ ವರ್ಗಗಳಿಗೆ ಶೇ. ೨೭ರಷ್ಟು ಮೀಸಲಾತಿ ನೀಡುವ ಬಗೆಗೆ ಸರ್ಕಾರಿ ಆದೇಶ ಹೊರಡಿಸಿತು.

ಕೇಂದ್ರದಲ್ಲಿ ಮಂಡಲ ಆಯೋಗದ ರಚನೆ ಮತ್ತು ವರದಿ ಮಂಡನೆಯ ವೇಳೆಗಾಗಲೇ ಕರ್ನಾಟಕದಲ್ಲಿ ಎಲ್.ಜಿ. ಹಾವನೂರರ ಅಧ್ಯಕ್ಷತೆಯಲ್ಲಿ ಗಣ್ಯರಲ್ಲಿ ಮೊದಲನೇ ಹಿಂದುಳಿದ ವರ್ಗಗಳ ಆಯೋಗದ ರಚನೆಯಾಗಿತ್ತು. ೧೯೭೫ರಲ್ಲಿ ಅದು ತನ್ನ ವರದಿಯನ್ನು ಸರ್ಕಾರದ ಮುಂದೆ ಮಂಡಿಸಿದ್ದಿತು. ಕಾಕಾಸಾಹೇಬ ಕಾಲೇಲ್ಕರ್ ಆಯೋಗದ ಶಿಫಾರಸುಗಳನ್ನು, ಅವುಗಳ ಅತಿ-ಮಿತಿಗಳನ್ನು ಅಭ್ಯಸಿಸಿದ್ದಿತು. ಮಂಡಲ್ ಆಯೋಗದ ಮೇಲೆ ಹಾವನೂರು ವರದಿಯ ಪ್ರಭಾವ ಆಗಿದ್ದಿರುವ ಸಾಧ್ಯತೆ ಹೆಚ್ಚು. ಹಾವನೂರು ಆಯೋಗ ಜಾತಿಗಳ ಮೂಲವನ್ನು ಶೋಧಿಸಿ ಅವುಗಳ ಸದ್ಯದ ಸ್ಥಿತಿ-ಗತಿಗಳನ್ನು ವಿಶ್ಲೇಷಿಸಿ, ಅಂಕಿ-ಅಂಶಗಳ ಆಧಾರದ ಮೇಲೆ ನಿಷ್ಕರ್ಷೆ ಮಾಡಿರುವುದು ಹಾಗೂ ಜಾತಿಯನ್ನೆ ಆಧಾರವಾಗಿಟ್ಟುಕೊಳ್ಳದೆ ಸದ್ಯದ ಶೈಕ್ಷಣಿಕ ಸ್ಥಿತಿ ಮತ್ತು ಸರ್ಕಾರಿ ನೌಕರಿಯಲ್ಲಿ ಹೊಂದಿರುವ ಪ್ರಾತಿನಿಧ್ಯಗಳನ್ನು ಪರಿಗಣಿಸಿ ವರದಿ ಸಿದ್ಧಪಡಿಸಿರುವುದು ವಿಶೇಷವಾದುದು. ಮಂಡಲ ವರದಿಯಲ್ಲಿ ಹಿಂದುಳಿದಿರುವಿಕೆಗೆ ಗುರುತಿಸಲಾದ ನಿರ್ಧಾರಕ ತತ್ವಗಳಾದರೂ ಸಾಮಾಜಿಕ, ಶೈಕ್ಷಣಿಕ ಹಾಗೂ ಆರ್ಥಿಕ ಆಧಾರಗಳೇ. ಈ ಆಯೋಗ ೩೦೦೦ಕ್ಕೂ ಹೆಚ್ಚು ಜಾತಿಗಳನ್ನು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳೆಂದು ಗುರುತಿಸಿತು. ಆದರೆ ೧೯೯೧ರ ಆಂಥ್ರೊಪಲಾಜಿಕಲ್ ಸರ್ವೆ ಆಫ್ ಇಂಡಿಯಾ ವರದಿ ಪ್ರಕಾರ ೧೦೫೧ ಜಾತಿಗಳು ಮಾತ್ರ ಹಿಂದುಳಿದ ವರ್ಗಗಳೆನಿಸಿದ್ದವು.

ಆಯೋಗದ ಶಿಫಾರಸುಗಳ ಪ್ರಕಾರ, ಸರ್ವೋಚ್ಚ ನ್ಯಾಯಾಲಯದ ಹಲವಾರು ತೀರ್ಪುಗಳ ಅನುಸಾರವಾಗಿ ಪರಿಶಿಷ್ಟ ಜಾತಿ-ಜನಾಂಗಗಳು ಹಾಗೂ ಹಿಂದುಳಿದ ಜಾತಿಗಳಿಗೆ ಕೊಡುವ ಮೀಸಲಾತಿ ಶೇ. ೫೦ ಮೀರಬಾರದೆಂಬ ಕಟ್ಟಳೆಯ ಪ್ರಕಾರ ಪರಿಶಿಷ್ಟ

ಜಾತಿ-ಪಂಗಡಗಳವರಿಗೆ ಈಗಾಗಲೇ ಇರುವ ಶೇ. ೨೨.೫ ಮೀಸಲಾತಿ ಜೊತೆ ಹಿಂದುಳಿದವರಿಗೆ ಶೇ. ೨೭ ಮೀಸಲಾತಿ ಕೊಡುವುದೆಂದಾಯಿತು. ಹಿಂದುಳಿದವರಿಗೆ ಈಗಾಗಲೇ ಶೇ. ೨೭ಕ್ಕಿಂತ ಹೆಚ್ಚಿಗೆ ಮೀಸಲಾತಿ ಕೊಟ್ಟಿರುವ ರಾಜ್ಯಗಳ ಮೀಸಲು ನೀತಿಗಳಿಗೆ ಈ ಶಿಫಾರಸಿನಿಂದ ಯಾವುದೇ ಧಕ್ಕೆಯಿಲ್ಲವೆಂಬುದನ್ನು ಸ್ಪಷ್ಟಪಡಿಸಲಾಯಿತು. ಮುಕ್ತ ಸ್ಪರ್ಧೆಯಲ್ಲಿ ಆಯ್ಕೆಯಾದ ಹಿಂದುಳಿದ ಜನಾಂಗಗಳ ಅಭ್ಯರ್ಥಿಗಳನ್ನು ಹಿಂದುಳಿದ ಜನಾಂಗಗಳ ಶೇ. ೨೭ ಮೀಸಲಾತಿ ಪಾಲಿನಲ್ಲಿ ಹೊಂದಿಸಿಕೊಳ್ಳಕೂಡದೆಂಬ, ಈ ಮೀಸಲಾತಿ ಪದ್ಧತಿ ಬಡ್ತಿಯ ಎಲ್ಲ ಹಂತಗಳಲ್ಲೂ ಜಾರಿಗೆ ಬರಬೇಕೆಂಬ, ತುಂಬಲಾಗದ ಮೀಸಲು ಹುದ್ದೆಗಳನ್ನು ಡಿ-ರಿಸರ್ವ್ ಮಾಡಬಹುದೆಂಬ, ಪರಿಶಿಷ್ಟ ಜಾತಿ-ಪಂಗಡಗಳ ಅಭ್ಯರ್ಥಿಗಳಿಗಿರುವಂತೆ ಹಿಂದುಳಿದ ಜಾತಿಯ ಅಭ್ಯರ್ಥಿಗಳಿಗೂ ನೌಕರಿಗೆ ಗರಿಷ್ಠ ವಯೋಮಿತಿ ಹೆಚ್ಚಿಸಬೇಕೆಂಬ, ಪರಿಶಿಷ್ಟ ಜಾತಿ-ಪಂಗಡಗಳ ಅಭ್ಯರ್ಥಿಗಳಿಗೆ ಅನುಸರಿಸುವಂತೆ ರೋಸ್ಟರ್ ಪದ್ಧತಿಯನ್ನು ಆಯಾ ವಿಭಾಗಕ್ಕನುಗುಣವಾಗಿ ಅನುಸರಿಸಬೇಕೆಂಬ ಮೀಸಲು ನೀತಿಗಳನ್ನು ಆಯೋಗ ಶಿಫಾರಸು ಮಾಡಿತು. ಅಲ್ಲದೆ, ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಸೇವೆಗಳಲ್ಲಿ, ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಸರ್ಕಾರದಿಂದ ಅನುದಾನ/ಅರೆ ಅನುದಾನ ಪಡೆಯುವ ಖಾಸಗಿ ಕ್ಷೇತ್ರಗಳಲ್ಲಿ, ಎಲ್ಲಾ ವಿಶ್ವವಿದ್ಯಾಲಯಗಳು ಹಾಗೂ ಅವುಗಳಿಂದ ಅನುಮೋದನೆ ಪಡೆದ ಕಾಲೇಜುಗಳಲ್ಲಿ ಈ ಮೀಸಲಾತಿ ನೀತಿಯನ್ನು ಜಾರಿಗೆ ತರಲು ಶಿಫಾರಸು ಮಾಡಲಾಯಿತು.

೧೯೮೦ರಲ್ಲಿ ಕೇಂದ್ರ ಸರ್ಕಾರಕ್ಕೆ ಸಲ್ಲಿಸಲ್ಪಟ್ಟ ಮಂಡಲ ಆಯೋಗದ ವರದಿ ೧೯೯೨ರಲ್ಲಿ ಜಾರಿಗೆ ಬರುವವರೆಗಿನ ಅವಧಿಯಲ್ಲಿ, ಅಂದರೆ ೧೨ ವರ್ಷಗಳ ಅವಧಿಯಲ್ಲಿ (೧೯೮೬-೮೭), ದೇಶದ ಬೇರೆ ಬೇರೆ ರಾಜ್ಯಗಳಲ್ಲಿ ಪರಿಶಿಷ್ಟ ಜಾತಿ-ಪಂಗಡ ಮತ್ತು ಹಿಂದುಳಿದ ವರ್ಗ ಹಾಗೂ ಇತರ ವರ್ಗಗಳಿಗೆ ಸಂಬಂಧಿಸಿದಂತೆ ಈ ಕೆಳಗಿನಂತೆ ಮೀಸಲಾತಿ ಕೋಟಾಗಳು ಜಾರಿಯಲ್ಲಿದ್ದವು:

**ಕೋಷ್ಟಕ** (ಶೇಕಡವಾರು)

| ರಾಜ್ಯಗಳು | ಪ.ಜಾ. | ಪ.ಪಂ. | ಇತರ ಹಿಂದುಳಿದ ವರ್ಗಗಳು | | ಇತರೆ | ಒಟ್ಟು |
|---|---|---|---|---|---|---|
| | | | ಸರ್ಕಾರಿ ಹುದ್ದೆಗಳು | ಶೈಕ್ಷಣಿಕ | | |
| ಆಂಧ್ರಪ್ರದೇಶ | ೧೫ | ೬ | ೪೪ | ೪೪ | ೬ | ೭೧ |
| ಹರ್ಯಾಣ | ೨೦ | - | ೫ | ೫ | - | - |
| ಕರ್ನಾಟಕ | ೧೫ | ೩ | ೩೫ | ೩೩ | ೧೫ | ೬೮ |
| ಕೇರಳ | ೮ | ೨ | ೪೦ | ೪೦ | - | ೫೦ |
| ಮಧ್ಯಪ್ರದೇಶ | ೧೫ | ೧೮ | ೨೫* | ೨೫* | ೨೦ | ೭೮ |
| ಮಹಾರಾಷ್ಟ್ರ | ೧೩ | ೭ | ೧೦ | ೧೦ | ೪+ | ೩೪ |
| ಒರಿಸ್ಸಾ | ೧೫ | ೨೩ | - | - | - | - |
| ಪಂಜಾಬ್ | ೨೫ | - | ೫ | ೫ | - | - |
| ಉತ್ತರಪ್ರದೇಶ | ೨೪ | ೨ | ೧೫ | ೧೫ | - | ೪೪ |
| ಬಿಹಾರ್ | ೧೪ | ೧೦ | ೨೦ | ೨೦ | - | ೪೪ |
| ಗುಜರಾತ್ | ೭ | ೧೩ | ೧೦** | ೧೦** | ೫ | ೩೫ |
| ತಮಿಳುನಾಡು | ೧೮ | - | ೩೦ | ೩೦ | ೨೦+ | ೬೮ |

ಮೀಸಲಾತಿ ನೀತಿಯೊಡನೆ ಮಂಡಲ ವರದಿ ಪ್ರಸ್ತಾಪಿಸಿದ ಶೈಕ್ಷಣಿಕ ರಿಯಾಯಿತಿಗಳು ಹಿಂದುಳಿದ ವರ್ಗಗಳಿಗೆ ಲಾಭಕಾರಿಯೆನಿಸಿದವು. ಆಯೋಗ ನೀಡಿದ ರಚನಾತ್ಮಕ ಸಲಹೆಗಳು ಈ ವರ್ಗಗಳ ಸಮಗ್ರ ಅಭಿವೃದ್ಧಿಯನ್ನು ಗಮನದಲ್ಲಿರಿಸಿ ನೀಡಲಾದಂಥವು. ಹಿಂದಿನ ಸಾಂಪ್ರದಾಯಿಕ ವಿಧಾನವನ್ನು ಕೈಬಿಟ್ಟು ಅನುಕೂಲಕರ ವಾತಾವರಣದಲ್ಲಿ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು ವಿದ್ಯಾಭ್ಯಾಸ ನಡೆಸುವಂತೆ ವ್ಯವಸೆಗೊಳಿಸಲು ಆಯೋಗ ಸೂಚಿಸಿತು. ಮುಖ್ಯವಾಗಿ, ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸದಲ್ಲಿ ಒಲವು ಮೂಡಿಸುವ ನಿಟ್ಟಿನಲ್ಲಿ ಆದ್ಯತೆ ನೀಡಲು ಸಲಹೆ ಮಾಡಿತು. ಈ ಸಂಬಂಧದಲ್ಲಿ ಹಿಂದುಳಿದವರು ಹೆಚ್ಚಾಗಿ ವಾಸಿಸುವ ಪ್ರದೇಶಗಳಲ್ಲಿ ಸಮಗ್ರ ವಯಸ್ಕ ಶಿಕ್ಷಣದ ಯೋಜನೆಗಳನ್ನು ಹಾಕಿಕೊಂಡು ವಯಸ್ಕರಲ್ಲಿ ತಿಳಿವಳಿಕೆ ಮೂಡಿಸಲು ಹಾಗೂ ಅಂಥಾ ವರ್ಗಗಳವರ ಮಕ್ಕಳಿಗೆ ವಸತಿಶಾಲೆಗಳನ್ನು ತೆರೆದು ಶೈಕ್ಷಣಿಕ ವಾತಾವರಣ ಮೂಡಿಸಲು ಆಯೋಗ ಶಿಫಾರಸು ಮಾಡಿತು. ಶಿಕ್ಷಣವೊಂದೆ ಹಿಂದುಳಿದವರಿಗೆ ಸಮಾಜದಲ್ಲಿ ಗೌರವ ಮತ್ತು ಸ್ವಂತಿಕೆ ಗಳಿಸಿಕೊಳ್ಳಲು ಸಹಾಯಕವಾಗುವುದು; ಇವರಿಗೆ ಕೊಡುವ ಶಿಕ್ಷಣ ಸ್ವಯಂ ಉದ್ಯೋಗಾಧಾರಿತ ಇರುವುದು ಅಪೇಕ್ಷಣೀಯ; ಎಲ್ಲಾ ವೈಜ್ಞಾನಿಕ, ತಾಂತ್ರಿಕ ಸ್ವಯಂ ಉದ್ಯೋಗ ಸಂಸ್ಥೆಗಳಲ್ಲಿ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಪ್ರವೇಶವನ್ನು ಮೀಸಲಿರಿಸಬೇಕು; ಈ ಮೀಸಲಾತಿ ಶೇ. ೨೭ ಇರಬೇಕು. ಶೇ. ೨೭ ಕ್ಕಿಂತ ಹೆಚ್ಚಿಗೆ ಮೀಸಲಾತಿ ಇರುವ ರಾಜ್ಯಗಳಲ್ಲಿ ಈ ನೀತಿಯಿಂದ ಅವುಗಳ ಸ್ವರೂಪಕ್ಕೆ ಯಾವ ಧಕ್ಕೆಯೂ ಉಂಟಾಗುವುದಿಲ್ಲ; ಮೀಸಲಾತಿ ಕೋಟಾದಲ್ಲಿ ವಿದ್ಯಾಭ್ಯಾಸ ಮುಂದುವರೆಸುವ ವಿದ್ಯಾರ್ಥಿಗಳಲ್ಲಿ ಕೀಳರಿಮೆಯನ್ನು ನಿವಾರಿಸಲು ಅವರಿಗೆ ವಿಶೇಷ ಬೋಧನಾ ವ್ಯವಸ್ಥೆ ಏರ್ಪಡಿಸುವುದರೊಡನೆ ಉಳಿದವರ ಜೊತೆ ಸ್ಪರ್ಧಿಸಲು ಪ್ರೋತ್ಸಾಹಿಸಬೇಕು, ಇತ್ಯಾದಿ ಶಿಫಾರಸುಗಳನ್ನು ಮಾಡಿತು ಆಯೋಗ. ಆರ್ಥಿಕವಾಗಿ, ಪರಂಪರಾಗತವಾಗಿ ಬಂದ ಕರಕುಶಲ ಕಸುಬುಗಳಿಗೆ ಒದಗಿರುವ ದುಸ್ಥಿತಿಯನ್ನು ಅವುಗಳಿಗೆ ಸೂಕ್ತವಾದ ಹಣಕಾಸಿನ ನೆರವು ಹಾಗೂ ತಾಂತ್ರಿಕ ತರಬೇತಿ ವ್ಯವಸ್ಥೆ ಮಾಡುವುದರೊಡನೆ ನಿವಾರಿಸಬಹುದೆಂದು ಆಯೋಗ ಸೂಚಿಸಿತು. ಉದ್ಯೋಗಾಧಾರಿತ ವಿದ್ಯಾಭ್ಯಾಸ ಪಡೆದ ಅಭ್ಯರ್ಥಿಗಳಿಗೆ ವಿಶೇಷ ರೀತಿಯಲ್ಲಿ ಹಣಸಹಾಯ ಮತ್ತು ತಾಂತ್ರಿಕ ನೆರವುಗಳನ್ನು ಒದಗಿಸುವ ಅವಶ್ಯಕತೆ ಇದೆಯೆಂದು ಹೇಳಿತು. ಕಸುಬು ಆಧಾರಿತ ಸಹಕಾರಿ ಸಂಘಗಳ ಸ್ಥಾಪನೆಗೆ ಹಾಗೂ ದೇಶದ ಕೈಗಾರಿಕಾ ಹಾಗೂ ಆರ್ಥಿಕ ರಂಗದಲ್ಲಿ ಹಿಂದುಳಿದವರು ಭಾಗವಹಿಸುವಂತೆ ಮಾಡಲು ಎಲ್ಲಾ ರಾಜ್ಯಗಳಿಗೂ ಆರ್ಥಿಕ ಮತ್ತು ತಾಂತ್ರಿಕ ಸಹಾಯ ನೀಡಲು ಸ್ವಯಂ ಪ್ರೇರಣೆಯಿಂದ ಮುಂದೆ ಬರಬೇಕೆಂದು ಆಯೋಗ ಸಲಹೆ ನೀಡಿತು.

---

(ಆಕರ: ರಿಸರ್ವೇಶನ್ಸ್ ಫಾರ್ ಶೆಡ್ಯೂಲ್ಡ್ ಕ್ಯಾಸ್ಟ್ಸ್ ಅಂಡ್ ಶೆಡ್ಯೂಲ್ಡ್ ಟ್ರೈಬ್ಸ್: ಕೋಷ್ಟಕ - ೬.೩)

ಟಿಪ್ಪಣಿ : * ಇವುಗಳನ್ನು ಹೈಕೋರ್ಟ್ ಹೊಡೆದು ಹಾಕಿತು.

+ ತೀರಾ ಹಿಂದುಳಿದ ಮತ್ತು ಅನುಸೂಚಿತ ಬುಡಕಟ್ಟುಗಳು.

0 ಜಾತಿಗಳ ಸರಾಸರಿ.

**೨೮ರ ವರೆಗೆ ಏರಿಸಲಾಗಿದ್ದು, ಆ ನಂತರ ಹಿಂತೆಗೆದುಕೊಳ್ಳಲಾಯಿತು.

ಪರಿಶಿಷ್ಟ ಜಾತಿ-ಪಂಗಡ ಹಾಗೂ ಹಿಂದುಳಿದ ವರ್ಗಗಳ ಚಿಕ್ಕ ಭೂ ಹಿಡುವಳಿದಾರರು, ಗೇಣಿದಾರರು, ಕೃಷಿ ಕೂಲಿಗಳು, ನೆಲೆ ಕಳೆದುಕೊಂಡಿರುವ ಹಳ್ಳಿಗಾಡಿನ ಕುಶಲಕರ್ಮಿಗಳು ಮೊದಲಾದವರ ಬದುಕಿನಲ್ಲಿ ಮೂಲ ಪರಿವರ್ತನೆ ತಂದು ಅವರಲ್ಲಿ ಆತ್ಮವಿಶ್ವಾಸವನ್ನು ಮತ್ತೆ ತುಂಬಬೇಕಾಗಿದೆ; ದೇಶದ ೩/೪ ಜನಸಂಖ್ಯೆಯನ್ನು ಹೊಂದಿಯೂ ಪರಿಶಿಷ್ಟ ಜಾತಿ-ಪಂಗಡ ಹಾಗೂ ಹಿಂದುಳಿದ ವರ್ಗಗಳು ತಮ್ಮ ಜನಸಂಖ್ಯೆಗನುಗುಣವಾಗಿ ರಾಜಕೀಯ ಪ್ರಾತಿನಿಧ್ಯವನ್ನು ಇನ್ನೂ ಪಡೆದಿಲ್ಲ; ಉತ್ಪಾದನೆ ಮತ್ತು ಹಂಚಿಕೆಯ ನಡುವಿನ ಅಸಮತೋಲನವನ್ನು ಸರಿಪಡಿಸುವವರೆಗೆ ಮುಂದುವರೆದ ಜನಾಂಗದವರು ತಮ್ಮ ದಬ್ಬಾಳಿಕೆಯನ್ನು ಇನ್ನೂ ಹೆಚ್ಚಿಸಿಕೊಂಡು ಹೋಗುವುದು ತಪ್ಪುವುದಿಲ್ಲ; ಈಗಿರುವ ಉತ್ಪಾದನಾ ಸಂಬಂಧಗಳಲ್ಲಿ ಆಮೂಲಾಗ್ರ ಬದಲಾವಣೆಗಳನ್ನು ತುರ್ತಾಗಿ ತರದಿದ್ದರೆ ಹಿಂದುಳಿದವರಿಗೆ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ನ್ಯಾಯವನ್ನು ಒದಗಿಸಲು ಸಾಧ್ಯವಿಲ್ಲ; ಇದಕ್ಕೆ ಕೇವಲ ರಾಜಕೀಯ ದೃಢ ನಿರ್ಧಾರದ ಅವಶ್ಯಕತೆಯಿದೆ. ಆದ್ದರಿಂದ ಎಲ್ಲಾ ರಾಜ್ಯಗಳಿಗೆ ಕಟ್ಟುನಿಟ್ಟಾದ ಸೂಚನೆ ಕೊಟ್ಟು ಭೂ ಸುಧಾರಣೆಯ ಪ್ರಗತಿಪರ ಕಾನೂನನ್ನು ಜಾರಿಗೆ ತಂದು ಉತ್ಪಾದನಾ ಕ್ಷೇತ್ರದಲ್ಲಿ ಮೂಲಭೂತ ಬದಲಾವಣೆ ತರಬೇಕು; ಸದ್ಯಕ್ಕೆ ಹೆಚ್ಚುವರಿ ಭೂಮಿಯನ್ನು ಪರಿಶಿಷ್ಟ ಜಾತಿ-ಪಂಗಡಗಳ ಭೂಹೀನರಿಗೆ ಹಂಚಲಾಗುತ್ತಿದ್ದು, ಭೂಸುಧಾರಣಾ ಕಾಯ್ದೆಗಳ ಪರಿಣಾಮಕಾರಿ ಜಾರಿಯಿಂದ ಭವಿಷ್ಯದಲ್ಲಿ ಹೆಚ್ಚುವರಿ ಭೂಮಿ ಉಳಿದರೆ ಅದನ್ನು ಹಿಂದುಳಿದವರಿಗೆ ಹಂಚಲು ಶಿಫಾರಸು ಮಾಡಿತು. ಅಸ್ಪೃಶ್ಯರೆನಿಸಿದ ಕೆಲವು ಕಸಬುದಾರ ಜಾತಿಗಳನ್ನು ಪರಿಶಿಷ್ಟ ಜಾತಿ - ಪಂಗಡಗಳ ಪಟ್ಟಿಗೆ ಸೇರಿಸಲು, ಹಿಂದುಳಿದ ವರ್ಗಗಳ ನಿಗಮ ಸ್ಥಾಪಿಸಲು, ಹಿಂದುಳಿದ ವರ್ಗಗಳ ಮಂತ್ರಾಲಯ ತೆರೆಯಲು, ಕೆಲವು ವರ್ಗಗಳಿಗೆ ವಿಶೇಷ ಮೀಸಲು ಕ್ಷೇತ್ರಗಳನ್ನು ವಿಂಗಡಿಸಲು ಸಹಾ ಶಿಫಾರಸು ಮಾಡಿತು. ಹಿಂದುಳಿದ ವರ್ಗಗಳ ಕಲ್ಯಾಣಕಾರಿ ಕಾರ್ಯಗಳಿಗೆ ಕೇಂದ್ರದ ನೆರವು ದೊರೆಯದೆ ರಾಜ್ಯಗಳೇ ಇದನ್ನು ನಿರ್ವಹಿಸಬೇಕೆಂಬ ಸಮಸ್ಯೆ ಎದುರಾದಾಗ, ಪರಿಶಿಷ್ಟ ಜಾತಿ - ಪಂಗಡಗಳ ಅಭಿವೃದ್ಧಿಗೆ ಕೇಂದ್ರ ಅನುದಾನ ನೀಡುವಂತೆ ಹಿಂದುಳಿದ ವರ್ಗಗಳ ಅಭಿವೃದ್ಧಿಗೆ ಅನುದಾನ ನೀಡಬೇಕೆಂದು ರಾಜ್ಯ ಸರ್ಕಾರಗಳ ವಾದವನ್ನು ಆಯೋಗ ಸಮರ್ಥಿಸಿತು. ಇಪ್ಪತ್ತು ವರ್ಷಗಳ ನಂತರ ಆಯೋಗದ ಇಡೀ ಶಿಫಾರಸುಗಳ ಮರು ಮೌಲ್ಯಮಾಪನ ಮಾಡಬೇಕೆಂಬ ಸೂಚನೆಯನ್ನೂ ವರದಿಯಲ್ಲಿ ನೀಡಲಾಗಿದೆ.

ಕೇಂದ್ರದಲ್ಲಿ ಮಂಡಲ ವರದಿಯ ಮಂಡನೆ (೧೯೮೦) ಮತ್ತು ಅದನ್ನು ಸರ್ಕಾರ ಒಪ್ಪಿಕೊಂಡುದು (೧೯೯೦) - ಈ ಮಧ್ಯಾವಧಿಯ ಅಂತರ ೧೦ ವರ್ಷಗಳು. ಈ ಹತ್ತು ವರ್ಷಗಳಲ್ಲಿ ಕರ್ನಾಟಕದಲ್ಲಿ ಇನ್ನೆರಡು ಹಿಂದುಳಿದ ವರ್ಗಗಳ ಆಯೋಗಗಳು ರಚನೆಗೊಂಡವು. ಎರಡನೇ ಹಿಂದುಳಿದ ವರ್ಗಗಳ ಆಯೋಗ ೧೯೮೩ರಲ್ಲಿ ಟಿ. ವೆಂಕಟಸ್ವಾಮಿಯವರ ನೇತೃತ್ವದಲ್ಲಿ ಹಾಗೂ ಮೂರನೇ ಹಿಂದುಳಿದ ವರ್ಗಗಳ ಆಯೋಗ ೧೯೮೮ರಲ್ಲಿ ಓ. ಚಿನ್ನಪ್ಪರೆಡ್ಡಿಯವರ ನೇತೃತ್ವದಲ್ಲಿ ಕಾರ್ಯೋನ್ಮುಖವಾದವು. ಈ ಆಯೋಗಗಳೆಲ್ಲವೂ ಹಿಂದುಳಿದ ವರ್ಗಗಳವರ ಕಲ್ಯಾಣಕ್ಕೆ ಕಾರ್ಯಕ್ರಮಗಳನ್ನು ರೂಪಿಸುವ, ಮೀಸಲಾತಿ ಪ್ರಮಾಣವನ್ನು ನಿರ್ಧರಿಸುವ ನಿಟ್ಟಿನಲ್ಲಿ ಐತಿಹಾಸಿಕ ಪಾತ್ರ ವಹಿಸಿದವು. ಹಾಗೆಯೇ, ಪರ-ವಿರೋಧದ ಪ್ರವಾಹವನ್ನೂ ಹರಿಸಿದವು. ಏನೇ ಇದ್ದರೂ, ಕರ್ನಾಟಕದ

ಹಿಂದುಳಿದ ವರ್ಗಗಳ ಅಭಿವೃದ್ಧಿ ಕುರಿತು ನಡೆಸಬಹುದಾದ ಸಮೀಕ್ಷೆಯನ್ನು ಹಾವನೂರು - ವೆಂಕಟಸ್ವಾಮಿ - ಚಿನ್ನಪ್ಪರೆಡ್ಡಿ ಆಯೋಗಗಳ ಬೆಳಕಿನಲ್ಲಿ ಕೈಗೊಳ್ಳುವುದು ಎಷ್ಟು ಅನಿವಾರ್ಯವೋ, ಇವುಗಳ ಹಿನ್ನೆಲೆಯಲ್ಲಿ ಕೇಂದ್ರದ ಕಾಲೇಲ್ಕರ್ ಮತ್ತು ಮಂಡಲ್ ಆಯೋಗಗಳನ್ನು ಗಮನಿಸಬೇಕಾದದ್ದೂ ಅಷ್ಟೇ ಅನಿವಾರ್ಯ. ಕೆಲವು ವ್ಯತ್ಯಾಸಗಳ ವಿನಾ ಇವೆಲ್ಲವುಗಳ ಉದ್ದೇಶ ಒಂದೇ ಎನ್ನುವುದರಲ್ಲಿ ಸಂಶಯವಿಲ್ಲ.

ಈ ಎಲ್ಲಾ ಆಯೋಗಗಳ ರಚನೆಗೆ ಕಾರಣವಾದುದು ಬ್ರಾಹ್ಮಣೇತರ ಚಳವಳಿಯೇ ಎಂಬುದಾಗಿ ವ್ಯಾಖ್ಯಾನಿಸುವುದುಂಟು. ೧೯೧೮ ರಲ್ಲಿ ಮಿಲ್ಲರ್ ಸಮಿತಿ ರಚನೆಗೊಂಡುದು ಈ ಹಿನ್ನೆಲೆಯಲ್ಲಿ ಎಂಬುದು ಸ್ಪಷ್ಟ. ಆ ನಂತರದ ಕಾಲಾವಧಿಯಲ್ಲಿ ಈ ಚಳವಳಿ ವಿವಿಧ ಹಂತಗಳಲ್ಲಿ ಬೆಳೆದು ಬಂದುದನ್ನು ಚರಿತ್ರೆ ನಿರೂಪಿಸುತ್ತದೆ. ಹಿಂದುಳಿದ ವರ್ಗಗಳ ಅಥವಾ 'ಬ್ರಾಹ್ಮಣ ವಿರೋಧಿ' ಚಳವಳಿಯ ಮುಂದುವರಿಕೆಯಲ್ಲಿ ೧೯೨೬ರಲ್ಲಿ ಆರಂಭವಾದ ಇ. ವಿ. ರಾಮಸ್ವಾಮಿ ನಾಯ್ಕರ್‌ರ ಸ್ವಾಭಿಮಾನ ಚಳವಳಿ ಬೀರಿದ ಪ್ರಭಾವವನ್ನೂ ವಿಶ್ಲೇಷಿಸಲಾಗುತ್ತದೆ. ಸ್ವಾಭಿಮಾನ ಚಳವಳಿಯನ್ನು ಬ್ರಾಹ್ಮಣ ವಿರೋಧಿ ಚಳವಳಿಯೆಂತಲೇ ಗುರುತಿಸಲಾಗಿದೆ. ಬ್ರಾಹ್ಮಣಶ್ರೇಷ್ಠತೆ, ಅಥವಾ ಪೆರಿಯಾರ್ ಕರೆದಂತೆ Brahminocracy ಎಂಬುದು ಈ ಹಂತದಲ್ಲಿ ದಕ್ಷಿಣಭಾರತದಲ್ಲಿಯೇ ಮಾಸತೊಡಗಿತೆಂಬುದಕ್ಕೆ ಹಾಗೂ ಸಾಮಾಜಿಕ ನ್ಯಾಯಸ್ಥಾಪನೆಯ ಯುಗವನ್ನು ಆರಂಭಿಸಿತೆಂಬುದಕ್ಕೆ ಈ ಸ್ವಾಭಿಮಾನ ಚಳವಳಿ ಸಂಕೇತವೆನಿಸಿತು (ವೇಣುಗೋಪಾಲ್ : ೧೯೯೮: ೪೯, ೫೦). ಚಳವಳಿಯ ಹುಟ್ಟಿನ ಹಿನ್ನೆಲೆಯಲ್ಲಿ ಜ್ಯೋತಿ ಬಾ ಫೂಲೆಯವರ ಸತ್ಯಶೋಧಕ ಸಮಾಜ(೧೮೭೩)ದ ಪ್ರೇರಣೆ, ಈ ಚಳವಳಿ ಹಮ್ಮಿಕೊಂಡ ಸುಧಾರಣಾ ಕಾರ್ಯಕ್ರಮಗಳು, ಹೋರಾಟಗಳು, ಆ ನಂತರ ಇದು ತಮಿಳು ಚಳವಳಿಯಾಗಿ ಮಾರ್ಪಟ್ಟುದು, ಡಿ.ಎಂ.ಕೆ.ಯಲ್ಲಿ ಎಂ. ಜಿ. ರಾಮಚಂದ್ರನ್ ಅಭಿಮಾನಿಗಳ ಬಳಗದ ಕೈ ಮೇಲಾದುದರಿಂದ ಅದು ಅಭಿಮಾನಿ ಚಳವಳಿಯಾಗಿ ಮಾರ್ಪಟ್ಟುದು; ಅಶಿಕ್ಷಿತ ಮಂದಿ, ಹಿಂದುಳಿದವರು, ದಲಿತರು, ಮಹಿಳೆಯರು ಇದಕ್ಕೆ ಬೆಂಬಲಿಗರಾಗಿ ಪರಿವರ್ತಿತರಾದುದು - ಹೀಗೆ ಈ ಚಳವಳಿ ಸಾಗಿ ಬಂದ ಹಾದಿಯನ್ನು ಗುರುತಿಸಲಾಗುತ್ತದೆ. ಈ ಸ್ವಾಭಿಮಾನ ಚಳವಳಿಯನ್ನು ಮೈಸೂರಿನ ಹಿಂದುಳಿದ ವರ್ಗಗಳ ಚಳವಳಿಯೊಡನೆ ಹೋಲಿಸಿ ನೋಡುವ ಪ್ರಯತ್ನವೂ ನಡೆದಿದೆ.

ಮೈಸೂರು ಸಂಸ್ಥಾನದಲ್ಲಿ ನಡೆದ ಹಿಂದುಳಿದ ವರ್ಗಗಳ ಚಳವಳಿ ಮತ್ತು ಸ್ವಾಭಿಮಾನ ಅಥವಾ ಬ್ರಾಹ್ಮಣ ವಿರೋಧಿ ಚಳವಳಿ - ಇವೆರಡೂ ಬ್ರಾಹ್ಮಣರ ಸಾಮಾಜಿಕ ಅಂತಸ್ತಿಗೆ ಸವಾಲು ಹಾಕಿದಂಥವೆಂದು ವ್ಯಾಖ್ಯಾನಿಸುತ್ತಾರೆ ಡಾ. ಆರ್ಕೆ. ಮಣಿಪಾಲ. ಮೈಸೂರು ಸಂಸ್ಥಾನದ ಈ ಚಳವಳಿ ಕ್ರಮೇಣ ತನ್ನ ಪ್ರಭಾವವನ್ನು ರಾಜ್ಯದ ಹೊರಗೂ ಬೀರಿತು ಮತ್ತು ಈ ಚಳವಳಿಯೇ ಮುಂದೆ ಮೀಸಲಾತಿ ಪರವಾದ ಒತ್ತಾಸೆ ನೀಡುವಂತಾಯಿತು; ಹಾಗೂ ಪ್ರಭುತ್ವವು ಹಿಂದುಳಿದ ಜಾತಿ-ವರ್ಗಗಳ ನ್ಯಾಯಬದ್ಧ ಔದ್ಯೋಗಿಕ, ಶೈಕ್ಷಣಿಕ ಹಕ್ಕುಗಳನ್ನು ಗುರುತಿಸುವಂತೆ ಆಗ್ರಹಪಡಿಸಿತು. ಹಿಂದುಳಿದ ವರ್ಗಗಳಿಗೆ ಮೀಸಲಾತಿಯ ದರವನ್ನು ವೈಜ್ಞಾನಿಕವಾಗಿ ವ್ಯಾಖ್ಯಾನಿಸುವಂತೆ ವಿವಿಧ ಆಯೋಗಗಳ ನೇಮಕಕ್ಕೂ ಈ ಚಳವಳಿಯೇ ಕಾರಣವಾಯಿತೆನ್ನುತ್ತಾರೆ ಅವರು (ಮಣಿಪಾಲ : ೧೯೯೭ : ೪೬). ಭೂಸ್ವತ್ತಿಗೂ ಸಾರ್ವಜನಿಕ ಸ್ಥಾನಮಾನಕ್ಕೂ ಸಾಪೇಕ್ಷವಾದ ಸಂಬಂಧವಿದೆ ಎಂಬ ತತ್ವದ

ಭಿನ್ನತೆಯಲ್ಲಿ, ಬ್ರಾಹ್ಮಣರಿಗೆ ಸವಾಲು ಹಾಕಬಲ್ಲ ಜಾತಿಗಳಲ್ಲಿ ಲಿಂಗಾಯಿತ ಮತ್ತು ಒಕ್ಕಲಿಗ ಜಾತಿಸಮುದಾಯಗಳು ಪ್ರಧಾನವಾಗಿ ಕಂಡುಬರುತ್ತವೆ. ಇದನ್ನೆ ಅಲ್ವೈ. ಮಣಿಪಾಲರು, ಈ ಲಿಂಗಾಯಿತ - ಒಕ್ಕಲಿಗ ಜಾತಿ ಸಮುದಾಯಗಳು ತಮ್ಮ ಭೂಮಾಲೀಕತ್ವ ದಿಂದ ಹೊಂದಿದ ಪ್ರಭಾವವನ್ನು ಬಳಸಿಕೊಂಡು, ಅದುವರೆಗೆ ಬ್ರಾಹ್ಮಣರು ಹೊಂದಿದ್ದ ಪ್ರಾಬಲ್ಯವನ್ನು ಕಿತ್ತುಕೊಳ್ಳುವುದಕ್ಕಾಗಿ ಸಂಘಟಿತರಾಗಿ ಬಹುಮಟ್ಟಿಗೆ ಅದರಲ್ಲಿ ಯಶಸ್ವಿಯಾದ ಸಂಗತಿಯನ್ನು ಈ ಚಳವಳಿ ಸಾದರಪಡಿಸುತ್ತದೆ ಎಂದಿರುವುದು (ಪು. ೪೭).

ಆದರೆ ಮೀಸಲಾತಿ ವಿಷಯದಲ್ಲಿ ಈ ಜಾತಿ ಸಮುದಾಯಗಳು ದಲಿತವರ್ಗ ಗಳೊಡನೆ ನ್ಯಾಯಯುತವಾಗಿ ನಡೆದುಕೊಂಡಿಲ್ಲವೆನ್ನುವುದು ವಾಸ್ತವ ಸಂಗತಿ. ಕರ್ನಾಟಕದಲ್ಲಿ ನಡೆದ ಹಿಂದುಳಿದ ವರ್ಗಗಳ ಚಳವಳಿಯಲ್ಲಿ ಪ್ರಬಲ ಲಿಂಗಾಯಿತ ಮತ್ತು ಒಕ್ಕಲಿಗ ಜಾತಿಗಳು ಬ್ರಾಹ್ಮಣ ಪ್ರಾಬಲ್ಯದ ವಿರುದ್ಧ ಸೆಣಸಿ, ತಮ್ಮ ಔದ್ಯೋಗಿಕ ಮೀಸಲಾತಿ ಪಡೆಯುವಲ್ಲಿ ಯಶಸ್ವಿಯಾದರೂ ಮೀಸಲಾತಿಗೆ ಹೆಚ್ಚು ಅರ್ಹವೆನಿಸಿದ್ದ ದಲಿತ ಸಮುದಾಯಗಳನ್ನು ನಿರ್ಲಕ್ಷಿಸಿದುದು ದಿಟ. "ಈ ಚಳವಳಿ ಕರ್ನಾಟಕದಲ್ಲಿ ಭೂಮಾಲೀಕ ಸಮುದಾಯಗಳಿಗೆ ತಮ್ಮ ರಾಜಕೀಯ ವರ್ಚಸ್ಸನ್ನು ಊರ್ಜಿತಪಡಿಸಲು ಅವಕಾಶ ಮಾಡಿಕೊಟ್ಟಿತು; ಹಾಗೂ, ರಾಜ್ಯದ ರಾಜಕೀಯದಲ್ಲಿ ಅವರೇ ಅಧಿಕಾರ ಸ್ಥಾನದಲ್ಲಿ ಮೆರೆಯಲು ಕಾರಣವಾಯಿತು. ಹೀಗಾಗಿ, ನೇರವಾಗಿ ದಲಿತ ಸಮುದಾಯಗಳಿಗೆ ಈ ಮೀಸಲಾತಿಯ ಸೌಲಭ್ಯ ದೊರಕದಂತೆ ಈ ಸಮುದಾಯಗಳು ಅಡ್ಡಿಯಾದುದು ನಿಜ. ಭಾರತದ ಸಮಾಜ ರಚನೆಯ ಮತ್ತು ಸಾಮಾಜಿಕ ಚಲನೆಯ ಸ್ವರೂಪವನ್ನು ಚಾರಿತ್ರಿಕ ನೆಲೆಯಲ್ಲಿ ಪರಿಭಾವಿಸಿದಾಗ ಇದೇನೂ ಅಸ್ವಾಭಾವಿಕ ವಿದ್ಯಮಾನವೆಂದೇನೂ ಅನಿಸುವುದಿಲ್ಲ" (ಮಣಿಪಾಲ : ೧೯೯೭ : ೪೬) ಎಂಬ ಮಾತಿನಲ್ಲಿ ನಿಜಾಂಶವಿಲ್ಲದಿಲ್ಲ.

ಕರ್ನಾಟಕದ ೧ನೇ ಹಿಂದುಳಿದ ವರ್ಗಗಳ ಆಯೋಗ ಅಥವಾ ಹಾವನೂರು ಆಯೋಗದ ವರದಿ ಸರ್ಕಾರಕ್ಕೆ ಸಲ್ಲಿಕೆಯಾಗಿ (೧೯೭೫) ಇಲ್ಲಿಗೆ ಎರಡೂವರೆ ದಶಕಗಳೇ ಕಳೆದಿವೆ. ಸರ್ ಲೆಸ್ಲಿ ಮಿಲ್ಲರ್ ಸಮಿತಿಯನ್ನು ಗಮನಿಸಿದರೆ, ೧೯೧೮ ರಿಂದ ಈತನಕ ಎಂಟು ದಶಕಗಳು ಕಳೆದಿವೆ. ಈ ಅವಧಿಯಲ್ಲಿ ಹಿಂದುಳಿದ ವರ್ಗಗಳ ಬೇಡಿಕೆ ಸಂಪೂರ್ಣ ಈಡೇರಿದೆಯೇ? ಅವುಗಳಿಗೆ ನ್ಯಾಯ ದೊರೆತಿದೆಯೇ? ದಲಿತರ ಸ್ಥಾನ-ಮಾನಗಳೇನು? ಈ ಪ್ರಶ್ನೆಗಳು ಮತ್ತೆ ಮತ್ತೆ ಎದುರಾಗುತ್ತವೆ. ಈ ನಿಟ್ಟಿನಲ್ಲಿ ಸಮೀಕ್ಷಾ ನೋಟವೊಂದನ್ನು ಹರಿಸುವುದು ಅಗತ್ಯ. ಒಂದು ಮಾತಿನಲ್ಲಿ ಹೇಳುವುದಾದರೆ, ಹಿಂದುಳಿದ ವರ್ಗಗಳ ಹಾಗೂ ದಲಿತ ಸಮುದಾಯಗಳ ಚಳವಳಿಗಳು ನಿರಂತರವಾದುವೆಂದೇ ದೃಢಪಡುತ್ತದೆ. ಹಿಂದುಳಿದ ವರ್ಗಗಳ ಕೆಲವು ಹೋರಾಟಗಾರರು ಇದನ್ನು ಆಗಾಗ್ಗೆ ಸಮರ್ಥಿಸುವುದುಂಟು. ರಾಜ್ಯ ಹಾಗೂ ಕೇಂದ್ರಗಳ ಹಿಂದುಳಿದ ವರ್ಗಗಳ ಆಯೋಗಗಳ ವರದಿಗಳನ್ನು ಪರಿಶೀಲಿಸಿದ ನಂತರವೂ ಹಿಂದುಳಿದ ವರ್ಗಗಳವರಿಗೆ ಸರ್ಕಾರಗಳು ತಕ್ಕ ನ್ಯಾಯ ದೊರಕಿಸಿಲ್ಲವೆಂದು ದೂರುವುದುಂಟು.

ಹಿಂದುಳಿದ ವರ್ಗಗಳ ಜನರಿಗೆ ಇಲ್ಲಿಯವರೆಗೆ 'ಮೂಗಿಗೆ ತುಪ್ಪ ಸವರುವ' ಕೆಲಸ ನಡೆದಿದೆಯೇ ವಿನಾ ನಿಜ ಅರ್ಥದಲ್ಲಿ ಸೌಲಭ್ಯ ಒದಗಿಸಿಲ್ಲವೆಂಬ ವ್ಯಾಪಕ ಟೀಕೆಯೂ ಪ್ರಚಲಿತದಲ್ಲಿದೆ. ಇತರ ಹಿಂದುಳಿದ ವರ್ಗಗಳಿಗೆ ಉದ್ಯೋಗ ನೇಮಕ ಮತ್ತು ಬಡ್ತಿ

ಹಾಗೂ ಶಿಕ್ಷಣ ಕ್ಷೇತ್ರದಲ್ಲಿ ಮೀಸಲು ಕಲ್ಪಿಸುವಂತ ಮಂಡಲ ಆಯೋಗದ ವರದಿಯಲ್ಲಿ ಶಿಫಾರಸು ಮಾಡಲಾಗಿದ್ದರೂ ಈ ವರದಿಯ ಶಿಫಾರಸುಗಳನ್ನು ಪೂರ್ಣ ಪ್ರಮಾಣದಲ್ಲಿ ಜಾರಿಗೊಳಿಸದಿರುವುದು; ಮಂಡಲ ವರದಿ ಜಾರಿಗೊಳಿಸುವ ಮುನ್ನವೇ ಅದನ್ನು ನಿರರ್ಥಕ ಗೊಳಿಸಲು ಪ್ರಯತ್ನ ನಡೆದಿರುವುದು; ಕೇಂದ್ರ ಸರ್ಕಾರಿ ನೌಕರರ ನಿವೃತ್ತಿ ವಯಸ್ಸನ್ನು ೫೮ ರಿಂದ ೬೦ಕ್ಕೆ ಹೆಚ್ಚಿಸುವ ಮೂಲಕ ನೇಮಕಾತಿಯೂ ಇಲ್ಲ ಮೀಸಲಾತಿಯೂ ಇಲ್ಲವೆಂಬ ರೀತಿಯಲ್ಲಿ ಸಂಚು ನಡೆಸಲಾಗುತ್ತಿರುವುದು - ಇವು ಆರೋಪಗಳು. ತಮ್ಮ ಮೇಲೆ ನಡೆಯುತ್ತಿರುವ ಅನ್ಯಾಯದ ವಿರುದ್ಧ ಹಾಗೂ ಮೀಸಲು ಸೌಲಭ್ಯಗಳಿಗೆ ಒತ್ತಾಯಿಸಿ ಹಿಂದುಳಿದವರು ಹೋರಾಟವನ್ನೇ ನಡೆಸಿಲ್ಲ; ೧೯೫೬ರಲ್ಲಿ ಕಾಕಾಸಾಹೇಬ ಕಾಲೇಲ್ಕರ್ ವರದಿ, ನಂತರ ೧೯೬೩ ರಲ್ಲಿ ಡಾ. ನಾಗನಗೌಡ ವರದಿಗಳನ್ನು ತಿರಸ್ಕರಿಸಿದಾಗಲೂ ಹಿಂದುಳಿದ ವರ್ಗಗಳವರು ಪ್ರತಿಭಟಿಸಲಿಲ್ಲ; ಇನ್ನು ಮುಂದೆ ಹೀಗೆಯೇ ತಟಸ್ಥವಾಗಿದ್ದರೆ ಹಿಂದುಳಿದವರ ಅಭಿವೃದ್ಧಿ ಸಾಧ್ಯವಾಗದು ಎಂಬಂಥ ಹೇಳಿಕೆಗಳು ಗಮನ ಸೆಳೆಯುತ್ತವೆ. ಅಭಿವೃದ್ಧಿಯಲ್ಲಿ ಹಿಂದುಳಿದವರಿಗೆ ವಂಚನೆಯಾಗುತ್ತಿರುವುದನ್ನು ಎತ್ತಿ ತೋರಲಾಗುತ್ತದೆ. ಅಸಹನೆ - ಅಸಂತೃಪ್ತಿಗಳಿಂದ ಚಡಪಡಿಸುತ್ತಿರುವ ಕೆಲವು ಹಿಂದುಳಿದ ವರ್ಗಗಳವರ ಇತರ ಒತ್ತಾಯದ ಬೇಡಿಕೆಗಳಲ್ಲಿ, ಮಹಿಳಾ ಮೀಸಲು ಮಸೂದೆಯಲ್ಲಿ ಹಿಂದುಳಿದ ವರ್ಗಗಳ ಮಹಿಳೆಯರಿಗೆ ಮೀಸಲು ಕಲ್ಪಿಸುವುದು ಅಗತ್ಯ, ಇಲ್ಲವಾದರೆ ಮೇಲ್ವರ್ಗದ ಮಹಿಳೆಯರಿಗಷ್ಟೆ ಅನುಕೂಲವಾಗುತ್ತದೆಂಬುದೂ ಒಂದು. ಅಲ್ಪಸ್ವಲ್ಪ ಮೀಸಲು ಸೌಲಭ್ಯಗಳಿಂದ ಯಾವುದೇ ಸಮುದಾಯದ ಏಳಿಗೆ ಆಗದು. ದೇಶದಲ್ಲಿ ತೀವ್ರಗೊಳ್ಳುತ್ತಿರುವ ಖಾಸಗೀಕರಣ ಪ್ರಕ್ರಿಯೆಯಿಂದಾಗಿ ಮೀಸಲು ಅಭ್ಯರ್ಥಿಗಳಿಗೆ ಉದ್ಯೋಗಾವಕಾಶಗಳು ಇನ್ನು ಮುಂದೆ ಕಡಿಮೆಯಾಗುತ್ತವೆ. ಆದ್ದರಿಂದ ಶೋಷಣೆಗೆ ಒಳಗಾದ, ಅವಕಾಶ ವಂಚಿತರಾದ ಜಾತಿಗಳ ಜನರೆಲ್ಲರೂ ಸೇರಿ ಹಿಂದುಳಿದವರ ಸಂಘಟನೆ ರೂಪಿಸಬೇಕು. ರಾಜಕೀಯ ಅಧಿಕಾರವಿಲ್ಲದೆ ಎಷ್ಟು ಮೀಸಲು ಸೌಲಭ್ಯ ಇದ್ದರೂ ಪ್ರಯೋಜನವಾಗದೆಂತಲೂ ಭಾವಿಸಲಾಗುತ್ತದೆ.

ಪಾಶ್ಚಾತ್ಯ ದೇಶಗಳಲ್ಲಿ ವರ್ಗಪದ್ಧತಿ ಇದ್ದು, ಭಾರತದಲ್ಲಿ ಜಾತಿ ಹಾಗೂ ವರ್ಗ ಪದ್ಧತಿಗಳೆರಡೂ ಸಕ್ರಿಯವಾಗಿರುವುದರಿಂದ ಈ ದೇಶದಲ್ಲಿ ರಾಜಕೀಯ ಮತ್ತು ಆರ್ಥಿಕ ಸಮಾನತೆ ಬಂದರೂ ಸಾಮಾಜಿಕ ಸಮಾನತೆ ಬರುತ್ತದೆಂಬುದು ದೂರದ ಮಾತು; ಇಂಥಾ ಪರಿಸ್ಥಿತಿಯಲ್ಲಿ ಸಂವಿಧಾನಬದ್ಧ ಹಕ್ಕುಗಳಿಗಾಗಿ ಹಾಗೂ ಸಮಾನತೆಗಾಗಿ ಹೋರಾಡುವುದು ಅನಿವಾರ್ಯವೆಂಬಂಥ ದೃಷ್ಟಿಯೇ ಹಿಂದುಳಿದ ಮತ್ತು ದಲಿತ ವರ್ಗಗಳಲ್ಲಿರುವುದು. ಭಾರತದಲ್ಲಿ ಆಳವಾಗಿ ಬೇರೂರಿರುವ ಜಾತಿವ್ಯವಸ್ಥೆ ಮತ್ತು ಅಸ್ಪೃಶ್ಯತೆಗಳ ವಿರುದ್ಧ ವಾಸ್ತವ ನೆಲೆಗಟ್ಟಿನಲ್ಲಿ ಸೈದ್ಧಾಂತಿಕ ಸಂಘರ್ಷ ನಡೆಯಬೇಕೆಂಬ ಒತ್ತಾಯವಿರುವುದು ಸಹಜ. ಇದರಿಂದ ದುಡಿಯುವ ವರ್ಗದವರು ಮತ್ತು ತುಳಿತಕ್ಕೆ ಒಳಗಾದವರು ಒಂದಾಗುವಲ್ಲಿ ವಿಘ್ನಗಳಾಗಿ ಪರಿಣಮಿಸಿರುವ ಜಾತಿಪದ್ಧತಿ ಮತ್ತು ಅಸ್ಪೃಶ್ಯತೆಗಳನ್ನು ನಿವಾರಿಸಲು ಸಾಧ್ಯವಾಗಬಹುದು. ಶೇಕಡ ೬೫ರಷ್ಟು ಅಪಾರ ಸಂಖ್ಯೆಯಲ್ಲಿರುವ ಹಿಂದುಳಿದ ವರ್ಗಗಳ ಮಾನವ ಸಂಪನ್ಮೂಲದ ಪ್ರತಿಭೆಗಳನ್ನು ಬಳಸಿಕೊಳ್ಳುವಲ್ಲಿ ವಿಫಲವಾಗಿರುವುದು ಮಾತ್ರವೇ ಅಲ್ಲ, ಈ ವಿಶಾಲ ಸಂಪನ್ಮೂಲದ ಬಳಕೆಯಾಗದ ಹೊರತು ಈ ದೇಶದ ಅಭಿವೃದ್ಧಿ

ಸಾಧ್ಯವೇ ಇಲ್ಲ. ಮುಂದುವರೆದವರ ಬದುಕಿನ ಮೂಲಾಧಾರವೇ ಹಿಂದುಳಿದ ವರ್ಗಗಳ ಜನ. ಹಿಂದುಳಿದ ವರ್ಗಗಳವರ, ದುರ್ಬಲವರ್ಗಗಳವರ ಏಳಿಗೆಯನ್ನು ಇತರೆ ಸಮಾಜಗಳವರು, ಹಾಗೂ ಮುಖ್ಯವಾಗಿ ಶ್ರೀಮಂತರು ಬಯಸುವುದಾದರೆ ಅವರ ಅಭಿವೃದ್ಧಿ ಕಾರ್ಯ ಕಷ್ಟವಾಗದು; ಯಾವುದೇ ಯೋಜನೆ ಅಗತ್ಯವೆನಿಸದು. ಭಾರತವನ್ನು ಜಾತ್ಯತೀತ ದೇಶವೆಂದು ಕರೆಯುತ್ತಿದ್ದರೂ ಇಡೀ ವ್ಯವಸ್ಥೆ ನಿಂತಿರುವುದೇ ಜಾತೀಯತೆಯ ಮೇಲೆ. ಇಂಥಾ ಕೆಲವು ವಿಚಾರಗಳು ಹಿಂದುಳಿದ ವರ್ಗಗಳವರು ಏರ್ಪಡಿಸುವ ವೇದಿಕೆಗಳಿಂದ ಕೇಳಿಬರುವಂಥವು.

## ೫.೨. ಹಿಂದುಳಿದ ವರ್ಗಗಳ ಮುಂದುವರೆದ ಸಮಸ್ಯೆಗಳು

ಹಿಂದುಳಿದ ವರ್ಗಗಳು ಎದುರಿಸುತ್ತಿರುವ ಸಮಸ್ಯೆಗಳು ಹಲವು ಬಗೆಯವು. ಆಯೋಗಗಳು ಪರಿಹರಿಸದ ಅಥವಾ ಸರಿಯಾಗಿ ಅರ್ಥೈಸದ ಕಾರಣಕ್ಕಾಗಿ ಹಿಂದಿನ ಸ್ಥಿತಿಯಲ್ಲಿಯೇ ಕೆಲವು ಜಾತಿಗಳು ಇನ್ನೂ ಇರುವುದು ವ್ಯಕ್ತಪಡುತ್ತದೆ. ತಮಗಾದ ಅನ್ಯಾಯವನ್ನು ಸರಿಪಡಿಸಲು ಸಮಾವೇಶಗಳನ್ನು ನಡೆಸುವುದು, ಮೆರವಣಿಗೆಗಳನ್ನು ಏರ್ಪಡಿಸುವುದು, ಸೌಲಭ್ಯಗಳನ್ನು ಒದಗಿಸುವಂತೆ ಸಂಬಂಧಿಸಿದವರಿಗೆ ಮೇಲಿಂದ ಮೇಲೆ ಮನವಿಪತ್ರಗಳನ್ನು ಸಲ್ಲಿಸುವುದು, ಪರಿಶಿಷ್ಟ ಜಾತಿ-ಪಂಗಡಗಳ ಪಟ್ಟಿಗೆ ತಮ್ಮ ಜಾತಿಗಳನ್ನು ಸೇರಿಸುವಂತೆ ಒತ್ತಾಯಿಸುವುದು, ರಾಜಕೀಯ ಪ್ರಾತಿನಿಧ್ಯಕ್ಕಾಗಿ ಆಗ್ರಹಪಡಿಸುವುದು - ಇವು ಇಂಥಾ ಜಾತಿಗಳು ಕೈಗೊಳ್ಳುವ ಪ್ರಯತ್ನಗಳಲ್ಲಿ ಕೆಲವು. ಸರ್ಕಾರದ ಗಮನ ಸೆಳೆಯಲು ಇಂಥಾ ಸಮಾವೇಶಗಳು ಅನಿವಾರ್ಯವೆಂಬ ಪರಿಸ್ಥಿತಿಯೂ ಇದೆ. ಈ ನಿಟ್ಟಿನಲ್ಲಿ ಕೇವಲ ಹಿಂದುಳಿದ ವರ್ಗಗಳಷ್ಟೆ ಮುಂದುವರೆಯದೆ, ಇತರ ಮುಂದುವರೆದ ಜಾತಿಗಳೂ ಪ್ರಯತ್ನಿಸುವುದನ್ನು ಕಾಣಬಹುದು. ಮುಖ್ಯವಾಗಿ, ರಾಜಕೀಯ ಪ್ರಾತಿನಿಧ್ಯ ಹಾಗೂ ಚುನಾವಣಾ ಮೀಸಲಾತಿಗಾಗಿ ಈ ವರ್ಗಗಳಿಂದ ಬೇಡಿಕೆ ಮತ್ತು ಒತ್ತಡಗಳು ಹೆಚ್ಚುತ್ತಿರುವುದು ಗಮನಾರ್ಹ. ತಮ್ಮ ತಮ್ಮ ಜಾತಿಗಳ ಜನಸಂಖ್ಯೆಯನ್ನು ಬೇಡಿಕೆಗಳ ಸಹಿತ ಪ್ರಮುಖ ರಾಜಕೀಯ ಪಕ್ಷಗಳ ನಾಯಕರ ಮುಂದೆ ಮಂಡಿಸುವುದು ಸರ್ವೇಸಾಮಾನ್ಯ ಸ್ಥಿತಿಯಾಗಿದೆ. ಅದಕ್ಕಾಗಿ ಜಾತಿ ಸಮಾವೇಶಗಳನ್ನು ಅದ್ದೂರಿಯಿಂದ ಏರ್ಪಡಿಸಿ, ತಮ್ಮ ಜಾತಿಶಕ್ತಿಯನ್ನು ಪ್ರದರ್ಶಿಸುವುದೂ ಸಾಮಾನ್ಯವಾಗಿಬಿಟ್ಟಿದೆ.

ಈಚಿನ ಕೆಲವು ಉದಾಹರಣೆಗಳನ್ನು ಇಲ್ಲಿ ಗಮನಿಸಬಹುದು. ಕರ್ನಾಟಕದಲ್ಲಿ ಸುಮಾರು ೭ ಲಕ್ಷದಷ್ಟು ಕಡಿಮೆ ಜನಸಂಖ್ಯೆಯುಳ್ಳ ವೈಶ್ಯ ಜನಾಂಗ ತನ್ನ ಪ್ರಭಾವ ರಾಜ್ಯದ ೫೦ ಲಕ್ಷಕ್ಕೂ ಹೆಚ್ಚು ಜನರ ಮೇಲಿದೆಯೆಂದು ಹೇಳುತ್ತದೆ. ಸಾಧನೆ ಮತ್ತು ಸೇವಾದೃಷ್ಟಿಯಿಂದ ಎಲ್ಲಾ ಜನಾಂಗಗಳಿಗಿಂತ ಮುಂದೆ ಇರುವುದನ್ನು, ಈ ಜನಾಂಗದವರಿಗೆ ಯಾವ ರಾಜಕೀಯ ಪಕ್ಷದಲ್ಲೂ ಸೂಕ್ತ ಪ್ರಾತಿನಿಧ್ಯ ನೀಡಿಲ್ಲದಿರುವುದನ್ನು, ಕೇಂದ್ರ ಸಚಿವ ಸಂಪುಟದಲ್ಲೂ ಸ್ಥಾನ ಕೊಟ್ಟಿಲ್ಲದಿರುವುದನ್ನು ಜನತೆಯ ಮುಂದಿಡುತ್ತದೆ. ಜನಾಂಗದ ಮುಂದಾಳುಗಳಿಗೆ ರಾಜಕೀಯದಲ್ಲಿ ಸೂಕ್ತ ಪ್ರಾತಿನಿಧ್ಯ ನೀಡಬೇಕೆಂದು ತನ್ನದೇ ಆರ್ಯ ವೈಶ್ಯ ಜನಾಂಗದ ರಾಜ್ಯಮಟ್ಟದ ಪ್ರಥಮ ರಾಜಕೀಯ ಸಮಾವೇಶದಲ್ಲಿ (ಜುಲೈ ೧೯೯೯) ಒತ್ತಾಯಿಸುತ್ತದೆ. ರಾಜ್ಯದಲ್ಲಿ ಜನಸಂಖ್ಯೆ ಆಧಾರದ ಮೂರನೇ ಸ್ಥಾನದಲ್ಲಿರುವ ಕುರುಬ ಜನಾಂಗಕ್ಕೆ ರಾಜಕೀಯದಲ್ಲಿ ಸೂಕ್ತ ಪ್ರಾತಿನಿಧ್ಯ ನೀಡಬೇಕೆಂಬ ಹಾಗೂ ರಾಜಕೀಯ

ಅಧಿಕಾರವಿಲ್ಲದೆ ಯಾವ ಸಮಾಜದ ಒಗ್ಗಟ್ಟಿಗೂ ಬೆಲೆಬರುವುದಿಲ್ಲವೆಂಬ ಕುರುಬ ಜನಾಂಗದ ರಾಜಕೀಯ ಮುಖಂಡರ ಅನಿಸಿಕೆಯೂ ಗಮನಾರ್ಹ (೧೯೯೮, ೧೯೯೯). ರಾಜಕೀಯವಾಗಿ ತಮ್ಮನ್ನು ತೀರಾ ನಿರ್ಲಕ್ಷಿಸಲಾಗಿದೆಯೆಂದು ಕುರುಬ ಜನಾಂಗದ ನಾಯಕರು ಆರೋಪಿಸುತ್ತಲೇ ಬಂದಿದ್ದಾರೆ. ಅರಸು ಜಾತಿಯುವರು ಸಾಮಾಜಿಕವಾಗಿ ಮುಂದುವರೆದಿದ್ದರೂ ಅವರ ಆರ್ಥಿಕ ಸ್ಥಿತಿ ಹೇಳಿಕೊಳ್ಳುವಂಥದಲ್ಲ. ಹಳ್ಳಿಗಳಲ್ಲಿ ಇವರು ಕಡಿಮೆ ಸಂಖ್ಯೆಯಲ್ಲಿರುವುದರಿಂದ ರಕ್ಷಣೆಯ ಸಮಸ್ಯೆಯನ್ನೂ ಎದುರಿಸುವಂತಾಗಿದೆ. ಅಲ್ಲದೆ, ಜಮೀನು ಒತ್ತುವರಿಯಂಥಾ ಸಮಸ್ಯೆಯೂ ಇವರನ್ನು ಕಾಡುತ್ತಲಿದೆ. ಕರ್ನಾಟಕ ಅರಸು ಸಂಘದ ಆಶ್ರಯದಲ್ಲಿ ಏರ್ಪಟ್ಟ ಅರಸು ಜನಾಂಗದವರ ಸಮಾವೇಶದಲ್ಲಿ (ಏಪ್ರಿಲ್ ೧೯೯೯) ಸರ್ಕಾರದಿಂದ ನೆರವನ್ನು ಕೋರುವುದರೊಡನೆ, ಅರಸು ಜನಾಂಗದವರನ್ನು ಹಿಂದುಳಿದ ಜಾತಿಗಳ ಪಟ್ಟಿಗೆ ಸೇರಿಸಬೇಕೆಂಬ ಹಾಗೂ ಸೌಲಭ್ಯಗಳನ್ನು ಒದಗಿಸಬೇಕೆಂಬ ಬೇಡಿಕೆಯನ್ನೂ ಮಂಡಿಸಲಾಗುತ್ತದೆ.

ಹಾವನೂರು-ವೆಂಕಟಸ್ವಾಮಿ-ಚಿನ್ನಪ್ಪರೆಡ್ಡಿ ಆಯೋಗಗಳು ಇತರೆ ನೇಕಾರ ಜನಾಂಗದವರನ್ನು ಹಿಂದುಳಿದ ವರ್ಗದಲ್ಲಿ ಗುರುತಿಸಿರುವುದುಂಟು. ಆದರೆ ಪಟ್ಟುಸಾಲಿ ಜನಾಂಗದ ನೇಕಾರರನ್ನು ಗುರುತಿಸದೇ ಇರುವುದು ಆ ಜನಾಂಗದವರ ಪ್ರತಿಭಟನೆಗೆ ಕಾರಣವಾಗಿದೆ. ಹಿಂದುಳಿದ ವರ್ಗಗಳ ಎಲ್ಲ ಆಯೋಗಗಳಿಗೆ ಮನವಿ ಮಾಡಿದರೂ ಸುಮಾರು ೫ ಲಕ್ಷ ಜನಸಂಖ್ಯೆಯಿರುವ ಪಟ್ಟುಸಾಲಿ ಜನಾಂಗದವರ ಬೇಡಿಕೆಯನ್ನು ಪರಿಗಣಿಸದೆ ಅನ್ಯಾಯ ಎಸಗಲಾಗಿದೆಯೆಂಬ ಆರೋಪ ಈ ಜನಾಂಗದ ಮುಖಂಡರದು. ಇನ್ನು, ಅಖಿಲ ಕರ್ನಾಟಕ ತೊಗಟವೀರರ ಸಂಘದ ಬೇಡಿಕೆಯನ್ನು ಗಮನಿಸುವುದಾದರೆ, ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ತೊಗಟ ಜಾತಿಯ ಪರ್ಯಾಯ ಪದಗಳಾದ ತೊಗಟರು, ತೊಗಟವೀರ, ತೊಗಟಿಗರು, ತೊಗಟವೀರ ಕ್ಷತ್ರಿಯ, ತೊಗಟಿಗ ಮತ್ತು ನೆವ್ವಾರರನ್ನು ಸೇರಿಸಿ ಸರ್ಕಾರ ಆದೇಶ ಹೊರಡಿಸಬೇಕೆಂಬುದೇ ಆಗಿದೆ. ರಾಷ್ಟ್ರೀಯ ಹಿಂದುಳಿದ ವರ್ಗಗಳ ಆಯೋಗಕ್ಕೂ ಈ ಸಂಘ ತನ್ನ ಮನವಿಯನ್ನು ಸಲ್ಲಿಸಿದ್ದು, ತೊಗಟವೀರ ಜನಾಂಗ ಸರ್ಕಾರಿ ಉದ್ಯೋಗದಿಂದ ವಂಚಿತವಾಗಿರುವುದರಿಂದ ಶೀಘ್ರದಲ್ಲಿ ಸರ್ಕಾರ ಆದೇಶ ಹೊರಡಿಸಬೇಕೆಂದು ಒತ್ತಾಯಿಸುತ್ತದೆ. ಹಾಗೆಯೇ, ರಾಜ್ಯದಲ್ಲಿ ೨೫ ಲಕ್ಷದಷ್ಟಿರುವ ಉಪ್ಪಾರ ಜನಾಂಗದವರು ಶಿಕ್ಷಣ ಸಂಘಟನೆಯ ಕೊರತೆಯ ಕಾರಣದಿಂದಾಗಿ ನಿರಂತರ ಶೋಷಣೆಗೆ ಒಳಗಾಗಿರುವರೆಂಬುದನ್ನು, ತಮ್ಮ ಅಭ್ಯುದಯಕ್ಕೆ ತಮ್ಮದೇ ಆದಂಥ ಶೈಕ್ಷಣಿಕ, ಆರ್ಥಿಕ ಸಂಸ್ಥೆಗಳನ್ನು ಬೆಳೆಸಬೇಕೆಂಬುದನ್ನು ರಾಜ್ಯಮಟ್ಟದ ರಾಜಋಷಿ ಭಗೀರಥ ಜಯಂತ್ಯುತ್ಸವದಲ್ಲಿ (ಏಪ್ರಿಲ್ ೧೯೯೯) ವ್ಯಕ್ತಪಡಿಸಲಾಗುತ್ತದೆ. ಮುಖ್ಯವಾಗಿ, ರಾಜಕೀಯವಾಗಿ ಹಿಂದೆ ತಳ್ಳಲ್ಪಟ್ಟ ಈ ಜನಾಂಗಕ್ಕೆ ರಾಜಕೀಯ ಇಚ್ಛಾಶಕ್ತಿಯನ್ನು ಬೆಳೆಸಿಕೊಳ್ಳುವ ಅನಿವಾರ್ಯತೆ ಇರುವುದನ್ನು ಒತ್ತಿ ಹೇಳಲಾಗುತ್ತದೆ. ಇವುಗಳೊಡನೆ ರಜಪೂತ ಜನಾಂಗದ ಆಗ್ರಹವನ್ನು ಇಲ್ಲಿ ಪ್ರಸ್ತಾಪಿಸಬಹುದು. ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಈ ಜನಾಂಗಕ್ಕೆ ಯಾವುದೇ ಸೌಲಭ್ಯಗಳು ದೊರಕಿಲ್ಲವೆನ್ನಲಾಗುತ್ತದೆ. ತಮ್ಮ ಜನಾಂಗ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿದ್ದರೂ ಸರ್ಕಾರದಿಂದ ತೀವ್ರ ನಿರ್ಲಕ್ಷ್ಯಕ್ಕೆ ಒಳಗಾದ ಜನಾಂಗಗಳಲ್ಲಿ ಒಂದಾಗಿದೆಯೆಂಬ ರಾಜ್ಯ ರಜಪೂತ ಮಹಾಸಭಾದ ದೂರಿನಲ್ಲಿ ಸತ್ಯವಿಲ್ಲದಿಲ್ಲ.

ಕರ್ನಾಟಕ ಮಡಿವಾಳ ಸಂಘದ ಬೇಡಿಕೆಯಾದರೂ ಇಂಥದೇ. ರಾಜ್ಯದಲ್ಲಿ ೧೫ ಲಕ್ಷ ಜನಸಂಖ್ಯೆಯ ಅತಿ ಹಿಂದುಳಿದ ಜನಾಂಗವೆನಿಸಿರುವ ಮಡಿವಾಳ ಜನಾಂಗಕ್ಕೆ ರಾಜಕೀಯ ಪ್ರಾತಿನಿಧ್ಯ ನೀಡಬೇಕೆಂಬುದೇ ಆಗಿದೆ. ಇದರಂತೆಯೇ, ಕರ್ನಾಟಕ ರಾಜ್ಯ ಯಾದವ ಸಂಘವೂ ತನ್ನ ಯಾದವ (ಗೊಲ್ಲ) ಜನಾಂಗದ ಸಮಾವೇಶದಲ್ಲಿ (ಏಪ್ರಿಲ್ ೧೯೯೯), ಚುನಾವಣಾ ಮೀಸಲಾತಿ ನೀಡುವುದರೊಡನೆ ಯಾದವ ಜನಾಂಗಕ್ಕೆ ಹಿಂದೆಂದಿಗಿಂತಲೂ ಹೆಚ್ಚಿನ ಆದ್ಯತೆ ನೀಡಲು ಒತ್ತಾಯಿಸುತ್ತದೆ. ಕರ್ನಾಟಕ ತಿಗಳರು ಚುನಾವಣಾ ಮೀಸಲಾತಿಗಾಗಿ ಕರ್ನಾಟಕ ತಿಗಳ ರಾಜಕೀಯ ವೇದಿಕೆಯಿಂದ ಒತ್ತಾಯಿಸಿರುವುದನ್ನು (೧೯೯೯) ಗಮನಿಸಬೇಕು. ಸುಮಾರು ೩೦ ಉಪಪಂಗಡಗಳ ಹೆಸರುಗಳಿಂದ ಕರೆಯಿಸಿಕೊಳ್ಳುತ್ತಿರುವುದು ಸವಿತಾ ಜನಾಂಗ. ರಾಜ್ಯದಲ್ಲಿ ೧೦ ಲಕ್ಷ ಜನ ಸವಿತಾ ಸಮಾಜಕ್ಕೆ ಸೇರಿದವರಾಗಿದ್ದಾರೆ. ಈ ಸಮಾಜದ ಮುಖಂಡರು ಸಲ್ಲಿಸಿರುವ ಬೇಡಿಕೆಗಳೆಂದರೆ (೧೯೯೮), ದಶಕಗಳಿಂದ ಈ ಜನಾಂಗಕ್ಕೆ ದೊರಕದ ಸಾಮಾಜಿಕ ನ್ಯಾಯವನ್ನು ದೊರಕಿಸಿ ಕೊಡುವುದು; ಹಾಗೂ, ಈ ಜನಾಂಗದವರು ರಾಜಕೀಯವಾಗಿ ಮುಂದುವರೆಯಬೇಕಾದರೆ ಅವರಿಗೆ ರಾಜಕೀಯ ಪಕ್ಷಗಳಲ್ಲಿ ಉನ್ನತ ಸ್ಥಾನಗಳನ್ನು ಕೊಡುವುದು. ಈ ಜನಾಂಗ ಸಹಾ ಪ್ರತ್ಯೇಕ ರಾಜಕೀಯ ಮೀಸಲಾತಿಗಾಗಿ ಒತ್ತಾಯಿಸುತ್ತದೆ.

ಕರ್ನಾಟಕದಲ್ಲಿ ಹಿಂದುಳಿದ ವರ್ಗದಲ್ಲಿ ಗುರುತಿಸಲ್ಪಟ್ಟಿದೆ ಖಾಟಿಕ್ ಸಮಾಜ. ದಕ್ಷಿಣಭಾರತದ ಖಾಟಿಕ್ ಸಮಾಜದ ಬೇಡಿಕೆಯೆಂದರೆ (೧೯೯೯), ಈಗಾಗಲೇ ಉತ್ತರಭಾರತದ ಅನೇಕ ರಾಜ್ಯಗಳಲ್ಲಿರುವಂತೆ ಈ ಸಮಾಜವನ್ನು ಹಿಂದುಳಿದ ವರ್ಗಗಳ ಪಟ್ಟಿಯಿಂದ ತೆಗೆದುಹಾಕಬೇಕು. ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಬುಡಕಟ್ಟು ಪಟ್ಟಿಗೆ ಸೇರಿಸಬೇಕು. ಅಖಿಲ ಕರ್ನಾಟಕ ಸಾಧುಚೆಟ್ಟಿ ೨೪ ಮನೆ ತೆಲುಗುಚೆಟ್ಟಿ ಸಂಘ ಆಗ್ರಹಿಸುವಂತೆ, ದೇಶದಲ್ಲಿರುವ ೫೦ ಲಕ್ಷ ಸಮಾಜದವರ ಪೈಕಿ ೫ ಲಕ್ಷ ಮಂದಿ ಕರ್ನಾಟಕದಲ್ಲಿದ್ದಾರೆ. ಈ ಜನಾಂಗ ಅತಿ ಹಿಂದುಳಿದಿದ್ದು, ರಾಜಕೀಯ ಪ್ರಾತಿನಿಧ್ಯವಿಲ್ಲದೆ ಅನ್ಯಾಯಕ್ಕೊಳಗಾಗಿದೆ. ಇದನ್ನು ಸರಿಪಡಿಸಬೇಕಾಗಿದೆ. ಅಲೆಮಾರಿ ಜನಾಂಗವೆಂದೇ ಗುರುತಿಸಲ್ಪಟ್ಟಿರುವ ಸುಡುಗಾಡುಸಿದ್ಧರು ಉತ್ತರ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ವಾಸಿಸುತ್ತಿರುವರು. ಇವರಲ್ಲಿ (ಹಗಲು) ವೇಷಗಾರರು, ರಾಳಕೊಂಡ, ಬಾಳಸಂತೋಷ, ನಿರಂಜನ ಮುಂತಾದ ರೀತಿಗಳಿವೆ. ಅತ್ಯಂತ ಅಭದ್ರಸ್ಥಿತಿಯಲ್ಲಿರುವ ಈ ಜನಾಂಗದವರು ಹೊಟ್ಟೆ ಹೊರೆಯಲು ರಾಮಾಯಣ-ಮಹಾಭಾರತ ಪಾತ್ರಗಳ ವೇಷ ಧರಿಸಿ ಹಳ್ಳಿಗಳಲ್ಲಿ ಭಿಕ್ಷೆ ಬೇಡುತ್ತಾ ತಿರುಗುವಂಥಾ ದಯನೀಯ ಸ್ಥಿತಿ. ಯಾವುದೇ 'ಭೂಮಿ-ಸೀಮೆ' ಇಲ್ಲದವರು. ಪರಿಶಿಷ್ಟ ಜಾತಿ ಪ್ರಮಾಣಪತ್ರವನ್ನು ಸರ್ಕಾರಿ ಅಧಿಕಾರಿಗಳು ಕೊಡುವುದಿಲ್ಲವೆಂಬ ಕೊರಗು ಇವರದು. ಉಚಿತ ಶಿಕ್ಷಣ ಮತ್ತು ಸೌಕರ್ಯಗಳಿಗಾಗಿ ಒತ್ತಾಯಿಸುತ್ತಿರುವರು.

ಆದರೆ ಅಖಿಲ ಕರ್ನಾಟಕ ಗೌಳಿ ಸಮಾಜದ ಸೇವಾ ಸಂಘದವರ ಬೇಡಿಕೆ ಈ ಮೇಲಿನ ಎಲ್ಲಾ ಜಾತಿ ಸಂಘಗಳಿಗಿಂತ ವಿಶಿಷ್ಟವಾದುದು. ಗೌಳಿ ಜನಾಂಗಕ್ಕೆ ಪ್ರತ್ಯೇಕ ನಿಗಮ ಸ್ಥಾಪಿಸುವಂತೆ ಗೌಳಿ ಸಮಾಜ ಸೇವಾ ಸಂಘದ ೫ನೇ ಸಭೆಯಲ್ಲಿ (೧೯೯೮) ಒತ್ತಾಯಿಸಲಾಗಿದೆ. ರಾಜ್ಯದಲ್ಲಿರುವ ಗೌಳಿ ಜನಾಂಗದವರು ಆರ್ಥಿಕವಾಗಿ, ರಾಜಕೀಯವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದಿರುವುದು, ಸಾವಿರಾರು ವರ್ಷಗಳಿಂದ ಪಶುಪಾಲನೆ

ನಡೆಸಿಕೊಂಡು ಬಂದಿರುವುದು ವ್ಯಕ್ತಪಡುತ್ತದೆ. ಗೌಳಿ ಜನಾಂಗದವರಲ್ಲಿ ಆತಂಕ ಮೂಡಿಸಿರುವ ಸಂಗತಿಯೆಂದರೆ, ಇಂದು ಇವರ ಉದ್ಯಮವನ್ನು ಸರ್ಕಾರವಲ್ಲದೆ, ಇತರ ಜನಾಂಗದವರೂ ನಡೆಸುತ್ತಿರುವುದು. ಇದು ಅವರ ಜೀವನಕ್ಕೇ ಸವಾಲಾಗಿರುವಂಥಾದ್ದು. ಇವರನ್ನು ಆತಂಕಕ್ಕೀಡು ಮಾಡಿರುವ ಇನ್ನೊಂದು ಸಂದರ್ಭವೆಂದರೆ ರಾಜ್ಯದಲ್ಲಿ ಭೀಕರ ಬರಗಾಲ ಉಂಟಾಗಿರುವುದು. ಸತತ ಬರ ಪರಿಸ್ಥಿತಿ ಎದುರಾಗಿರುವುದರಿಂದ ಗೌಳಿ ಕುಟುಂಬಗಳು ಬೀದಿ ಪಾಲಾಗುತ್ತಲಿವೆ. ಈ ಜನಾಂಗದ ಇಂಥಾ ಸಮಸ್ಯೆಗಳನ್ನು ಅರಿತು ಗೌಳಿಗರ ಸ್ಥಿತಿಯನ್ನು ಸುಧಾರಿಸಲು ಪ್ರತ್ಯೇಕ ನಿಗಮದ ಸ್ಥಾಪನೆ ಅನಿವಾರ್ಯವೆನ್ನುತ್ತದೆ ಗೌಳಿ ಸಮಾಜ ಸೇವಾ ಸಂಘ. ಇದು ಮಂಡಿಸುವ ಇತರ ಬೇಡಿಕೆಗಳೆಂದರೆ, ಗೌಳಿ ಜನಾಂಗಕ್ಕೆ ರಾಜ್ಯ ಹಿಂದುಳಿದ ವರ್ಗಗಳ ಇಲಾಖೆಯಿಂದ ನೇರ ಸಾಲಸೌಲಭ್ಯ ಸಿಗಬೇಕು; ವಿಧಾನ ಪರಿಷತ್ತಿನ ಗೌಳಿ ಪ್ರತಿನಿಧಿಯನ್ನು ಸರ್ಕಾರ ನಾಮಕರಣ ಮಾಡಬೇಕು; ಹಿಂದುಳಿದ ಪರಿಶಿಷ್ಟ ವರ್ಗ-೧ ರಿಂದ ಬದಲಾಯಿಸಿ ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆ ಮಾಡಬೇಕು; ದನಕರುಗಳ ಸಲುವಾಗಿ ಉಚಿತ ಮೇವು ವಿತರಿಸಬೇಕು; ಈ ಜನಾಂಗದ ವಿದ್ಯಾವಂತ ನಿರುದ್ಯೋಗಿಗಳಿಗೆ ಸರ್ಕಾರದಲ್ಲಿ ಖಾಲಿಯಿರುವ ಸ್ಥಾನಗಳಿಗೆ ನೇಮಿಸಿಕೊಳ್ಳಬೇಕು; ಶಿಕ್ಷಣಕ್ಕಾಗಿ ಆಶ್ರಮಶಾಲೆಗಳನ್ನು ನಡೆಸಬೇಕು; ಪಶುಸಂಗೋಪನಾ ಇಲಾಖೆಯಲ್ಲಿ ಶೇ. ೨೫ ಉದ್ಯೋಗವನ್ನು ಮೀಸಲಿಡಬೇಕು, ಇತ್ಯಾದಿ.

ಈ ಬಗೆಯ ಉದಾಹರಣೆಗಳು ಹಿಂದುಳಿದ ವರ್ಗಗಳು ಯಾವ ನಿಟ್ಟಿನಲ್ಲಿ ಸಾಗಲೆತ್ನಿಸುತ್ತಿವೆ, ಅವುಗಳ ಅವಶ್ಯಕತೆಗಳೇನು ಮುಂತಾದವುಗಳ ಬಗೆಗೆ ತಿಳಿಸಿ ಕೊಡುವಂಥವು. ಕೆಲವು ಜಾತಿಗಳು ಸರ್ಕಾರಿ ಆದೇಶಗಳಲ್ಲಿ ಆಗಿರುವ ಬದಲಾವಣೆಗಳಿಂದ ಸೌಲಭ್ಯ ಪಡೆಯುವಲ್ಲಿ ವಂಚಿತವಾಗಿರುವುದುಂಟು. ಕಮತಿ ಎನ್ನುವ ಜಾತಿ ಕಮತ್ತಿಯಾಗಿರುವುದು, ಸ್ವಕುಳಸಾಲಿ ಎನ್ನುವುದು ಸಕುಳಸಾಲಿಯಾಗಿರುವುದು - ಇಂಥಾ ವ್ಯತ್ಯಾಸಗಳಿಂದ ಸಂಬಂಧಪಟ್ಟ ಜಾತಿಗಳ ವಿದ್ಯಾರ್ಥಿಗಳು ಸರ್ಕಾರದಿಂದ ಸಿಗಬೇಕಾದ ಸೌಲಭ್ಯಗಳನ್ನು ಪಡೆಯುವಲ್ಲಿ ವಂಚಿತರಾಗಿರುವುದನ್ನು ಸರ್ಕಾರದ ಗಮನಕ್ಕೆ ತರುವ ಕೆಲಸ ನಡೆದಿದೆ. ಬಹುಪಾಲು ಹಿಂದುಳಿದ ವರ್ಗಗಳಿಗೆ ಸಂಬಂಧಿಸಿದಂತೆ ಇಂಥಾ ಉದಾಹರಣೆಗಳು ವಿಪುಲವಾಗಿವೆ.

ಗಂಗಾ ಮತಸ್ಥರು ಈಗ ತಮ್ಮನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸುವಂತೆ ಒತ್ತಾಯಿಸುತ್ತಿರುವುದು ಇನ್ನೊಂದು ಬಗೆಯ ಉದಾಹರಣೆಯನ್ನಾಗಿ ನೋಡಬಹುದು. ಕರ್ನಾಟಕ ಗಂಗಾಮತಸ್ಥರ ಸಂಘದ ಬೇಡಿಕೆಯಾದರೂ ರಾಜ್ಯಾದ್ಯಂತ ೩೯ ವಿವಿಧ ಹೆಸರುಗಳಿಂದ ಕರೆಯುವ ಗಂಗಾ ಮತಸ್ಥರನ್ನು ಪರಿಶಿಷ್ಟ ಪಂಗಡಗಳ ವರ್ಗಕ್ಕೆ ಸೇರಿಸಬೇಕು ಹಾಗೂ ಪರಿಶಿಷ್ಟರ ಶೇ. ೩ ರಷ್ಟಿರುವ ಮೀಸಲಾತಿಯನ್ನು ಶೇ. ೮ಕ್ಕೆ ಹೆಚ್ಚಿಸಬೇಕೆಂಬುದು. ಈ ಜಾತಿಯವರ ಆರೋಪವೆಂದರೆ, ಬೆಳಗಾವಿ, ಬಿಜಾಪುರ, ಬಾಗಲಕೋಟೆ, ಧಾರವಾಡ, ಗದಗ, ಹಾವೇರಿ, ಕಾರವಾರ ಮತ್ತು ಹೈದರಾಬಾದ್ ಕರ್ನಾಟಕದ ಬೀದರ್, ಕೊಪ್ಪಳ, ಗುಲ್ಬರ್ಗಾ ಹಾಗೂ ರಾಯಚೂರು ಜಿಲ್ಲೆಗಳಲ್ಲಿರುವ ಗಂಗಾ ಮತಸ್ಥರ ಏಳು ಪಂಗಡಗಳಲ್ಲಿ ಸುಮಾರು ೩೭ ಲಕ್ಷ ಜನರಿದ್ದು, ಈಗಾಗಲೇ ಕೇಂದ್ರ ಸರ್ಕಾರದ ಮೀಸಲಾತಿ ಪಟ್ಟಿಯಲ್ಲಿದ್ದರೂ ಅವರಿಗೆ ಪರಿಶಿಷ್ಟ ಪಂಗಡದ ಪ್ರಮಾಣಪತ್ರ ಹಾಗೂ ಸಿಂಧುತ್ವ ಪ್ರಮಾಣಪತ್ರಗಳನ್ನು ನೀಡದೆ ಅಧಿಕಾರಿಗಳು ತೊಂದರೆ ಕೊಡುತ್ತಿದ್ದಾರೆಂಬುದು. ಇದರಿಂದ

ಸಮಾಜದ ವಿದ್ಯಾರ್ಥಿಗಳಿಗೆ, ಬಡರೈತರಿಗೆ, ಕಾರ್ಮಿಕರಿಗೆ ಹಾಗೂ ನೌಕರಸ್ಥರಿಗೆ ಅನ್ಯಾಯವಾಗುತ್ತಿರುವುದರಿಂದ ಸರ್ಕಾರದ ಶಿಫಾರಸನ್ನು ಕೇಂದ್ರ ಕೂಡಲೇ ಅಂಗೀಕರಿಸ ಬೇಕೆಂಬ ಒತ್ತಾಯವೂ ಇದೆ.

ಪರಿಶಿಷ್ಟ ಜಾತಿಯ ವ್ಯಾಪ್ತಿಗೆ ಸೇರಬಯಸುವ ಇನ್ನೊಂದು ಸಮುದಾಯವೆಂದರೆ ಹೆಳವ ಜನಾಂಗ. ಗ್ರಾಮೀಣ ಪ್ರದೇಶದಲ್ಲಿರುವ ಎಲ್ಲಾ ಕುಟುಂಬಗಳ ಮೂಲಗಳು ಮತ್ತು ವಂಶಾವಳಿಗಳನ್ನು ದಾಖಲೆ ಮಾಡುವ ವೃತ್ತಿಯ ಹೆಳವ ಜನಾಂಗದವರು, ಸಮಾಜದ ಸಹಕಾರ ಮತ್ತು ಸಹಾನುಭೂತಿಯನ್ನು ಅವಲಂಬಿಸಿ ತಮ್ಮ ಅಸ್ತಿತ್ವ ಉಳಿಸಿಕೊಂಡಿರುವುದು ನಿಜ. ಊರಿಂದ ಊರಿಗೆ ತಿರುಗುತ್ತಲೇ ಇರುವ ಹೆಳವರು ಒಂದು ಕಡೆ ನೆಲಸಿ ಜೀವನ ಮಾಡುವಲ್ಲಿ ವಿಫಲರಾಗಿದ್ದರಿಂದ ಅವರು ಸಮಾಜದ ಮುಖ್ಯವಾಹಿನಿಯಿಂದ ಹೊರಗೆ ಉಳಿದಿರುವುದು; ಸಂಖ್ಯಾದೃಷ್ಟಿಯಿಂದ ಅಲ್ಪಸಂಖ್ಯಾತರಾಗಿರುವ ಹೆಳವರ ಉದ್ಧಾರಕ್ಕೆ ಸರ್ಕಾರ ವಿಶೇಷ ಗಮನ ಕೊಡದಿರುವುದು ಇವು ಮುಖ್ಯ ಕೊರತೆಗಳು. ಪರಿಶಿಷ್ಟ ಜಾತಿಯೆಂದು ಪರಿಗಣಿಸಲು ಅನರ್ಹವಾದ ಕೆಲವು ಜಾತಿಗಳನ್ನು ಪರಿಶಿಷ್ಟ ಜಾತಿಗಳ ಪಟ್ಟಿಗೆ ಸೇರಿಸಲಾಗಿರುವುದು; ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕವಾಗಿ ಅತಿ ಹಿಂದುಳಿದಿರುವ ಹೆಳವರನ್ನು ಹೊರಗೆ ಇಟ್ಟಿರುವುದು ಸರಿಯಲ್ಲ; ಹೆಳವರು ಹಲವಾರು ಪರಿಶಿಷ್ಟ ಜಾತಿಗಳ ಜನರಿಗಿಂತ ಹಿಂದೆ ಉಳಿದಿರುವುದರಿಂದ ಅವರನ್ನು ಪರಿಶಿಷ್ಟ ಜಾತಿಗಳ ವ್ಯಾಪ್ತಿಗೆ ಸೇರಿಸುವಂತೆ ಕೇಂದ್ರ ಸರ್ಕಾರಕ್ಕೆ ಶಿಫಾರಸು ಮಾಡುವುದು ಅಗತ್ಯವೆಂಬ ಒತ್ತಾಯವೂ ಇದೆ. ಹೆಳವ ಸಮಾಜದ ಜನರು ತಮ್ಮ ದುಸ್ಥಿತಿಯನ್ನು ಹೇಳಿಕೊಳ್ಳುವುದರ ಬದಲು ಸಂಘಟಿತರಾಗಿ ತಮ್ಮ ಹಕ್ಕನ್ನು ಕೇಳಬೇಕೆಂಬ ನಿಟ್ಟಿನಲ್ಲಿ ಹಿಂದುಳಿದ ವರ್ಗಗಳು ಹಿಡಿಯಬೇಕಾದ ಹಾದಿಯನ್ನು ಕುರಿತ ಸೂಚನೆಯಿದೆ.

ನಾಥಪಂಥಿ ಜೋಗಿ ಜನಾಂಗದವರದೂ ಇದೇ ಬಗೆಯ ಸಮಸ್ಯೆ. ಕರ್ನಾಟಕದಲ್ಲಿ ಸುಮಾರು ೨ ಲಕ್ಷ ಜನಸಂಖ್ಯೆಯಿಂದ ಕೂಡಿದ ಈ ಜನಾಂಗ ಬಹುತೇಕ ಗುಡ್ಡ-ಕಾಡು, ನಗರ-ಪಟ್ಟಣ-ಹಳ್ಳಿಗಳ ಸೆರಗಿನಲ್ಲಿ ಅಲೆಮಾರಿಗಳಂತೆ ಜೀವನ ಸಾಗಿಸುತ್ತಾ ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದ ಬುಡಕಟ್ಟು ಜನಾಂಗವಾಗಿರುವುದು ವಾಸ್ತವ ಸಂಗತಿ. ಈ ಸಮಾಜ ವಿವಿಧ ಗುಂಪುಗಳಾಗಿ ವಿಭಜನೆಗೊಂಡಿದ್ದು, ಸಾಮಾಜಿಕವಾಗಿ, ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ಹಿಂದುಳಿದಿರುವುದನ್ನು ಗುರುತಿಸಲಾಗಿದೆ. ಆದರೆ ಈ ಜನಾಂಗದ ಎಲ್ಲಾ ಗುಂಪುಗಳೂ ಒಂದೇ ಛತ್ರಿಯ ಅಡಿಯಲ್ಲಿ ಬರುವಂತೆ ಮಾಡಲು ಹಾಗೂ ಪ್ರಸ್ತುತ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕವಾಗಿ ಅಭಿವೃದ್ಧಿ ಹೊಂದುವಂತೆ ಮಾಡಲು ಈಚೆಗೆ ಈ ಜನಾಂಗದವರು ಪ್ರಯತ್ನ ನಡೆಸಿದುದು ಗಮನಾರ್ಹ. ಕರ್ನಾಟಕ ನಾಥಪಂಥಿ ಜೋಗಿ ಜನಾಂಗದ ರಾಜ್ಯಮಟ್ಟದ ಮಹಾಸಮ್ಮೇಳನ (ಮೇ ೧೯೯೯) ಇಂಥಾ ಪ್ರಯತ್ನಕ್ಕೆ ನಾಂದಿ ಹಾಡಿದುದನ್ನು ನೋಡಬಹುದು. ಈ ಜನಾಂಗದ ಒಂದೆರಡು ಒಳಪಂಗಡಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳೆಂದು ಗುರುತಿಸಲ್ಪಟ್ಟಿದ್ದರೂ ಇತರ ಗುಂಪುಗಳು ಇದರಿಂದ ವಂಚಿತವಾಗಿರುವುದು ಸ್ಪಷ್ಟ. ನಾಥಪಂಥಿ ಜೋಗಿ ಜನಾಂಗವನ್ನು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡವೆಂದು ಪರಿಗಣಿಸುವಂತೆ ಈ ಜನಾಂಗದ ಮುಖಂಡರು ಒತ್ತಾಯಿಸುತ್ತಿರುವರು. ಇಂಥಾ ಉದಾಹರಣೆಗಳು ಹೇರಳವಾಗಿವೆ.

### ೫.೩. ಹಿಂದುಳಿದ ವರ್ಗಗಳ ಶಾಶ್ವತ ಆಯೋಗ ರಚನೆ

ಹಿಂದಿನ ಆಯೋಗಗಳು ಸಿದ್ಧಪಡಿಸಿದ ಹಿಂದುಳಿದ ವರ್ಗಗಳ ಯಾದಿಗಳಲ್ಲಿ ಕೆಲವು ಲೋಪಗಳು ಘಟಿಸಿದುದು ಸಹಜ. ಅವುಗಳನ್ನು ಸರಿಪಡಿಸುವಂತೆ ಸಂಬಂಧಿಸಿದ ಜಾತಿಗಳವರು ಒತ್ತಾಯಿಸುತ್ತಲೇ ಬಂದುದರ ಜೊತೆಗೆ ಹೊಸ ರಿಯಾಯಿತಿ, ಸೌಲಭ್ಯ, ಮೀಸಲಾತಿಗಳಿಗೂ ಬೇಡಿಕೆ ಸಲ್ಲಿಸುತ್ತಲೇ ಬಂದುದರ ಪರಿಣಾಮವಾಗಿ ಸರ್ಕಾರ ಶಾಶ್ವತ ಆಯೋಗ ರಚಿಸುವತ್ತ ಗಮನ ಹರಿಸಿತು. ಈ ಶಾಶ್ವತ ಆಯೋಗ ಅಸ್ತಿತ್ವಕ್ಕೆ ಬಂದುದು ೧೯೯೫ರಲ್ಲಿ. ಈ ಶಾಶ್ವತ ಆಯೋಗ ಸ್ಥಾಪನೆಯ ಹಿನ್ನೆಲೆಯನ್ನು ಗಮನಿಸುವುದಾದರೆ, ೧೯೮೮ ಆಗಸ್ಟ್‌ನಲ್ಲಿ ಸರ್ಕಾರ ನ್ಯಾಯಮೂರ್ತಿ ಓ. ಚಿನ್ನಪ್ಪರೆಡ್ಡಿಯವರ ಅಧ್ಯಕ್ಷತೆಯಲ್ಲಿ ರಚಿಸಲಾದ ೩ನೇ ಹಿಂದುಳಿದ ವರ್ಗಗಳ ಆಯೋಗ ತನ್ನ ವರದಿ ಸಲ್ಲಿಸಿದ್ದು ೧೯೯೦ ಏಪ್ರಿಲ್‌ನಲ್ಲಿ. ಸರ್ಕಾರ ಈ ವರದಿಯ ಪರಿಶೀಲನೆಯಲ್ಲಿದ್ದಾಗ, ಸರ್ವೋಚ್ಚ ನ್ಯಾಯಾಲಯ ಮಂಡಲ ಮೊಕದ್ದಮೆಯಲ್ಲಿ ೧೯೯೨ ನವೆಂಬರ್‌ನಲ್ಲಿ ಪ್ರತಿಯೊಂದು ರಾಜ್ಯದಲ್ಲೂ ಒಂದು ಶಾಶ್ವತ ಆಯೋಗ ರಚಿಸಬೇಕೆಂದು ತೀರ್ಪು ನೀಡಿತು. ಈ ತೀರ್ಪನ್ನು ಆಧರಿಸಿ ಕರ್ನಾಟಕ ಸರ್ಕಾರ ನ್ಯಾಯಮೂರ್ತಿ ಕುದೂರ್ ನಾರಾಯಣ ರೈ ಅವರ ಅಧ್ಯಕ್ಷತೆಯಲ್ಲಿ, ೧೯೯೪ ಏಪ್ರಿಲ್‌ನಲ್ಲಿ, ಶಾಶ್ವತ ಆಯೋಗವನ್ನು ನೇಮಿಸಿತು. ಆದರೆ ವರದಿ ಸಲ್ಲಿಸುವ ಮುನ್ನವೇ ೧೯೯೫ ಫೆಬ್ರವರಿಯಲ್ಲಿ ಸರ್ಕಾರ ಈ ಆಯೋಗವನ್ನು ರದ್ದುಪಡಿಸಿತು (ಎಚ್. ಕಾಂತರಾಜು : ಪ್ರಜಾವಾಣಿ); ಹಾಗೂ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಕಾಯಿದೆ ೧೯೯೫ರ ಅಡಿಯಲ್ಲಿ ಈಗಿನ ಹಿಂದುಳಿದ ವರ್ಗಗಳ ಶಾಶ್ವತ ಆಯೋಗವನ್ನು ರಚಿಸಿತು. ರಾಜ್ಯದಲ್ಲಿ ವಾಸಿಸುವ ಹಿಂದುಳಿದ ಜಾತಿ, ಉಪಜಾತಿ ಮತ್ತು ವರ್ಗಗಳ ಅಭಿವೃದ್ಧಿಗಾಗಿ ಸರ್ಕಾರ ರಚಿಸಿದ ಆಯೋಗ ಇದು. ಹಿಂದುಳಿದ ವರ್ಗಗಳ ಅಭಿವೃದ್ಧಿಗೆ ಶ್ರಮಿಸುವ ತನ್ನ ಉದ್ದೇಶಕ್ಕನುಗುಣವಾಗಿ ಹಾಗೂ ಶಿಫಾರಸಿಗೆ ಪೂರಕವಾಗಿ ರಾಜ್ಯಾದ್ಯಂತ ಮನೆ ಮನೆ ಸಮೀಕ್ಷೆ ನಡೆಸುವ ಹೊಣೆ ಹೊತ್ತಿದೆ ಈ ಆಯೋಗ.

ಹಿಂದುಳಿದ ವರ್ಗಗಳ ಶಾಶ್ವತ ಆಯೋಗದ ಸ್ವರೂಪ, ಕಾರ್ಯವ್ಯಾಪ್ತಿ, ಇತ್ಯಾದಿಗಳನ್ನು ಇಲ್ಲಿ ವಿವರವಾಗಿ ತಿಳಿಯುವುದು ಅಗತ್ಯ. ಸಂವಿಧಾನಬದ್ಧವಾದ ಮೀಸಲಾತಿ ಹಿಂದುಳಿದ ವರ್ಗಗಳಿಗೆ ದೊರೆತಿದ್ದರೂ, ಹಿಂದುಳಿದಿರುವಿಕೆಯನ್ನು ಗುರುತಿಸುವ ಮತ್ತು ಮೀಸಲಾತಿ ಪ್ರಮಾಣವನ್ನು ನಿಗದಿಪಡಿಸುವ ಗುರುತರ ಹೊಣೆಗಾರಿಕೆಯನ್ನು ನಿರ್ವಹಿಸುವವರು ಯಾರು? ಹಿಂದುಳಿದ ವರ್ಗಗಳ ನ್ಯಾಯಯುತ ಬೇಡಿಕೆ ಈಡೇರುವುದು ಹೇಗೆ? ಈ ಸಂಬಂಧದಲ್ಲಿ ಗಮನಿಸಬೇಕಾದುದು ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು. ೧೯೯೨ ನವೆಂಬರ್‌ನಲ್ಲಿ ಸರ್ವೋಚ್ಚ ನ್ಯಾಯಾಲಯ ಇಂದ್ರ ಸಹಾನಿ v/s ಯೂನಿಯನ್ ಆಫ್ ಇಂಡಿಯಾ (ಮಂಡಲ್ ಮೊಕದ್ದಮೆ) ಎಂಬ ಮೊಕದ್ದಮೆಯಲ್ಲಿ ನೀಡಿದ ತೀರ್ಪಿನಲ್ಲಿ, ಹಿಂದುಳಿದ ವರ್ಗಗಳ ನ್ಯಾಯಯುತ ಸಮಸ್ಯೆಗಳನ್ನು ಪರಿಶೀಲಿಸುವ ಸಲುವಾಗಿ ಪ್ರತಿಯೊಂದು ರಾಜ್ಯದಲ್ಲೂ ಒಂದು ಶಾಶ್ವತ ಆಯೋಗ ರಚಿಸಬೇಕೆಂದು ನಿರ್ದೇಶಿಸಿತು. ಈ ಸೂಚನೆಯಂತೆ ರಾಜ್ಯ ಸರ್ಕಾರವು ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ಕಾಯ್ದೆ ೧೯೯೫ನ್ನು ಮಾಡಿತು. ಇದನ್ನು ೧೯೯೫ರಲ್ಲೆ ಜಾರಿಗೆ ತರುವಲ್ಲಿ ಕೆಲವು ತಾಂತ್ರಿಕ ಅಡಚಣೆಗಳಿಂದ ಸಾಧ್ಯವಾಗಲಿಲ್ಲವಾದರೂ, ಈ ಕಾಯ್ದೆಯನ್ನು ಅಂತಿಮವಾಗಿ ೧೯೯೭

ಡಿಸೆಂಬರ್‌ನಲ್ಲಿ ಕೆಲವು ಬದಲಾವಣೆಗಳೊಡನೆ ಜಾರಿಗೆ ತರಲಾಯಿತು. ಈ ಆಯೋಗ ಹಿಂದಿನ ನಾಲ್ಕು ಆಯೋಗಗಳಿಗಿಂತಲೂ ಭಿನ್ನವಾಗಿರುವುದು ಗಮನಾರ್ಹ. ಮೂರು ಮೂರು ವರ್ಷಗಳ ಕಾಲಾವಧಿಯಲ್ಲಿ ಒಬ್ಬ ಅಧ್ಯಕ್ಷ, ಆರು ಸದಸ್ಯರು ಆಯೋಗದ ಕೆಲಸ - ಕಾರ್ಯಗಳನ್ನು ನಿರ್ವಹಿಸುತ್ತಾರೆ. ಇದಕ್ಕಿರುವ ಅಧಿಕಾರ ಸಿವಿಲ್ ನ್ಯಾಯಾಲಯ ಮಟ್ಟದ್ದು. ಈ ಶಾಶ್ವತ ಆಯೋಗದ ಕಾರ್ಯಗಳಿವು : ೧. ಹಿಂದುಳಿದ ವರ್ಗದ ಯಾದಿಗೆ ಸೇರಿಸಲು ಆಯೋಗಕ್ಕೆ ಬರುವ ಬೇಡಿಕೆಗಳನ್ನು ಪರಿಶೀಲಿಸುವುದು ಹಾಗೂ ಹಿಂದುಳಿದ ವರ್ಗಗಳ ಯಾದಿಗೆ ಹೆಚ್ಚುವರಿಯಾಗಿ ಸೇರ್ಪಡೆಯಾಗಿರುವ ಅಥವಾ ಇಳುವರಿಯಾಗಿ ಸೇರ್ಪಡೆಯಾಗಿರುವ ಫಿರ್ಯಾದಿಗಳನ್ನು ಕೇಳಿ ಸರ್ಕಾರಕ್ಕೆ ಸೂಕ್ತ ಸಲಹೆಗಳನ್ನು ನೀಡುವುದು; ೨. ಹಿಂದುಳಿದ ವರ್ಗಗಳ ಸಾಮಾಜಿಕ ಹಾಗೂ ವಿದ್ಯಾಭ್ಯಾಸದ ಸ್ಥಿತಿಗತಿಗಳ ಬಗೆಗೆ ಸಮೀಕ್ಷೆ ಕೈಗೊಳ್ಳುವುದು; ೩. ಹಿಂದುಳಿದ ವರ್ಗಗಳಿಗಾಗಿಯೇ ಯೋಜಿಸಲಾಗಿರುವ ವಿವಿಧ ಕಲ್ಯಾಣ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದನ್ನು ಕುರಿತು ಮೇಲ್ವಿಚಾರಣೆ ನಡೆಸುವುದು (ಎಚ್. ಕಾಂತರಾಜು).

ಹಿಂದುಳಿದ ವರ್ಗಗಳ ಆಯೋಗಗಳು ಸಿದ್ಧಪಡಿಸಿದ ಹಿಂದುಳಿದ ವರ್ಗಗಳ ಪಟ್ಟಿಯನ್ನು ಕಾಲಕಾಲಕ್ಕೆ ಪರಿಷ್ಕರಿಸುವ ಬಗೆಗೆ ಸರ್ಕಾರ ಕ್ರಮ ಕೈಗೊಳ್ಳುತ್ತದೆ. ಈ ಸಂಬಂಧದಲ್ಲಿ, ಈ ಮೇಲಿನ ೧೯೯೫ರ ಕಾಯ್ದೆ ಪ್ರಕರಣ ೧೧ರ ಅಡಿಯಲ್ಲಿ, ಈ ಕಾಯ್ದೆ ಕಾರ್ಯರೂಪಕ್ಕೆ ಬಂದಂದಿನಿಂದ ೧೦ ವರ್ಷಗಳಿಗೊಮ್ಮೆ ಹಿಂದುಳಿದ ವರ್ಗಗಳ ಪಟ್ಟಿಯನ್ನು ಪರಿಷ್ಕರಿಸಲು ಸರ್ಕಾರಕ್ಕೆ ಅಧಿಕಾರವಿರುತ್ತದೆ. ಇಂಥಾ ಪರಿಷ್ಕರಣೆಯ ಉದ್ದೇಶವಾದರೂ ಯಾವುದೇ ಹಿಂದುಳಿದ ವರ್ಗವು ಹಿಂದುಳಿದ ವರ್ಗ ಆಗಿರದಿದ್ದಲ್ಲಿ ಅಥವಾ ಆಗಬೇಕಾದಲ್ಲಿ ಅಂಥಾ ವರ್ಗಗಳನ್ನು ಕ್ರಮವಾಗಿ ಪಟ್ಟಿಯಿಂದ ತೆಗೆದು ಹಾಕುವುದು ಅಥವಾ ಸೇರಿಸುವುದೇ ಆಗಿರುತ್ತದೆ. ಈ ಕಾರ್ಯದಲ್ಲಿ ಸರ್ಕಾರಕ್ಕೆ ಸಲಹೆ ಕೊಡುವ ಹೊಣೆಗಾರಿಕೆ ಈ ಶಾಶ್ವತ ಆಯೋಗದ್ದು. ಆಯೋಗದ ವರದಿ ಅಥವಾ ಸಲಹೆ ಸಾಮಾನ್ಯವಾಗಿ ಸರ್ಕಾರಕ್ಕೆ ಬದ್ಧವಾಗಿರುತ್ತದೆ. ಅಧಿನಿಯಮದ ಪ್ರಕರಣ ೯(೨)ರ ಪ್ರಕಾರ, ಪರಿಶಿಷ್ಟ ಜಾತಿ - ಪಂಗಡಗಳವರ ಸಮಸ್ಯೆಗಳು ಈ ಆಯೋಗದ ಕಾರ್ಯವ್ಯಾಪ್ತಿಯಲ್ಲಿ ಬರುವುದಿಲ್ಲ. ಜಿಲ್ಲಾ ಮಟ್ಟದಲ್ಲಿ ಸಾರ್ವಜನಿಕ ಸಭೆಗಳನ್ನು ನಡೆಸಿ ಹಿಂದುಳಿದ ವರ್ಗಗಳ ಸಮಸ್ಯೆಗಳ ಬಗೆಗೆ ಮಾಹಿತಿ ಪಡೆಯುವುದು, ಕುಂದುಕೊರತೆಗಳನ್ನು ವಿಚಾರಿಸುವುದು ಇದರ ಕೆಲಸ. ಮುಖ್ಯವಾಗಿ, ರಾಜ್ಯದ ಎಲ್ಲ ಕುಟುಂಬಗಳ ಜಾತಿ, ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿ-ಗತಿಗಳ ಸಮೀಕ್ಷೆ ನಡೆಸುತ್ತದೆ. ಜನಗಣತಿಯಂತೆಯೇ ಈ ಸಮೀಕ್ಷೆ ಕೂಡಾ ನಡೆಯಬೇಕಾಗುತ್ತದೆ.

ಈ ಉದ್ದೇಶಕ್ಕನುಸಾರವಾಗಿ, ಆಯೋಗವು ಜಿಲ್ಲೆಗಳಲ್ಲಿ 'ಬಹಿರಂಗ ವಿಚಾರಣೆ' ನಡೆಸುತ್ತಾ ಹೋಗುತ್ತದೆ. ಪೂರ್ವಭಾವಿಯಾಗಿ ಮಾಡಿಕೊಂಡ ಆಯೋಗದ ಮನವಿಯನ್ನು ಅನುಲಕ್ಷಿಸಿ ಹಿಂದುಳಿದ ವರ್ಗಗಳು ಸಲ್ಲಿಸುವ ಮನವಿ, ಸಲಹೆ, ದೂರು ಇತ್ಯಾದಿಗಳನ್ನು ಇಂಥಾ ಸಂದರ್ಭದಲ್ಲಿ ಸ್ವೀಕರಿಸುತ್ತದೆ. ಹಿಂದುಳಿದ ವರ್ಗಗಳ ಯಾದಿಗೆ ಅರ್ಹ ಜಾತಿಗಳ ಸೇರ್ಪಡೆಯೇ ಬಹುಮುಖ್ಯವಾದ ಅಂಶ. ಈ ನಿಟ್ಟಿನಲ್ಲಿ ಜಾತಿ, ಉಪಜಾತಿ, ಪಂಗಡ, ಉಪ ಪಂಗಡ, ಬುಡಕಟ್ಟು ಹಾಗೂ ಸಮೂಹಗಳ ಪರವಾಗಿ ಸಂಬಂಧಿಸಿದ ಸಂಘ-ಸಂಸ್ಥೆಗಳು ಮತ್ತು ಸಾರ್ವಜನಿಕರು ಮನವಿಗಳನ್ನು ಸಲ್ಲಿಸುವುದನ್ನು ನೋಡಬಹುದು.

೧೯೯೮ಲ ಅಕ್ಟೋಬರ್ ವೇಳೆಗೆ, ಸುಮಾರು ೧೭೨ ಜಾತಿಗಳಿಗೆ ಸೇರಿದವರಿಂದ ಹಿಂದುಳಿದ ವರ್ಗಗಳಿಗೆ ಸೇರಿಸುವಂತೆ ಕೋರಲಾದ ಮನವಿಗಳು ಆಯೋಗದ ಮುಂದಿದ್ದವು. ಅಲ್ಲದೆ, ಗುಂಪುಗಳನ್ನು ಬದಲಿಸುವಂತೆ ಕೋರಿ ಸುಮಾರು ೬೦ ಅರ್ಜಿಗಳು ಬಂದಿದ್ದವು. ಮೀಸಲಾತಿ ಜಾರಿಗೊಳಿಸುವಲ್ಲಿ ಆಗಿರುವ ಅನ್ಯಾಯದ ಬಗೆಗೆ ಕೆಲವು ಮುಸ್ಲಿಂ ಉಪಜಾತಿಗಳ ಪ್ರತಿನಿಧಿಗಳು ತಮ್ಮನ್ನು ಮುಖ್ಯ ಗುಂಪಿನಿಂದ ಪ್ರತ್ಯೇಕಿಸುವಂತೆ ವಿನಂತಿಸಿ ಸಲ್ಲಿಸಲಾದ ಅರ್ಜಿಗಳೂ ಇದ್ದವು. ೧೯೯೯ರಲ್ಲಿ ಈ ಅರ್ಜಿಗಳ ಸಂಖ್ಯೆ ಇಮ್ಮಡಿಸಿದೆ; ಆಯೋಗವೂ ಹೆಚ್ಚು ಮುತುವರ್ಜಿ ವಹಿಸಿ ಕೆಲಸ ಮಾಡತೊಡಗಿದೆ.

ಹೀಗೆ ಸ್ವೀಕರಿಸಿದ ಜಾತಿ-ವರ್ಗಗಳ ಪೂರ್ಣ ಮಾಹಿತಿ ಹಾಗೂ ಪೂರಕ ಸಾಕ್ಷಿ-ಆಧಾರಗಳ ಸಹಿತವಿರುವ ಮನವಿಗಳನ್ನು ಬಹಿರಂಗ ವಿಚಾರಣೆ ಸಂದರ್ಭದಲ್ಲಿ ಆಯೋಗ ಪರಿಶೀಲನೆ ನಡೆಸುವುದು. ಹಿಂದುಳಿದ ಜನಾಂಗದವರು ಹೆಚ್ಚಾಗಿ ವಾಸಿಸುವ ಪ್ರದೇಶ ಹಾಗೂ ವಿದ್ಯಾರ್ಥಿನಿಲಯಗಳಿಗೆ ಭೇಟಿ ನೀಡಿ ಅಲ್ಲಿಯ ಸ್ಥಿತಿಗತಿಗಳನ್ನು ಖುದ್ದಾಗಿ ಪರಿಶೀಲಿಸುವುದು ಮುಖ್ಯವಾದುದು. ಆಯೋಗವು ಈಗಾಗಲೇ ವಿಚಾರಣೆ ನಡೆಸಿದ ಕೆಲವು ಜಿಲ್ಲೆಗಳಲ್ಲಿ ಗಮನಿಸಿದಂತೆ, ಅಲ್ಲಿ ಹಿಂದುಳಿದ ವರ್ಗಗಳಿಗೆ ಸೇರಿದವರ ಸ್ಥಿತಿ-ಗತಿಗಳು ತೀರಾ ಗಂಭೀರವಾಗಿರುವುದು ಗಮನಾರ್ಹ. ಜಿಲ್ಲೆಗಳಲ್ಲಿ ಹಿಂದುಳಿದ ವರ್ಗಗಳ ಶಾಶ್ವತ ಆಯೋಗದ ವಿಚಾರಣೆ ಇನ್ನೂ ಜಾರಿಯಲ್ಲಿದೆ; ಈ ಸಮೀಕ್ಷೆ ಪೂರ್ಣಗೊಂಡ ತರುವಾಯ ಆಯೋಗವು ಈ ಸಂಬಂಧದಲ್ಲಿ ಸರ್ಕಾರ ಏನು ಕ್ರಮ ಕೈಗೊಳ್ಳಬೇಕೆಂಬುದರ ಬಗೆಗೆ ಸಲಹೆ ಕೊಡುತ್ತದೆ.

ರಾಷ್ಟ್ರೀಯ ಹಿಂದುಳಿದ ಆಯೋಗದ ಈಚಿನ ಕಾರ್ಯಕಲಾಪ ಕುರಿತು ಒಂದು ನೋಟ ಹರಿಸುವುದು ಅಗತ್ಯ. ೧೯೯೯ರಲ್ಲಿ ಈ ಆಯೋಗ ಶಿಫಾರಸು ಮಾಡಿದ ೨೭೧ ಜಾತಿಗಳನ್ನು ಕೇಂದ್ರ ಸರ್ಕಾರ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿಸಲು ಒಪ್ಪಿಗೆ ನೀಡಿರುವುದು ಗಮನಾರ್ಹ. ಹಿಂದಿನ ಆಯೋಗ ಶಿಫಾರಸು ಮಾಡಿದ ೩೨ ಜಾತಿಗಳೂ ಸೇರಿದಂತೆ ಉಳಿದಿರುವ ಒಟ್ಟು ೧೦೮ ಜಾತಿಗಳನ್ನು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿಸಬೇಕೆಂದು ಆಯೋಗ ಸರ್ಕಾರಕ್ಕೆ ವಿನಂತಿಸಿಕೊಂಡಿತು. ಅನುಮತಿಗಾಗಿ ಉಳಿದುಕೊಂಡಿರುವ ಎಲ್ಲಾ ಪ್ರಕರಣಗಳನ್ನು ಒಪ್ಪಿಕೊಳ್ಳಬೇಕೆಂದು ಆಯೋಗವು ಸರ್ಕಾರಕ್ಕೆ ಮನವಿ ಮಾಡಿಕೊಂಡ ಹಿನ್ನೆಲೆಯಲ್ಲಿ, ಆಯೋಗ ಶಿಫಾರಸು ಮಾಡಿದ ಎಲ್ಲಾ ೩೯೨ ಜಾತಿಗಳಲ್ಲಿ ೧೧ನ್ನು ಬಿಟ್ಟು ಉಳಿದವುಗಳಿಗೆ ಒಪ್ಪಿಗೆ ದೊರೆತಂತಾಗುತ್ತದೆ. ಹಿಂದುಳಿದ ವರ್ಗಗಳ ಪಟ್ಟಿಯನ್ನು ಪರಿಷ್ಕರಿಸುವ ಅತಿ ಸೂಕ್ಷ್ಮವಾದ ಕೆಲಸವನ್ನು ಸುಪ್ರಿಂಕೋರ್ಟ್‌ನ ಆದೇಶದ ಮೇರೆಗೆ ೧೦ ವರ್ಷಗಳ ನಂತರ ಅಂದರೆ ೨೦೦೩ಕ್ಕೆ ಪೂರೈಸಿಕೊಡಬೇಕಾಗುತ್ತದೆ. ಹಿಂದುಳಿದಿರುವಿಕೆಯ ಸಮಸ್ಯೆಯನ್ನು ಕರಾರುವಾಕ್ಕಾಗಿ ರೂಪಿಸುವುದಕ್ಕಾಗಿ ಉಸ್ತುವಾರಿ ವ್ಯವಸ್ಥೆಯೊಂದನ್ನು ರೂಪಿಸಬೇಕು; ಅದು ಯೋಜನೆಗಳನ್ನು ರೂಪಿಸಿ ಅನುಷ್ಠಾನ ಗೊಳಿಸುವುದರ ಜತೆಗೆ ಅದರ ಉಸ್ತುವಾರಿ ನೋಡಿಕೊಳ್ಳಬೇಕಾಗುತ್ತದೆ; ಇದಕ್ಕಾಗಿ ರಾಷ್ಟ್ರೀಯ ಹಿಂದುಳಿದ ವರ್ಗಗಳ ಆಯೋಗಕ್ಕೆ ತಿದ್ದುಪಡಿ ತರಲು ಸುಗ್ರೀವಾಜ್ಞೆ ತರಬೇಕೆಂದು ಆಯೋಗವು ಕೇಂದ್ರ ಸರ್ಕಾರಕ್ಕೆ ಮನವಿ ಮಾಡಿಕೊಂಡಿದೆ.

## ೫.೪. ಒಡೆದು ಹೋಳಾಗುತ್ತಿರುವ ದಲಿತ ವರ್ಗಗಳು

ಹಿಂದುಳಿದ ವರ್ಗಗಳ ಪುನರ್ ಸಂಘಟನೆ, ಅಭಿವೃದ್ಧಿ ಕಾರ್ಯಕ್ರಮಗಳ ಜಾರಿ, ಇತ್ಯಾದಿಗಳನ್ನು ಒಂದೆಡೆ ಕಾಣುತ್ತಿದ್ದರೆ, ಇನ್ನೊಂದೆಡೆ ದಲಿತ ವರ್ಗಗಳು ಒಡೆದು ಹೋಳಾಗಿ ಹಿಂದಿನಂತೆ ಮತ್ತೆ ಸಮಾನತೆಗಾಗಿ, ಸಂವಿಧಾನಬದ್ಧ ಮೀಸಲಾತಿ ಸೌಲಭ್ಯಗಳಿಗಾಗಿ, ರಾಜಕೀಯ ಸ್ಥಾನ - ಮಾನಗಳಿಗಾಗಿ ಹೋರಾಡಲಾರಂಭಿಸಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಇದು ಹೀಗೇಕೆ? ಪರಿಶಿಷ್ಟ ಜಾತಿಗಳು ಎಡಗೈ - ಬಲಗೈಗಳೆಂಬ ತೀರಾ ಹಳೆಯ ವ್ಯಾಧಿಯಿಂದ ಇನ್ನಷ್ಟು ನರಳತೊಡಗಿವೆ; ಒಳಜಾತಿಗಳ ಭೇದದಿಂದ ಅಸಂಘಟನೆಯ ಅಪಾಯದತ್ತ ಸಾಗತೊಡಗಿವೆ. ಪರಿಶಿಷ್ಟ ಪಂಗಡಗಳ, ಬುಡಕಟ್ಟುಗಳ ಸಮಸ್ಯೆ ಇನ್ನೊಂದು ತೆರನಾದುದು.

ವಾಲ್ಮೀಕಿ ನಾಯಕ ಜನಾಂಗವನ್ನು ಉದಾಹರಣೆಯಾಗಿ ಇಲ್ಲಿ ಪ್ರತ್ಯೇಕವಾಗಿ ಗಮನಿಸಬಹುದು. ರಾಜ್ಯದಲ್ಲಿರುವ ಈ ಜನಾಂಗದ ಈಗಿನ ಜನಸಂಖ್ಯೆ ಸುಮಾರು ೬೦ ಲಕ್ಷ. ಈ ಜನಾಂಗದ ಇತರ ಉಪಪಂಗಡಗಳನ್ನು ಗಣನೆಗೆ ತೆಗೆದುಕೊಂಡರೆ ಈ ಸಂಖ್ಯೆ ೮೦ ಲಕ್ಷ ಮೀರುವಂತೆ ತೋರುತ್ತದೆ. ಆದರೆ ೧೯೯೧ ರ ಜನಗಣತಿ ವರದಿ ಪ್ರಕಾರ ಈ ಜನಾಂಗದ ಜನಸಂಖ್ಯೆ ೨೦ ಲಕ್ಷದಷ್ಟು ಮಾತ್ರ. ಆದರೆ ಈ ಪರಿಶಿಷ್ಟ ಪಂಗಡದ ಮುಖಂಡರು ಇದನ್ನು ಒಪ್ಪುವುದಿಲ್ಲ. ಸ್ವಾತಂತ್ರ್ಯ ಪೂರ್ವದಲ್ಲಿ ಈ ಜನಾಂಗದ ಸ್ಥಿತಿ-ಗತಿಗಳು ಏನೇ ಇರಲಿ, ಸ್ವಾತಂತ್ರ್ಯಾನಂತರದಲ್ಲಿ ಈ ಜನಾಂಗದವರಲ್ಲಿ ಸಾಕಷ್ಟು ಸುಧಾರಣೆ ಆದುದಂತೂ ನಿಜ. ಇಷ್ಟಾದರೂ ಗ್ರಾಮಗಳಲ್ಲಿ ವಾಸಿಸುವ ಈ ಜನಾಂಗದವರ ಪರಿಸ್ಥಿತಿ ನಿರೀಕ್ಷಿಸಿದ ಮಟ್ಟದಲ್ಲಿ ಸುಧಾರಣೆಗೊಂಡಿಲ್ಲ. ಶಿಕ್ಷಣದ ಬೆಂಬಲವಿಲ್ಲದೆ, ಅರಿವು-ಮಾರ್ಗದರ್ಶನಗಳ ನೆರವಿಲ್ಲದೆ ಬವಣೆ ಪಡುತ್ತಿರುವರು. ಸಂವಿಧಾನಬದ್ಧ ಮೀಸಲಾತಿ ದೊರೆತಿದ್ದರೂ ಅದರ ಪ್ರಯೋಜನ ಪಡೆಯಲು ಜನಜಾಗೃತಿ ಮಾಡುವಂಥಾ ನಾಯಕತ್ವದ ಕೊರತೆಯಿಂದಾಗಿ, ಸಂಘಟನೆಯ ಅಭಾವದಿಂದಾಗಿ ಹಿಂದುಳಿದಿರುವುದು ಸ್ಪಷ್ಟ. ವಾಲ್ಮೀಕಿ ಜಯಂತಿ, ಸಭೆ-ಸಮಾರಂಭಗಳಷ್ಟೆ ಸಂಘಟನೆಯಲ್ಲಿ ಪ್ರಯೋಜನಕಾರಿಯಲ್ಲ; ಭಾಷಣಗಳಿಂದ ಕೇವಲ ಕ್ಷಣಿಕ ಆವೇಶಕ್ಕೊಳಗಾಗುವುದು ಸಲ್ಲ; ರಚನಾತ್ಮಕ ದೃಷ್ಟಿಕೋನ, ಪ್ರಯತ್ನಗಳು ಅಗತ್ಯವೆಂಬ ಭಾವನೆಯೂ ವ್ಯಕ್ತಪಡುವುದುಂಟು. ನಾಯಕ, ನಾಯ್ಕ, ವಾಲ್ಮೀಕಿ, ಬೇಡ, ಬೇಡರ ಇವರನ್ನು ಕೇಂದ್ರ ಸರ್ಕಾರ ೧೯೭೬ರಲ್ಲಿ ಪರಿಶಿಷ್ಟ ಪಂಗಡಗಳೆಂದು ಘೋಷಿಸಿದ್ದರೂ ತಳವಾರ, ಪರಿವಾರ ಇತ್ಯಾದಿ ಪರ್ಯಾಯ ಹೆಸರುಗಳುಳ್ಳ ಸುಮಾರು ೧೮ ಉಪಪಂಗಡಗಳವರು ಈ ಸೌಲಭ್ಯದಿಂದ ವಂಚಿತರಾಗಿರುವುದನ್ನು ಮನಗಾಣಲಾಗಿದೆ. ಪ್ರಾದೇಶಿಕವಾಗಿ ಜನಾಂಗದಲ್ಲಿ ಬೇರೂರಿರುವ ತಾರತಮ್ಯವನ್ನೂ ಗುರುತಿಸಲಾಗಿದೆ. ಈ ಜನಾಂಗದವರಿಗಾಗಿ ಪ್ರತ್ಯೇಕವಾದ ಯಾವುದೇ ಸಂಸ್ಥೆ, ಸಂಶೋಧನ ಆಯೋಗ ಅಥವಾ ಯಾವುದೇ ಅಭಿವೃದ್ಧಿ ನಿಗಮಗಳು ಇಲ್ಲ. ರಾಜಕೀಯ ಪ್ರಾತಿನಿಧ್ಯಕ್ಕಾಗಿ ಈ ಜನಾಂಗದ ಮುಖಂಡರ ಪ್ರಯತ್ನ ನಿರಂತರವಾಗಿ ಸಾಗಿರುವುದುಂಟು. ಯಾವ ರಾಜಕೀಯ ಪಕ್ಷ ತಮ್ಮ ಜನಾಂಗಕ್ಕೆ ಗರಿಷ್ಠ ಪ್ರಾತಿನಿಧ್ಯ ನೀಡುತ್ತದೆಯೋ ಆ ಪಕ್ಷವನ್ನು ಬೆಂಬಲಿಸುವಂತೆ ಕರ್ನಾಟಕ ರಾಜ್ಯ ವಾಲ್ಮೀಕಿ ನಾಯಕ ಮಹಾಸಂಘ ಕರೆಕೊಡುತ್ತದೆ. ಮುಖ್ಯವಾಗಿ, ಈವರೆಗಿನ ಶೇ. ೩ರ ಮೀಸಲಾತಿ ಬದಲು ಉತ್ತರಭಾರತದಲ್ಲಿರುವಂತೆ

ಶೇ. ೭.೫ರ ಮೀಸಲಾತಿಗಾಗಿ ಈ ಜನಾಂಗ ಆಗ್ರಹಿಸುತ್ತದೆ. ಪರಿಶಿಷ್ಟ ಜಾತಿ-ಪಂಗಡದ ಅಭ್ಯರ್ಥಿಗಳಿಗೆ ವೈದ್ಯಕೀಯ ಶಿಕ್ಷಣಕ್ಕೆ ಪ್ರವೇಶ ನೀಡುವಾಗ ಕುಟುಂಬದ ಆದಾಯ ಮಿತಿ ಪರಿಗಣಿಸಬಾರದು; ಸರ್ಕಾರಿ ಹುದ್ದೆಗಳಲ್ಲಿ ಸಿಗಬೇಕಾದ ಬ್ಯಾಕ್‌ಲಾಗ್ ಹುದ್ದೆಗಳನ್ನು ಕೂಡಲೇ ಭರ್ತಿ ಮಾಡಬೇಕು ಎಂಬುದೂ ಅದರ ಬೇಡಿಕೆ. ಈ ಜನಾಂಗಕ್ಕೆ ಸಂಬಂಧಿಸಿದ ಸಂಘವೊಂದು ತನ್ನ ಕುಲಬಾಂಧವರಿಗಾಗಿ ಪ್ರಕಟಿಸಿದ ಮನವಿಪತ್ರದಲ್ಲಿ (೧೯೮೨) ಈ ಮುಂದಿನ ಸಾಲನ್ನೂ ಸೇರಿಸಿದೆ : "ಸಹಸ್ರಾರು ವರುಷಗಳಿಂದಲೂ ಅತ್ಯಂತ ಉತ್ಸಾಹಿ ಜನಾಂಗವೆಂದು ಪ್ರಖ್ಯಾತವಾಗಿದ್ದು ವೀರಜೀವನ ನಡೆಯಿಸಿ 'ಬಯಲಹುಲಿ'ಗಳಾಗಿ ಚರಿತ್ರೆಯಲ್ಲಿ ಹೆಸರು ಮಾಡಿರುವ ನಮ್ಮ ಪೂರ್ವ ಪಿತೃಗಳ ಧವಳಕೀರ್ತಿಗೆ ಕಳಂಕ ತರಬೇಡಿರೆಂದು ನಮ್ಮ ಕಳಕಳಿಯ ಪ್ರಾರ್ಥನೆ."

ಇತರ ಪರಿಶಿಷ್ಟ ಪಂಗಡಗಳ ಬೇಡಿಕೆಗಳೂ ಇದಕ್ಕಿಂತ ತೀರಾ ಭಿನ್ನವಾಗಿಯೇನೂ ಇಲ್ಲ. ಹಿಂದುಳಿದ ವರ್ಗಗಳ ಮತ್ತು ಪರಿಶಿಷ್ಟ ಪಂಗಡಗಳ ಸಮಸ್ಯೆಗಳು, ಬೇಡಿಕೆಗಳು ಈ ವಿಧದವು ಆಗಿದ್ದರೆ, ಶೇ. ೧೫ರ ಮೀಸಲಾತಿ ಹೊಂದಿದ ಪರಿಶಿಷ್ಟ ಜಾತಿಗಳು ಎದುರಿಸುತ್ತಿರುವ ಸಮಸ್ಯೆಗಳು ಬೇರೆ ವಿಧದವು. ಕೇಂದ್ರ ಸರ್ಕಾರ ನಿಗದಿಪಡಿಸಿದ ಮೀಸಲಾತಿ ಕಕ್ಷೆಯಲ್ಲಿದ್ದೂ, ಕೆಲವು ವಿಶೇಷ ಸೌಲಭ್ಯ - ರಿಯಾಯಿತಿಗಳನ್ನು ಹೊಂದಿದ್ದೂ ಈ ಜಾತಿಗಳು ತೀರಾ ನಿಕೃಷ್ಟ ಸ್ಥಿತಿಯಲ್ಲಿರುವುದನ್ನು ನೋಡಬಹುದು. ಕೆಲವು ಗಂಭೀರ ಕಾರಣಗಳಿಗಾಗಿ ಅವುಗಳ ಏಳಿಗೆ - ಅಭಿವೃದ್ಧಿಗಳು ಈ ದೇಶದಲ್ಲಿ ಇನ್ನೂ ಸರಿಯಾಗಿ ಆಗಿಲ್ಲವೆನ್ನುವುದಕ್ಕೆ ಆಧಾರಗಳಿವೆ. ಅವುಗಳಲ್ಲಿ ಕೆಲವನ್ನು ಈಗಾಗಲೇ ಇಲ್ಲಿ ವ್ಯಕ್ತಪಡಿಸಿಯೂ ಆಗಿದೆ. ಡಾ. ರಾಮಮನೋಹರ ಲೋಹಿಯಾ ಉದ್ಗರಿಸಿದ 'ಆರ್ಥಿಕ ಅಸಮಾನತೆ, ಜಾತಿ ಅಸಮಾನತೆ ಇವೆರಡೂ ಜೋಡಿ ಭೂತಗಳಾಗಿವೆ' ಎಂಬುದಕ್ಕೆ, ಶೈಕ್ಷಣಿಕ ಅಸಮಾನತೆಯನ್ನೂ ಸೇರಿಸಿ ಅದನ್ನು ನಾವು ಪೂರ್ಣಗೊಳಿಸಬಹುದು.

ಕರ್ನಾಟಕದ ಪರಿಶಿಷ್ಟ ಜಾತಿ-ಪಂಗಡಗಳವರ ದುಸ್ಥಿತಿಗೆ ಸಾಮಾಜಿಕ ಕಾರಣಗಳನ್ನಷ್ಟೆ ತೋರಿಸುವಂತಿಲ್ಲ. ಆರ್ಥಿಕ, ಶೈಕ್ಷಣಿಕ ಹಿಂದುಳಿದಿರುವಿಕೆಯೂ ಅವರನ್ನು ಇನ್ನಷ್ಟು ಕೆಳಕ್ಕೆ ತಳ್ಳಿದೆಯೆಂಬುದು ಸ್ಪಷ್ಟ. ಶಿಕ್ಷಣರಂಗದಲ್ಲಿ ಯಾವುದೇ ಗಟ್ಟಿ ನೆಲೆಯನ್ನು ಈ ಜಾತಿಗಳವರು ಇನ್ನೂ ತಲುಪಲಾಗಿಲ್ಲವೆನ್ನಲು ಇಲ್ಲಿ ಒಂದೆರಡು ಉದಾಹರಣೆಗಳನ್ನು ತೋರಿಸಬಹುದು. ಶಿಕ್ಷಣದ ಬೆಳಕನ್ನು ಕಾಣದ ಈ ಜಾತಿಗಳ ಬಹುಪಾಲು ಜನರು ಅಜ್ಞಾನದ ಅಂಧಕಾರದಲ್ಲಿಯೇ ಇನ್ನೂ ಹುದುಗಿಕೊಂಡಿರುವುದು ಅತ್ಯಂತ ಹೇಯ ಸಂಗತಿಗಳಲ್ಲೊಂದು. ಪರಿಶಿಷ್ಟ ಜಾತಿಯವರ ಶೈಕ್ಷಣಿಕ ಪ್ರಗತಿಯ ವಿವರಗಳನ್ನು ಇಲ್ಲಿ ಪ್ರತ್ಯೇಕವಾಗಿ ತೋರಿಸುವುದರೊಡನೆ ಇದನ್ನು ಸಮರ್ಥಿಸಬಹುದು. ೧೯೮೯ರ ವೇಳೆಗೆ ಪರಿಶಿಷ್ಟ ಜಾತಿಯ ಸ್ತ್ರೀ ಮತ್ತು ಪುರುಷರ ಸಾಕ್ಷರತಾ ಪ್ರಮಾಣ (ಶೇಕಡವಾರು) ಕ್ರಮವಾಗಿ ೨೫.೯೫ ಮತ್ತು ೪೯.೬೯ ಇದ್ದಿತು. ಹಾಗೆಯೇ, ಗ್ರಾಮ ಮತ್ತು ಪಟ್ಟಣಗಳಲ್ಲಿದ್ದ ಸಾಕ್ಷರತಾ ಪ್ರಮಾಣ (ಶೇಕಡವಾರು) ಕ್ರಮವಾಗಿ ೩೧.೨೩. ಮತ್ತು ೫೯.೧೮.

೧೯೮೯ರ ವೇಳೆಗೆ ಕಂಡುಬಂದ ಪರಿಶಿಷ್ಟ ಜಾತಿಗಳ ಜಿಲ್ಲಾವಾರು ಸಾಕ್ಷರತಾ ಪ್ರಮಾಣವನ್ನು (ಶೇಕಡವಾರು) ಈ ಕೆಳಗಿನ ಕೋಷ್ಟಕ ವಿವರಿಸುತ್ತದೆ:

F

| ಜಿಲ್ಲೆ | ನಗರ | | | ಗ್ರಾಮಾಂತರ | | | ಒಟ್ಟು ಜನಸಂಖ್ಯೆ | | |
|---|---|---|---|---|---|---|---|---|---|
| | ಪುರುಷ | ಸ್ತ್ರೀ | ಒಟ್ಟು | ಪುರುಷ | ಸ್ತ್ರೀ | ಒಟ್ಟು | ಪುರುಷ | ಸ್ತ್ರೀ | ಒಟ್ಟು |
| ಬೆಂಗಳೂರು | ೭೨.೧೮ | ೫೩.೫೦ | ೬೨.೮೭ | ೫೧.೧೧ | ೨೬.೪೭ | ೩೯.೨೨ | ೬೬.೯೯ | ೪೬.೮೩ | ೫೭.೨೮ |
| ಬೆಂಗಳೂರು ಗ್ರಾಮಾಂತರ | ೬೧.೧೦ | ೩೭.೫೨ | ೪೯.೭೩ | ೪೫.೭೮ | ೨೦.೮೦ | ೩೩.೬೦ | ೪೭.೬೭ | ೨೨.೮೨ | ೩೫.೫೭ |
| ಬೆಳಗಾವಿ | ೭೩.೭೩ | ೪೫.೧೩ | ೫೯.೩೩ | ೫೨.೧೪ | ೨೦.೯೦ | ೩೬.೭೫ | ೫೬.೫೫ | ೨೫.೭೯ | ೪೧.೩೭ |
| ಬಳ್ಳಾರಿ | ೬೧.೧೫ | ೪೦.೧೩ | ೪೭.೨೧ | ೩೬.೦೩ | ೧೨.೩೪ | ೨೪.೨೩ | ೪೨.೦೨ | ೧೭.೧೯ | ೨೬.೬೯ |
| ಬೀದರ್ | ೭೧.೨೫ | ೪೬.೧೮ | ೫೯.೪೯ | ೨೬.೮೭ | ೧೧.೦೧ | ೧೮.೯೯ | ೫೩.೦೨ | ೨೪.೩೨ | ೩೯.೦೦ |
| ಬಿಜಾಪುರ | ೬೯.೫೭ | ೩೯.೪೩ | ೫೪.೭೫ | ೫೫.೪೩ | ೨೫.೭೩ | ೪೦.೭೦ | ೫೭.೯೮ | ೨೮.೧೬ | ೪೩.೨೧ |
| ಚಿಕ್ಕಮಗಳೂರು | ೬೮.೩೬ | ೪೮.೯೮ | ೫೯.೧೧ | ೪೨.೫೫ | ೨೧.೭೫ | ೩೨.೩೨ | ೪೫.೩೬ | ೨೪.೫೯ | ೩೫.೧೬ |
| ಚಿತ್ರದುರ್ಗ | ೬೮.೫೬ | ೪೫.೧೮ | ೫೭.೪೧ | ೪೪.೩೮ | ೧೮.೭೮ | ೩೧.೯೬ | ೪೮.೬೮ | ೨೩.೩೪ | ೩೬.೪೨ |
| ದಕ್ಷಿಣಕನ್ನಡ | ೭೯.೫೫ | ೬೧.೮೧ | ೭೦.೭೧ | ೬೧.೦೨ | ೪೩.೪೧ | ೫೨.೨೬ | ೬೪.೮೧ | ೪೭.೧೯ | ೫೬.೦೫ |
| ಧಾರವಾಡ | ೭೧.೦೬ | ೪೪.೯೨ | ೫೮.೨೩ | ೪೬.೩೬ | ೧೯.೧೯ | ೩೩.೧೬ | ೫೩.೬೭ | ೨೬.೯೨ | ೪೦.೬೩ |
| ಗುಲ್ಬರ್ಗಾ | ೬೫.೦೭ | ೩೩.೯೩ | ೫೦.೨೧ | ೩೦.೬೭ | ೮.೨೬ | ೧೯.೬೮ | ೩೭.೦೪ | ೧೨.೭೯ | ೨೫.೨೨ |
| ಹಾಸನ | ೬೮.೯೨ | ೪೯.೩೦ | ೫೯.೪೭ | ೪೩.೩೬ | ೨೦.೩೪ | ೩೧.೭೦ | ೪೬.೫೪ | ೨೩.೫೬ | ೩೫.೬೪ |
| ಕೊಡಗು | ೭೨.೮೯ | ೫೬.೧೩ | ೬೪.೫೭ | ೫೨.೮೬ | ೩೩.೦೫ | ೪೩.೦೦ | ೫೫.೩೯ | ೩೫.೯೬ | ೪೫.೭೩ |
| ಕೋಲಾರ | ೭೯.೬೯ | ೬೦.೮೩ | ೭೦.೩೧ | ೪೦.೫೯ | ೧೫.೯೫ | ೨೮.೩೯ | ೪೮.೬೧ | ೨೫.೨೧ | ೩೭.೦೨ |
| ಮಂಡ್ಯ | ೬೫.೯೬ | ೪೭.೦೫ | ೫೬.೮೮ | ೪೬.೭೬ | ೨೪.೨೧ | ೩೫.೬೫ | ೪೯.೯೨ | ೨೭.೮೨ | ೩೯.೦೮ |
| ಮೈಸೂರು | ೬೯.೧೪ | ೪೮.೮೧ | ೫೯.೩೮ | ೩೫.೩೭ | ೧೯.೫೮ | ೨೮.೮೦ | ೪೪.೦೬ | ೨೫.೪೨ | ೩೪.೯೮ |
| ರಾಯಚೂರು | ೫೨.೭೧ | ೨೭.೪೪ | ೪೦.೨೧ | ೨೭.೦೩ | ೬.೮೧ | ೧೬.೯೦ | ೩೧.೮೬ | ೧೦.೬೧ | ೨೧.೨೪ |

| | | | | | | | | | |
|---|---|---|---|---|---|---|---|---|---|
| ಶಿವಮೊಗ್ಗ | ೭೧.೪೩ | ೫೦.೯೮ | ೬೧.೫೬ | ೪೩.೦೩ | ೧೯.೪೬ | ೩೧.೫೫ | ೪೮.೦೮ | ೨೪.೯೯ | ೩೬.೮೫ |
| ತುಮಕೂರು | ೬೮.೧೮ | ೪೬.೮೭ | ೫೮.೧೩ | ೪೬.೩೫ | ೨೧.೯೪ | ೩೪.೪೧ | ೪೮.೭೮ | ೨೪.೫೫ | ೩೬.೯೮ |
| ಉತ್ತರಕನ್ನಡ | ೭೮.೧೮ | ೫೭.೦೧ | ೬೭.೬೫ | ೫೫.೧೮ | ೩೧.೭೨ | ೪೩.೬೪ | ೬೧.೪೦ | ೩೮.೬೫ | ೫೦.೧೭ |
| **ಕರ್ನಾಟಕ** | **೭೦.೦೫** | **೪೭.೬೩** | **೫೯.೧೮** | **೪೨.೭೦** | **೧೯.೨೨** | **೩೧.೨೩** | **೪೯.೬೯** | **೨೫.೯೫** | **೩೮.೦೫** |

(ಆಕರ : ಡಾಟಾ ಬೇಸ್ ಆನ್ ಶೆಡ್ಯೂಲ್ಡ್ ಕ್ಯಾಸ್ಟ್ಸ್ ಲಿಟರೆಸಿ ಇನ್ ಇಂಡಿಯಾ (೧೯೯೧), ಕೋಷ್ಟಕ- ೧೩, ಪು. ೧೩).

ಇವರೊಂದಿಗೆ ಪ್ರಸ್ತಾಪಿಸಬೇಕಾದ ಇನ್ನೊಂದು ಸಂಗತಿಯೆಂದರೆ, ಪರಿಶಿಷ್ಟ ಜಾತಿಗಳ ಶೇ. ೩೦ಕ್ಕಿಂತಲೂ ಕಡಿಮೆ ಸಾಕ್ಷರತೆ ಇರುವ ಜಿಲ್ಲೆಗಳೆಂದರೆ ರಾಯಚೂರು (೨೧.೨೪), ಗುಲ್ಬರ್ಗಾ (೨೫.೨೨) ಮತ್ತು ಬಳ್ಳಾರಿ (೨೯.೬೯).

*          *          *

ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ನೆಲೆಯಲ್ಲಿ, ಪರಿಶಿಷ್ಟ ಜಾತಿ ಸಮುದಾಯಗಳಲ್ಲಿ ಕೆಲವನ್ನಾದರೂ ಇಲ್ಲಿ ಉದಾಹರಣಾರ್ಥ ಪ್ರಸ್ತಾಪಿಸಬಹುದು. ಇದರಿಂದ ಆಂತರಿಕವಾಗಿ ಈ ಜಾತಿಗಳು ಹೇಗೆ ಸಮಾನ ಗುಣದೋಷಗಳನ್ನು ಹೊಂದಿವೆಯೆಂಬುದು ಗಮನಕ್ಕೆ ಬರುತ್ತದೆ. ಪರಿಶಿಷ್ಟ ಜಾತಿಗಳ ಪೈಕಿ ಲಂಬಾಣಿ (ಬಂಜಾರ), ಬೋವಿ (ವಡ್ಡ) ಹಾಗೂ ಸಮಗಾರ (ಚಮ್ಮಾರ) ಸಮುದಾಯಗಳನ್ನು ಸದ್ಯಕ್ಕೆ ಇಲ್ಲಿ ಗಮನಿಸದೆ.

ಭಾರತದ ೨೭ ರಾಜ್ಯಗಳಲ್ಲಿ ವಾಸವಾಗಿರುವ ಅಂದಾಜು ೬ ಕೋಟಿ (೧೦ ಕೋಟಿ?) ಜನಸಂಖ್ಯೆಯುಳ್ಳ ಬಂಜಾರ (ಲಂಬಾಣಿ) ಜನಾಂಗದ ಸಂಘಟನೆ ಈಗೀಗ ಎಲ್ಲಾ ರಾಜ್ಯಗಳಲ್ಲೂ ನಡೆಯುತ್ತಿದೆ. ಇದರ ಅಂಗವಾಗಿ ತಾಂಡಾ ಮಟ್ಟದ, ತಾಲ್ಲೂಕು ಮಟ್ಟದ ಹಾಗೂ ಜಿಲ್ಲಾ ಮಟ್ಟದ ಸಂಘಟನಾ ಸಮಾವೇಶಗಳನ್ನು ನಡೆಸುತ್ತಿರುವುದನ್ನು ಕಾಣಬಹುದು. ಬಂಜಾರರು ಈ ದೇಶದ ಮೂಲನಿವಾಸಿಗಳೆನಿಸಿದ್ದು, ಇವರು ಮೂಲತಃ ಕೃಷಿಕರು ಮತ್ತು ವ್ಯಾಪಾರಿಗಳು. ಅಲ್ಲದೆ, ಈ ಜನಾಂಗದವರು ಶೂರರು, ಸ್ವಾಭಿಮಾನಿಗಳು, ದೇಶಭಕ್ತರು ಹಾಗೂ ಸುಸಂಸ್ಕೃತರೆಂತಲೂ ಗುರುತಿಸಲ್ಪಟ್ಟಿದ್ದಾರೆ. ಮುಖ್ಯವಾಗಿ, ಒಂದೇ ಭಾಷೆ - ಸಂಸ್ಕೃತಿಯನ್ನು ಹೊಂದಿರುವುದು ಗಮನಾರ್ಹ. ಭಾರತದ ಮೇಲೆ ಅನೇಕ ರೀತಿಯ ದಾಳಿಗಳು ನಡೆಯುತ್ತಾ ಬಂದಿದ್ದರೂ ತಮ್ಮ ವಿಶಿಷ್ಟ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವ ಏಕೈಕ ಜನಾಂಗವೇ ಬಂಜಾರರದು. ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಶೋಷಣೆಗಳ ವಿರುದ್ಧ ನಿರಂತರ ಹೋರಾಟ; ಬಂಜಾರರ ಸಾಮಾಜಿಕ, ಆರ್ಥಿಕ ಸಮೀಕ್ಷೆ; ಅಖಿಲಭಾರತ ಮಟ್ಟದ ಬಂಜಾರ ನಿಗಮ ಸ್ಥಾಪನೆ ಮುಂತಾದವು ಈ ಜನಾಂಗದ ಸಂಘಟನೆಯ ಮುಖ್ಯೋದ್ದೇಶಗಳು. ೧೯೯೮ ಅಕ್ಟೋಬರ್‌ನಲ್ಲಿ ಹುಬ್ಬಳ್ಳಿಯಲ್ಲಿ ಕರ್ನಾಟಕ ಪ್ರದೇಶ ಲಂಬಾಣಿ ಬಂಜಾರ ಕಲ್ಯಾಣ ಸಂಘದ ಆಶ್ರಯದಲ್ಲಿ ೩ನೇ ರಾಜ್ಯಮಟ್ಟದ ಲಂಬಾಣಿ ಮಹಾಸಮ್ಮೇಳನ ನಡೆಯಿತು. ಶತಮಾನಗಳಿಂದ ತುಳಿತಕ್ಕೆ ಒಳಗಾಗಿರುವ ಲಂಬಾಣಿ ಜನರನ್ನು ಒಂದುಗೂಡಿಸಿ ಅವರನ್ನು ಅಭಿವೃದ್ಧಿಯ ಹಾದಿಯತ್ತ ಕರೆದೊಯ್ಯುವ ಪ್ರಯತ್ನವಾಗಿ ಈ ಸಮ್ಮೇಳನವನ್ನು ವ್ಯವಸ್ಥೆಗೊಳಿಸಲಾಗಿತ್ತು. ತಾಂಡಾಗಳನ್ನು ಕಂದಾಯ ಗ್ರಾಮಗಳನ್ನಾಗಿ ಪರಿವರ್ತಿಸುವಂತೆ ವಿಶೇಷ ಯೋಜನೆ ರೂಪಿಸಲು ರಾಜ್ಯ ಹಾಗೂ ಕೇಂದ್ರ ಸರ್ಕಾರಗಳಿಗೆ ಒತ್ತಾಯ; ರಾಷ್ಟ್ರಮಟ್ಟದಲ್ಲಿ ಬಂಜಾರ ಅಭಿವೃದ್ಧಿ ನಿಗಮದ ರಚನೆ; ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಸಮನ್ವಯದ ಅಡಿಯಲ್ಲಿ ಮಾನವ ಸಂಪನ್ಮೂಲ ಇಲಾಖೆಯಿಂದ ಲಂಬಾಣಿಗಳ ಅಭಿವೃದ್ಧಿಗಾಗಿ ವಿವಿಧ ಯೋಜನೆಗಳ ಜಾರಿ; ಲಂಬಾಣಿ ಮಹಿಳೆಯರ ವಸ್ತ್ರ ಉತ್ಪಾದನೆಗೆ ಕೇಂದ್ರದ ಸಹಾಯಧನ; ರಾಜಕೀಯದಲ್ಲಿ ಪ್ರಾತಿನಿಧ್ಯ; ಲಂಬಾಣಿ ತಾಂಡಾದಲ್ಲಿ ಸಾರಾಯಿ ಮಾರಾಟ ನಿಷೇಧ, ಇತ್ಯಾದಿ ಬೇಡಿಕೆಗಳನ್ನು ಮುಂದಿಸಲಾಯಿತು. ಕಳೆದ ೫೦ ವರ್ಷಗಳಿಂದಲೂ ಹಿಂದುಳಿದ ವರ್ಗಗಳ ರಾಜಕೀಯ

ಶೋಷಣೆ ನಡೆದಿದ್ದು, ಇದನ್ನು ತಪ್ಪಿಸಲು ಲಂಬಾಣಿ ಸಮಾಜದ ಬಂಧುಗಳು ರಾಜಕೀಯ, ಸಾಮಾಜಿಕ ಹಾಗೂ ಶೈಕ್ಷಣಿಕವಾಗಿ ಮುಖಂಡತ್ವ ಬೆಳೆಸಿಕೊಳ್ಳುವ ಬಗೆಗೆ ಗಮನಹರಿಸುವಂತೆ ಒತ್ತಾಯಿಸಲಾಯಿತು. ಅಂದಿನಿಂದಲೂ (ಜನೇ ಸಮ್ಮೇಳನದ ತರುವಾಯವೂ) ಇಂಥದೇ ಒತ್ತಾಯ ಕೇಳಿಬರುತ್ತಿದ್ದು, ಈ ಜನಾಂಗದ ಬೇಡಿಕೆಗಳು ಈಡೇರಲು ಇನ್ನಷ್ಟು ಸಮಾವೇಶಗಳು ನಡೆಯುವ ಅಗತ್ಯವಿರುವಂತೆ ಕಂಡುಬರುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ಶ್ರಮಜೀವಿ ಬೋವಿ ಜನಾಂಗದ ಬವಣೆ ಇನ್ನೂ ತೀರಿಲ್ಲದಿರುವುದು ಸ್ಪಷ್ಟ. ವಡ್ಡ, ಒಡ್ಡ, ಒಡ್ ಇತ್ಯಾದಿ ಪರ್ಯಾಯ ನಾಮಗಳಿಂದಲೂ ಈ ಜನಾಂಗವನ್ನು ಕರೆಯುವುದುಂಟು. ಪ್ರಕೃತಿಗೆ ಸವಾಲೆಸೆಯುವಂತೆ ಬೃಹತ್ ನಿರ್ಮಾಣಗಳೊಡನೆ ಅಸಾಧ್ಯವಾದುದನ್ನು ಸಾಧ್ಯರೂಪಕ್ಕೆ ತರುವ ಮಾನವ ಶ್ರಮದ, ಸಾಮರ್ಥ್ಯದ ಪ್ರತೀಕವಾಗಿ ಕಂಡುಬರುತ್ತದೆ ಈ ಜನಾಂಗ. ಕೆರೆ-ಕಟ್ಟೆ-ಬಾವಿ, ಕೋಟೆ-ಕೊತ್ತಲ-ಕಟ್ಟಡ, ರಸ್ತೆ ಇನ್ನಿತರ ಕಾಮಗಾರಿಗಳು ಇವರ ಶ್ರಮಪೂರ್ಣ ದುಡಿಮೆಯಿಂದಾದುದನ್ನು ಚರಿತ್ರೆ ಹೇಳುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿ ಅಲೆಮಾರಿ ಗುಡ್ಡಗಾಡು ಜನಾಂಗವೆಂಬ ಅನಾದರಣೆಗೆ ಒಳಗಾಗಿದ್ದ ಈ ಜನಾಂಗ ಅಂದಿನ ಸರ್ಕಾರಗಳಿಂದ ನೋವು, ಅವಮಾನ, ದೌರ್ಜನ್ಯಗಳಿಗೆ ತುತ್ತಾಗಿ ನರಳಿದುದುಂಟು. ಶ್ರಮಜೀವನ ಗಂಡು ಮತ್ತು ಹೆಣ್ಣುಗಳಿಗೆ ಸಮಾನವಾಗಿರುವುದನ್ನು ಈ ಜನಾಂಗದಲ್ಲಿ ಕಾಣಬಹುದು. ಬಂಡವಾಳವು ಶ್ರಮವನ್ನು ತೊತ್ತಾಗಿಸಿಕೊಳ್ಳಬಲ್ಲುದೆಂಬುದಕ್ಕೆ ಈ ಜನಾಂಗದ ಬೆಳವಣಿಗೆಯೇ ಸಾಕ್ಷಿ. ಎಲ್ಲ ದುಸ್ಥಿತಿಗಳಿಗೂ ಈಡಾಗಿ ಒಂದೇ ಸಮನೆ ನರಳುತ್ತಾ ಬಂದಿರುವ ಈ ಜನಾಂಗ, ತನ್ನ ಹಳೆಯ ಹಾಡನ್ನೇ ಇಂದಿಗೂ ಹಾಡುತ್ತಾ ಮುಂದುವರೆಯುತ್ತಿರುವುದನ್ನು ನೋಡಬಹುದು. ಸದ್ಯದ ಪರಿಸ್ಥಿತಿಯಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ದ್ವಿಮುಖ ನೀತಿಯ ಮೀಸಲಾತಿಯ ದವಡೆಯಲ್ಲಿ ಸಿಲುಕಿ ಇನ್ನಷ್ಟು ನರಳುತ್ತಿದೆ.

ಬೋವಿ ಎಂಬುದು ಕೇಂದ್ರ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿದ್ದರೂ ಇದೇ ಜನಾಂಗಕ್ಕೆ ಸೇರಿದ ಒಡ್ಡ, ಒಡ್, ಕಲ್ಲುವಡ್ಡ, ಮಣ್ಣುವಡ್ಡ, ಭಂಡಿವಡ್ಡ, ಗಿರ್ಣಿವಡ್ಡ, ತುಡುಗುವಡ್ಡ - ಈ ಪರ್ಯಾಯ ಗುಂಪುಗಳನ್ನು ರಾಜ್ಯದ ಹಿಂದುಳಿದ ಪಂಗಡಗಳ ಕೆಟಗರಿ - ೨ರಲ್ಲಿ ಸೇರಿಸಲಾಗಿದೆ. ಇದರಿಂದ ಬೋವಿ ಜನಾಂಗವು ಸಮಗ್ರ ಅಭಿವೃದ್ಧಿ ದೃಷ್ಟಿಯಿಂದ ಅನ್ಯಾಯಕ್ಕೊಳಗಾದಂತೆ. ಶೈಕ್ಷಣಿಕ, ಆರ್ಥಿಕ ಮತ್ತು ರಾಜಕೀಯ ಹಕ್ಕುಗಳನ್ನು ಪಡೆಯುವಲ್ಲಿಯೂ ಹಿಂದೆ ಬೀಳುವಂತಾದುದು ಸ್ಪಷ್ಟ. ರಾಷ್ಟ್ರವನ್ನು ನಿರ್ಮಿಸಿದ ಜನಾಂಗಕ್ಕೆ ಸೂಕ್ತ ಪ್ರಾತಿನಿಧ್ಯವಿಲ್ಲವೆಂಬ ಕೊರಗು ಈ ಜನಾಂಗದ್ದು.

ಪರಿಶಿಷ್ಟ ಜಾತಿ-ಜನಾಂಗಗಳು ನಡೆಸುತ್ತಿರುವ ಜಾತಿ ಸಮಾವೇಶಗಳಂತೆಯೇ ಬೋವಿ ಜನಾಂಗವೂ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಮಾವೇಶಗಳನ್ನು ನಡೆಸತೊಡಗಿದೆ. ಅಖಿಲ ಕರ್ನಾಟಕ ಬೋವಿ ವಿಕಾಸ ವೇದಿಕೆಯ ಸಭೆ, ಬೋವಿ ಜನಜಾಗೃತಿ ಸಮಾವೇಶಗಳ ಮೂಲಕ ಸಂಘಟನೆಗೆ ಮುಂದಾಗಿದೆ. ರಾಜಕೀಯ ಪ್ರಾತಿನಿಧ್ಯವಿಲ್ಲದೆ ಜನಾಂಗದ ಏಳಿಗೆ ಸಾಧ್ಯವಿಲ್ಲವೆಂಬ ಹಾಗೂ ಈ ಜನಾಂಗಕ್ಕೆ ಇನ್ನೂ ಹೆಚ್ಚಿನ ರಾಜಕೀಯ ಪ್ರಾತಿನಿಧ್ಯ ದೊರಕಬೇಕೆಂಬ ಘೋಷಣೆಗಳು ಈ ವೇದಿಕೆಗಳಿಂದ ಕೇಳಿಬರತೊಡಗಿವೆ. ಬದುಕು ಆಧುನಿಕಗೊಂಡಂತೆ ವಿಚಾರಗಳೂ ಸುಧಾರಿಸುತ್ತವೆಂಬುದನ್ನು ಈ ಜನಾಂಗದವರ ಬೇಡಿಕೆಗಳೂ ಸಮರ್ಥಿಸುತ್ತವೆ. ಕಲ್ಲು ಒಡೆಯುವ ಕೆಲಸವೂ ಯಾಂತ್ರೀಕೃತವಾಗುತ್ತಿದ್ದು,

ಉದ್ಯೋಗ ಕಳೆದುಕೊಳ್ಳುತ್ತಿರುವ ಬೋವಿ ಜನಾಂಗದ ಯುವಕರು ಇತರ ವ್ಯಾಪಾರ - ಉದ್ದಿಮೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವಂತೆ ಕರೆ ನೀಡಲಾಗುತ್ತದೆ. ಜನಾಂಗದವರು ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸಿ ಅಭಿವೃದ್ಧಿ ಹೊಂದುವ ಬಗೆಗೆ, ಸರ್ಕಾರ ಪರಿಶಿಷ್ಟ ಜಾತಿಯವರಿಗೆ ಕಲ್ಪಿಸಿರುವ ಎಲ್ಲಾ ಕಲ್ಯಾಣ ಯೋಜನೆಗಳನ್ನು ಸದುಪಯೋಗ ಮಾಡಿಕೊಂಡು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಚೈತನ್ಯವಂತರಾಗುವ ಬಗೆಗೆ ಸಲಹೆ ಮಾಡಲಾಗುತ್ತದೆ. ಈ ಜನಾಂಗದ ಇತರ ಬೇಡಿಕೆಗಳಲ್ಲಿ, ಕಲ್ಲುಗಣಿ ಗುತ್ತಿಗೆ ನೀಡುವಾಗ ಬೋವಿ ಜನಾಂಗದವರಿಗೆ ಪ್ರಥಮ ಪ್ರಾಶಸ್ತ್ಯ ನೀಡಬೇಕು; ಪಂಚಾಯಿತಿಗಳಲ್ಲಿ, ನಗರ, ಪುರಸಭೆಗಳಲ್ಲಿ ಕೈಗೊಳ್ಳುವ ರಸ್ತೆ, ಕಟ್ಟಡ-ಕಾಮಗಾರಿಗಳಲ್ಲಿ ಶೇ. ೧೦ ರಷ್ಟನ್ನು ಬೋವಿ ಜನರಿಗೆ ನೀಡಬೇಕು; ಬೋವಿ ಜನರ ಸೇವೆಗಾಗಿ ಸಂಘದ ಕಚೇರಿ, ವಿದ್ಯಾರ್ಥಿನಿಲಯ ಹಾಗೂ ಕಲ್ಯಾಣಮಂಟಪಗಳನ್ನು ನಿರ್ಮಿಸಲು ಸೂಕ್ತ ನಿವೇಶನಗಳನ್ನು ನೀಡಬೇಕು - ಇವು ಮುಖ್ಯವಾದುವು. ಬೋವಿ ಜನಾಂಗದ ಸಂಘಟನೆಯ ನಿಟ್ಟಿನಲ್ಲಿ ಗುರುಸಿದ್ಧರಾಮನ ನೆಲೆವೀಡಾದ ಸೊಲ್ಲಾಪುರದಿಂದ ಹೊರಡುವಂತೆ 'ಕಾಯಕಯೋಗಿ ಶ್ರೀಸಿದ್ಧರಾಮೇಶ್ವರ ವಚನಜ್ಯೋತಿಯ ರಥಯಾತ್ರೆ' ಕಾರ್ಯಕ್ರಮ ಆಯೋಜಿಸಿದುದನ್ನು (ಫೆಬ್ರವರಿ ೧೯೯೯) ಇಲ್ಲಿ ಪ್ರಸ್ತಾಪಿಸಬಹುದು.

ಪರಿಶಿಷ್ಟ ಜಾತಿಗಳಲ್ಲಿ ತೀರಾ ಹಿಂದುಳಿದ ಸಮುದಾಯಗಳಲ್ಲಿ ಸಮಗಾರ (ಚಮ್ಮಾರ) ಜನಾಂಗದವರನ್ನೂ ಗಮನಿಸಬೇಕು. ರಾಜ್ಯದಲ್ಲಿ ಸುಮಾರು ೩೦ ಲಕ್ಷ ಜನಸಂಖ್ಯೆಯ ಈ ಜನಾಂಗ ಹೆಚ್ಚಾಗಿ ಕಂಡುಬರುವುದು ಹಳೆಯ ಮುಂಬಯಿ, ಹೈದರಾಬಾದ್ ಮತ್ತು ಮದರಾಸು ಕರ್ನಾಟಕ ಪ್ರದೇಶಗಳಲ್ಲಿ. ದಕ್ಷಿಣ ಕರ್ನಾಟಕದಲ್ಲಿ ಚದುರಿದ ಸಂಖ್ಯೆಯಲ್ಲಿದ್ದಾರೆ. ಚರ್ಮೋದ್ಯೋಗವನ್ನು ಅವಲಂಬಿಸಿದವರಾದ್ದರಿಂದ ಇವರನ್ನು ಚಮ್ಮಾರರೆಂದು ಸಂಬೋಧಿಸಲಾಗುತ್ತದೆ. ೧೯೭೬ರ ಪರಿಶಿಷ್ಟ ಜಾತಿ-ಪಂಗಡಗಳ ಕಾಯಿದೆ, ಅನುಬಂಧ-೩ ರ ಪ್ರಕಾರ, ಭಾಂಭಿ, ಅಸಾದರು, ಅಸೋಡಿ, ಚಮಾಡಿಯ, ಚಮಾರ, ಜಾಂಭಾರ್, ಚಮಗಾರ್, ಹರಳಯ್ಯ, ಹಳಳಿ, ಖಾಲ್ಪ, ಮಾಚಿಗಾರ, ಮೋಚಿಗಾರ, ಮಾದಾರ್, ಮಾದಿಗ, ಮೋಚಿ, ಮೋಜಿ, ಮುಚ್ಚಿ, ತೆಲುಗು ಮೋಚಿ, ಕಾಮಾಟಿ ಮೋಚಿ, ರಾಸಿಗಾರ್, ರೋಹಿದಾಸ್, ರೋಹಿತ್, ಸಮಗಾರ್ - ಇವು ಈ ಜನಾಂಗದ ಪರ್ಯಾಯ ಜಾತಿಗಳು. ಸಂಖ್ಯಾದೃಷ್ಟಿಯಿಂದ ಈ ಜನಾಂಗ ಉತ್ತಮ ಬಲ ಪಡೆದಿದ್ದರೂ ಈ ಸಮಾಜದ ಜನರು ಈವರೆಗೆ ಅನಕ್ಷರಸ್ಥರು, ಮುಗ್ಧರು ಮತ್ತು ಅಜ್ಞಾನಿಗಳಾಗಿಯೇ ಉಳಿದಿರುವುದು ದುರಂತ. ಇದು ಸಾಲದು ಎಂಬಂತೆ, ಸಾಮಾಜಿಕವಾಗಿ ಈಗಲೂ 'ಅಸ್ಪೃಶ್ಯರು' ಎನಿಸಿಕೊಂಡಿರುವುದು ವಿಶೇಷ. ಈ ಸಮಾಜದ ಅಭಿವೃದ್ಧಿಗಾಗಿ ಶ್ರಮಿಸುವ ರಾಜಕೀಯ ನಾಯಕರ ಅಭಾವವೂ ಈ ಪರಿಸ್ಥಿತಿಯನ್ನು ಇನ್ನಷ್ಟು ಗಂಭೀರವಾಗಿಸುವಲ್ಲಿ ಕಾರಣವೆನಿಸಿದೆ.

ಗಮನಾರ್ಹ ಸಂಗತಿಯೆಂದರೆ, ದಲಿತರಲ್ಲಿಯ ಎಡಗೈ - ಬಲಗೈ ಭೇದವನ್ನು ಬಳಸಿಕೊಂಡು ಸಮಗಾರ ಜನಾಂಗದವರನ್ನು ಎಲ್ಲ ಕ್ಷೇತ್ರಗಳಲ್ಲಿಯೂ ಅಲಕ್ಷಿಸಿಕೊಂಡು ಬಂದಿರುವುದು. ಈ ಭೇದಭಾವವೇ ಸಮಗಾರರಿಗೆ ಮುಳುವಾಗಿ ಪರಿಣಮಿಸಿರುವುದರಿಂದ, ತಮ್ಮ 'ದಲಿತ ಸಮಾಜ'ದ ಬಲಗೈಯವರೇ ತಮ್ಮನ್ನು ಅಸ್ಪೃಶ್ಯರಂತೆ ಕಾಣುತ್ತಿರುವಾಗ ಇತರ ಸಮಾಜದವರ ಮಾತೇನು ಎಂದು ಇವರು ಕೇಳುವುದರಲ್ಲಿ ಅರ್ಥವಿದೆ. ರಸ್ತೆ

ಬದಿಯಲ್ಲಿ ಬೂಟ್‌ಪಾಲಿಶ್ ಮಾಡಿ ಹೊಟ್ಟೆ ತುಂಬಿಕೊಳ್ಳುವ ಈ ಜನಾಂಗದವರ ಸಮಸ್ಯೆಗಳು ಹಲವಾರು. ಸರ್ಕಾರ ಸಹಾಯ ಮಾಡುವ ನೆಪದಲ್ಲಿ 'ಚರ್ಮಕಾರರ ಕುಟೀರ' (ಲಿಡ್ಕರ್)ಗಳನ್ನು ನೀಡಿ ವ್ಯಾಪಾರ ನಡೆಯುತ್ತಿರುವಾಗಲೇ ಮೇಲಿಂದ ಮೇಲೆ ಅವುಗಳನ್ನು ಬೇರೆಡೆ ಎತ್ತಿ ಹಾಕಿಸಿ ಕಿರುಕುಳ ನೀಡುವುದು ಹಾಗೂ ನಿರ್ಗತಿಕರನ್ನಾಗಿಸುವುದು; ರಾಜ್ಯದಲ್ಲಿ ಸಮಗಾರ ಸಮಾಜದವರಿಗೆಂದೇ ಸರ್ಕಾರವು ಲಿಡ್ಕರ್ ಯೋಜನೆಯಡಿಯಲ್ಲಿ ಲೆದರ್ ಬೋರ್ಡ್ ಸ್ಥಾಪನೆ ಮಾಡಿ ೨೫ ವರ್ಷ ಗತಿಸಿದ್ದರೂ ಈವರೆಗೆ ಈ ಸಮಾಜದ ಯಾರೊಬ್ಬರೂ ಸದಸ್ಯರಾಗಲಿ, ಚೇರ್ಮನ್ನರಾಗಲಿ ಆಗಿಲ್ಲದಿರುವುದು; ಸಮಗಾರ ಸಮಾಜಕ್ಕೆ ಸೇರಿದ ಅನೇಕ ರಾಜಕೀಯ ಮುಖಂಡರು ಎಲ್ಲಾ ಪಕ್ಷಗಳಲ್ಲಿದ್ದರೂ, ರಾಜ್ಯದಲ್ಲಿ ಪರಿಶಿಷ್ಟ ಜಾತಿ-ವರ್ಗಗಳಿಗೆ ರಾಜ್ಯ ವಿಧಾನಸಭೆಯಲ್ಲಿ ೩೫ ಸ್ಥಾನಗಳು ಮೀಸಲಿದ್ದರೂ ಒಂದು ಸ್ಥಾನವೂ ಈ ಸಮಾಜದವರಿಗೆ ದೊರೆತಿಲ್ಲದಿರುವುದು, ಇತ್ಯಾದಿ.

ಬೆಳಗಾವಿಯಲ್ಲಿ ನಡೆದ ಈ ಜನಾಂಗದ ಸಮಗಾರ ಹರಳಯ್ಯ ಸಮಾಜ ವೇದಿಕೆಯ ರಾಜ್ಯ ಸಮಾವೇಶದಲ್ಲಿ (ಏಪ್ರಿಲ್ ೧೯೯೯) ಸಮಗಾರರ ಸಂಘಟನೆಯ ಅವಶ್ಯಕತೆಯನ್ನು ಒತ್ತಿ ಹೇಳಲಾಯಿತು. ಈ ಸಮಾಜದ ಹಕ್ಕುಗಳಿಗಾಗಿ ಜನಾಂಗದವರು ಹೋರಾಡಲು ಸಿದ್ಧರಾಗಬೇಕೆಂದು ಕರೆ ಕೊಡಲಾಯಿತು. ಈ ಸಮಾಜದ ಬೇಡಿಕೆಗಳಲ್ಲಿ, ಪ್ರತಿವರ್ಷ ಪರಿಶಿಷ್ಟ ಜಾತಿಯವರಿಗಾಗಿ ಮುಂಗಡಪತ್ರದಲ್ಲಿ ತೆಗೆದಿರಿಸಿದ ಹಣವನ್ನು ಖರ್ಚುಮಾಡದೇ ಇರುವ ಸರ್ಕಾರಿ ಅಧಿಕಾರಿಗಳ ಮೇಲೆ ಕಾನೂನು ಕ್ರಮ ತೆಗೆದುಕೊಳ್ಳಬೇಕು; ಉಚ್ಚ ಶಿಕ್ಷಣಕ್ಕಾಗಿ ಕೊಡಮಾಡುವ ಶಿಷ್ಯವೇತನಕ್ಕಾಗಿ ಪಾಲಕರ ವಾರ್ಷಿಕ ಉತ್ಪನ್ನ ಮಿತಿಯನ್ನು ತೆಗೆದು ಹಾಕಬೇಕು; ಪರಿಶಿಷ್ಟ ಜಾತಿ ಮತ್ತು ಸಮಾಜದ ಹೆಸರಿನ ಮೇಲೆ ಕೆಲವು ಪ್ರತಿಷ್ಠಿತ ವರ್ಗಗಳು ಶೈಕ್ಷಣಿಕ ಸಂಸ್ಥೆಗಳನ್ನು ಹುಟ್ಟುಹಾಕಿದ್ದು, ಅಂಥವನ್ನು ಸರ್ಕಾರ ಮುಟ್ಟುಗೋಲು ಹಾಕಿ ತಪ್ಪಿತಸ್ಥರ ಮೇಲೆ ಕಠಿಣಕ್ರಮ ಕೈಗೊಳ್ಳಬೇಕು; ರಾಜಕೀಯ ಪ್ರಾತಿನಿಧ್ಯ ನೀಡಬೇಕು ಮೊದಲಾದುವು ಮುಖ್ಯವಾದುವು. ಹಾಗೆಯೇ, ಸಮಗಾರ ಕೋಮಿನ ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿನಿಲಯ ನಿರ್ಮಾಣ, ಸಾಮೂಹಿಕ ಮದುವೆ, ಹೈಸ್ಕೂಲ್ ನಂತರದ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ನೀಡಿಕೆ ಮುಂತಾದ ಹೊಣೆಗಾರಿಕೆ ನಿಭಾಯಿಸಲು ಈ ಜನಾಂಗ ಮುಂದಾಗಿದೆ. ಬೆಂಗಳೂರಿನಲ್ಲಿರುವ ಅಖಿಲ ಕರ್ನಾಟಕ ಸಮಗಾರ ಸಮಾಜ ಸೇವಾ ಸಂಘವೂ ಈ ನಿಟ್ಟಿನಲ್ಲಿ ಕ್ರಿಯಾಶೀಲವಾಗಿದೆ.

ಈ ಸಮಾವೇಶದ ನಂತರ ಸಮಗಾರ ಸಮಾಜದಲ್ಲಿ ಹೊಸ ಆಶೋತ್ತರಗಳು ಹುಟ್ಟಿಕೊಳ್ಳುವ ಬಗೆಗೆ ಸಂಬಂಧಿಸಿದವರು ಅನೇಕ ನಿರೀಕ್ಷೆಗಳನ್ನು ಇಟ್ಟುಕೊಳ್ಳುವುದು ಸಹಜ. ಇಲ್ಲಿಯೇ ಪ್ರಸ್ತಾಪಿಸಬೇಕಾದ ಇನ್ನೊಂದು ಸಂಗತಿಯೆಂದರೆ, ವೃತ್ತಿಪರ ಚಮ್ಮಾರರು ೧೯೯೬ ಸೆಪ್ಟೆಂಬರ್‌ನಲ್ಲಿ ಚಿತ್ರದುರ್ಗದಲ್ಲಿ ಸಭೆ ಸೇರಿ ರಾಜಕೀಯ ಶಕ್ತಿಯನ್ನು ಹಿಡಿಯುವ ನಿಟ್ಟಿನಲ್ಲಿ ಸಮಾಲೋಚಿಸಿದುದುಂಟು. ಜನತಂತ್ರದಲ್ಲಿ 'ಮತ' ಪ್ರಬಲವಾದ ಅಸ್ತ್ರ; ರಾಜಕೀಯ ಶಕ್ತಿ ಹಿಡಿಯಲು ಸಾಧ್ಯವಿರುವ ಏಕೈಕ ಅಸ್ತ್ರ. 'ಮತ' ಎಂಬ ಅಸ್ತ್ರ ಸೂಕ್ತವಾಗಿ ಚುನಾವಣೆಗಳಲ್ಲಿ ಬಳಕೆಯಾಗದಿದ್ದರೆ ನಿರ್ಗತಿಕರ ಬದುಕು ಬದಲಾಗುವುದಿಲ್ಲ; ದಲಿತರು ಶಕ್ತಿಯುತರಾಗಲು ಸಾಧ್ಯವಿಲ್ಲ. ಚಮ್ಮಾರ, ಮಾದಿಗ, ಆದಿ ಕರ್ನಾಟಕ - ಹೀಗೆ ನಾನಾ ಹೆಸರುಗಳಿಂದ ಕರೆಯಲ್ಪಡುವ ದಲಿತರ ಸಂಖ್ಯೆ ಅಪಾರ; ಅವರ ಮತಗಳೂ ಅಧಿಕ. ಪ್ರತಿ ಕ್ಷೇತ್ರದಲ್ಲೂ ೩೦,೦೦೦ ದಿಂದ ೪೦,೦೦೦ ಮತಗಳ ಒಡೆಯರಿವರು. ಒಂದು ಅಂದಾಜಿನಂತೆ

ಕರ್ನಾಟಕದ ಒಟ್ಟು ಚರ್ಮಕಾರರ ಸಂಖ್ಯೆ ೮೪ ಲಕ್ಷ. ಎಲ್ಲರೂ ಒಗ್ಗಟ್ಟಾಗಿ ಸ್ವಾತಂತ್ರ್ಯ ಸ್ವರೂಪದ ರಾಜಕಾರಣಕ್ಕೆ ಕೈಹಾಕುವ ಅಗತ್ಯವಿದೆಯೆಂದು ಕರೆ ನೀಡಿದುದುಂಟು. ಇಂಥಾ ಬೆಳವಣಿಗೆಗಳನ್ನು ಗಮನಿಸಿದರೆ, ಸಮಗಾರ ಸಮಾಜ ಜಾತಿಯ ಒಳಸುಳಿಗಳಿಂದ ಪಾರಾಗಿ ಹೊಸ ಸ್ವರೂಪದ ಚರ್ಮಾರ್ರ ಸಮಾಜ ಸ್ಥಾಪನೆಗೆ ಮುಂದಾಗುವುದು ಉಚಿತ. ದಲಿತರಲ್ಲಿ ದಲಿತರೆನಿಸಿರುವ ಈ ಜನಾಂಗದವರಿಗೆ ಅಂಥಾ ಶಕ್ತಿ ಇರುವುದು ಖಚಿತ ಹಾಗೂ ಅಧಿಕ.

ಇಲ್ಲಿ ಗಮನಿಸಬೇಕಾದುದು ಸಮಗಾರ, ಮಚಿಗಾರ ಮತ್ತು ಡೋಹರ ಎಂಬ 'ತ್ರಿಮತಸ್ಥ ಚರ್ಮಕಾರರ' ಬಗೆಗೆ. ಇವರ ಒಟ್ಟು ಸಂಖ್ಯೆ ಸುಮಾರು ೪೨ ಲಕ್ಷ. ಸಮಗಾರರು ಮತ್ತು ಮೋಚಿಗಳು ಒಂದೇ ನಾಣ್ಯದ ಎರಡು ಮುಖಗಳಂತೆ ಇದ್ದರೂ ತಮ್ಮೊಳಗಿನ ಉಪಪಂಗಡದ ಭೇದಗಳಿಂದಾಗಿ ಪರಸ್ಪರ ಸಂಬಂಧ ಹೊಂದದಿರುವುದು ವಿಷಾದ ಹುಟ್ಟಿಸುತ್ತದೆ. ಎಡಗೈ ಜಾತಿ ಸಮುದಾಯಗಳಲ್ಲಿ ಇಂಥಾ ಪ್ರವೃತ್ತಿ ಎದ್ದುಕಾಣುವುದು ಮಾತ್ರವಲ್ಲ, ಅವುಗಳ ಐಕ್ಯತೆಗೆ ಅಡ್ಡಿಯುಂಟು ಮಾಡಿವೆಯೆನ್ನಬಹುದು. ಉತ್ತರ ಕರ್ನಾಟಕದ ಅಸ್ಪೃಶ್ಯ ಜಾತಿಗಳಲ್ಲಿ ಡೋರ, ಸಮಗಾರ ಮತ್ತು ಮಚಿಗಾರರು ಎಲ್ಲಾ ಕ್ಷೇತ್ರಗಳಲ್ಲಿಯೂ ಹಿಂದೆ ಬಿದ್ದಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ೧೯೯೪ ಮೇ ತಿಂಗಳಲ್ಲಿ ಹುಬ್ಬಳ್ಳಿಯಲ್ಲಿ ಜರುಗಿದ ಅಖಿಲ ಕರ್ನಾಟಕ ಮಚಿಗಾರ ಸಮಾಜದ ಪ್ರಥಮ ಮಹಾ ಅಧಿವೇಶನದಲ್ಲಿ, ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಈ ಜಾತಿಯವರು ತೊಂದರೆಗಳಿಂದ ಬಳಲುತ್ತಿರುವುದರ ಬಗೆಗೆ ಸರ್ಕಾರದ ಗಮನ ಸೆಳೆಯಲಾಯಿತು. ಈ ಜಾತಿಯ ಪರ್ಯಾಯ ಹೆಸರುಗಳಲ್ಲಿ ಬಿಟ್ಟುಹೋಗಿರುವ 'ಮುಚಗಾರ' ಎಂಬುದನ್ನು ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಸೇರಿಸುವ ಬಗೆಗೂ ಸರ್ಕಾರವನ್ನು ಕೋರಲಾಯಿತು. ಈಚಿನ ಪ್ರವೃತ್ತಿಯಾದರೂ ಸದ್ಯದ ಕರ್ನಾಟಕದ ರಾಜಕೀಯ ಸಂದರ್ಭದ ಹಿನ್ನೆಲೆಯಲ್ಲಿ ಸಮಗಾರರು ಮತ್ತು ಮಚಿಗಾರರು ಒಂದುಗೂಡಬೇಕೆಂಬುದು. ಈ ನಿಟ್ಟಿನಲ್ಲಿ ಉಂಟಾಗಬಹುದಾದ ಬೆಳವಣಿಗೆಯನ್ನು ಕಾದುನೋಡಬೇಕಾಗಿದೆ.

ಹಿಂದುಳಿದ ವರ್ಗಗಳಲ್ಲಿ ಉಂಟಾದ 'ಜಾತಿ ಜಾಗೃತಿ' ತಳವರ್ಗಗಳ ಮೇಲೂ ಪರಿಣಾಮ ಬೀರಿದುದು ಸ್ಪಷ್ಟ. ಮೇಲಿನ ಕೆಲವು ಉದಾಹರಣೆಗಳು ಪರಿಶಿಷ್ಟ ಜಾತಿ-ಪಂಗಡಗಳ ವ್ಯಾಪ್ತಿಗೆ ಬರುವ ಉಪಜಾತಿಗಳು ಜಾತಿಸಂಘಗಳ ಮೂಲಕ ಹೇಗೆ ತಮ್ಮ ಮೂಲ ಸ್ವರೂಪವನ್ನು ಪ್ರದರ್ಶಿಸುತ್ತಿವೆಯೆಂಬುದನ್ನು ದೃಢಪಡಿಸುವಂಥವು. ಇಂಥಾ ಬೆಳವಣಿಗೆಯನ್ನು ಒಪ್ಪುವುದು, ಸಮರ್ಥಿಸುವುದು ಅಷ್ಟಾಗಿ ಆರೋಗ್ಯಕರ ಲಕ್ಷಣವಲ್ಲವೆಂತಲೇ ಭಾವಿಸಲಾಗುತ್ತದೆ. ಸಂಕುಚಿತ ಭಾವನೆಯಿಂದ ಕೂಡಿದ, ಸ್ವಾರ್ಥ ಸಾಧನೆಯ ಉದ್ದೇಶವುಳ್ಳ ವಂಚಕ ದೃಷ್ಟಿಯ ಸಮಾವೇಶಗಳೆಂದು ಇಂಥಾ ಜಾತಿ ಸಮಾವೇಶಗಳನ್ನು ಗುರುತಿಸುವು ದುಂಟು. ಜಾತಿ ಸಮಾವೇಶವೊಂದನ್ನು ಪ್ರತಿಷ್ಠೆಯ ಪ್ರತೀಕವಾಗಿಸುವವರನ್ನು ಖಂಡಿಸಲು ಪ್ರಯತ್ನಿಸುವುದುಂಟು. ಇಂಥಾ ಪ್ರತಿಕ್ರಿಯೆಗಳ ಪರಿವೆಯೇ ಇಲ್ಲದಂತೆ ಒಳಜಾತಿ-ಉಪ ಜಾತಿಗಳು ಅರ್ಭಟದಿಂದಲೇ ತಮ್ಮ ತಮ್ಮ ಜಾತಿ ಸಮ್ಮೇಳನಗಳನ್ನು ಮಾಡಿ ಮುಗಿಸುತ್ತವೆ; ತಮ್ಮದೇ ಬೇಡಿಕೆಗಳ ಪಟ್ಟಿಯನ್ನು ಸರ್ಕಾರದ ಮುಂದೆ ಮಂಡಿಸಿ ಪ್ರಚಾರಪಡೆದುಕೊಳ್ಳುತ್ತವೆ; ತಮ್ಮ ಜಾತಿಜನರ ಸಂಘಟನೆಗಾಗಿ ವ್ಯವಸ್ಥಿತ ಕಾರ್ಯಕ್ರಮಗಳನ್ನು ರೂಪಿಸತೊಡಗುತ್ತವೆ. ಈ ಹಿನ್ನೆಲೆಯಲ್ಲಿ ಬಹುಪಾಲು ಹಿಂದುಳಿದ ವರ್ಗಗಳು ಮತ್ತು ದಲಿತ ಜಾತಿಗಳು ಒಂದು ಸಮಾನ ಬೇಡಿಕೆಯ ಹಂತದಲ್ಲಿ ಒಂದೇ ತೆರನಾಗಿ ಕಾಣಿಸಿ ಕೊಳ್ಳುವುದುಂಟು.

ಯಾವುದೆಂದರೆ, ಅದು 'ರಾಜಕೀಯ ಲಾಭ'ದ ಬೇಡಿಕೆ. ರಾಜಕೀಯ ಪ್ರಾತಿನಿಧ್ಯ ಅಥವಾ ಚುನಾವಣಾ ಮೀಸಲಾತಿಗಾಗಿ ಆಡಳಿತ ಪಕ್ಷ-ವಿರೋಧ ಪಕ್ಷ, ರಾಷ್ಟ್ರೀಯ ಪಕ್ಷ-ಪ್ರಾಂತೀಯ ಪಕ್ಷ- ಹೀಗೆ ನಾನಾ ಸಿದ್ಧಾಂತಗಳ, ಮಟ್ಟಗಳ ರಾಜಕೀಯ ಪಕ್ಷಗಳ ಮುಂದೆ ತಮ್ಮ ಜಾತಿ ಜನರ ಸಂಖ್ಯೆಗನುಗುಣವಾಗಿ ಸ್ಥಾನ-ಮಾನಗಳನ್ನು ಬೇಡಿ ಪಡೆಯುವ ಪರಿಪಾಟ ಬೆಳೆದು ಬಂದಿದೆ. ಕೆಲವೊಮ್ಮೆ ಬಹುಮಟ್ಟಿಗೆ ಜಾತಿ ಸಮಾವೇಶಗಳೇ ರಾಜಕೀಯ ಪಕ್ಷಗಳ ಸಮಾವೇಶಗಳಾಗಿಯೂ ಇರುವುದರಿಂದ, ಇದು ತೀರಾ ಅಗತ್ಯವೆಂಬ ಭಾವನೆಯೇ ಎಲ್ಲರಲ್ಲಿಯೂ ಇರುತ್ತದೆ. ಸದ್ಯದ ಜಾತಿ ಸಮಾವೇಶಗಳಲ್ಲಿ ಕಾಣುತ್ತಿರುವುದು ಇದನ್ನೇ.

ಆದರೆ ಒಂದೇ ಜಾತಿಯಲ್ಲಿಯೇ ಒಡಕುಂಟಾದರೆ ಹೇಗೆ? ಪ್ರತ್ಯೇಕಗೊಂಡ ಗುಂಪು ತನ್ನ ಸಂಘಟನೆಯನ್ನು ಬಲಪಡಿಸಿಕೊಂಡರೆ ಆಗಬಹುದಾದ ಅನಾಹುತವೇನು? ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯಗಳ ನೆಲೆಯಲ್ಲಿ ದೀರ್ಘಕಾಲ ದಿಂದಲೂ ಎಲ್ಲ ವಿಧದ ಅನ್ಯಾಯ, ತುಳಿತಗಳಿಗೆ ಒಳಗಾದ ಸಮುದಾಯವೊಂದರಲ್ಲಿ ಹೀಗೆ ಬಿರುಕುಂಟಾದರೆ ಈ ಸಮಸ್ಯೆಗೆ ಪರಿಹಾರವೇನು? - ಇಂಥಾ ಪ್ರಶ್ನೆಗಳು ಎದುರಾಗುವುದು, ಪರಿಶಿಷ್ಟ ಜಾತಿಗಳಾದ ಹೊಲೆಯ - ಮಾದಿಗ ಸಮುದಾಯಗಳು 'ಬಲಗೈ-ಎಡಗೈ' ಭೇದದಿಂದ ಸೀಳಿ ಎರಡು ಪ್ರತ್ಯೇಕ ಭಾಗಗಳಾಗುತ್ತಿರುವ ಸಂದರ್ಭದಲ್ಲಿ. ಹೊಲೆಯರನ್ನು 'ಬಲಗೈ' ಗುಂಪಾಗಿ, ಮಾದಿಗರನ್ನು 'ಎಡಗೈ' ಗುಂಪಾಗಿ ವಿಂಗಡಿಸಿ ವ್ಯವಹರಿಸುವ ಅಭ್ಯಾಸ ನಮ್ಮ ಸಾಮಾಜಿಕ ಸಂದರ್ಭದಲ್ಲಿ - ಎಲ್ಲರಿಗೂ ತಿಳಿದಿರುವಂತೆ - 'ಗುಪ್ತ' ವಾಗಿಯೇ ಬೆಳೆದು ಹೆಮ್ಮರವಾಗಿರುವಂಥಾದ್ದು. 'ಇವರಿಬ್ಬರಲ್ಲಿ ಸಾಂಸ್ಕೃತಿಕವಾಗಿ ಯಾವುದೇ ಬೆರೆಯುವಿಕೆ ಇರುವುದಿಲ್ಲ'ವೆಂಬ ವಾಸ್ತವವನ್ನು ಚಾಂಡಾಳರು ತೆರೆದಿಟ್ಟರೆ (ಚಾಂಡಾಳ : ೧೯೯೨ : ೧೫೨), 'ಎಡ ಬಲಗಳಲ್ಲಿ ಶ್ರೇಣೀಕರಣ ದಿನದಿನಕ್ಕೆ ತೀವ್ರಗೊಂಡು ಮಾದಿಗರದೇ ಪ್ರತ್ಯೇಕ ಸಂಘಟನೆ ಹುಟ್ಟಿಕೊಳ್ಳುತ್ತಿರುವುದರ ಹಿಂದೆ ಯಾವ ತತ್ವ ಪಿತೂರಿ ನಡೆಸುತ್ತಿದೆಯೆಂದು ಇಂದು ಗಂಭೀರವಾಗಿ ಚರ್ಚಿಸಬೇಕಾಗಿದೆ' ಎನ್ನುತ್ತಾರೆ ಗಂಗಾಧರ ಕುಷ್ಟಗಿ (ವೀರಭದ್ರಪ್ಪ, ಜಾಹ್ನವಿ : ೧೯೯೮ : ೨೫೦).

ಆದರೆ ಮಾದಿಗ ಜನಾಂಗ ಏಕಾಏಕಿ ಪ್ರತ್ಯೇಕ ಸಮ್ಮೇಳನ - ಸಮಾವೇಶಗಳನ್ನು ನಡೆಸುವಂಥಾ ನಿಲುವು ತಳೆದುದು ಹೇಗೆ? ಪ್ರತ್ಯೇಕ ಮೀಸಲಾತಿ ಬೇಡಿಕೆಯನ್ನು ಮಂಡಿಸಲು ಕಾರಣವೇನು? ಮಾದಿಗ ಸಮುದಾಯ ಏಕಘಟಕವೇ ಅಥವಾ ಬಹುಘಟಕಗಳ ರೂಪವೇ? ದಲಿತ ಚಳವಳಿಯನ್ನು ಪುನರ್ ಸಂಘಟಿಸಿ ಪ್ರಸ್ತುತ ಪರಿಸ್ಥಿತಿಗನುಗುಣವಾಗಿ ಚಾಲನೆಗೊಳಿಸ ಬೇಕಾದ ತುರ್ತು ಸಂದರ್ಭದಲ್ಲಿ ಈ ಪ್ರವೃತ್ತಿ ತಲೆದೋರಿರುವುದು ತೀರಾ ಗಂಭೀರ ಸಂಗತಿಗಳಲ್ಲೊಂದೆನ್ನಲಡ್ಡಿಯಿಲ್ಲ.

### ೫.೫. ಮಾದಿಗರ ಪ್ರತ್ಯೇಕ ಮೀಸಲಾತಿ ಬೇಡಿಕೆ

ಕರ್ನಾಟಕದಲ್ಲಿ ಮಾದಿಗ ಸಮುದಾಯ ಸಂಘಟನೆಗೊಳ್ಳುತ್ತಿರುವುದು ಮಾದಿಗ ದಂಡೋರ, ಆದಿ ಜಾಂಬವ ಹಾಗೂ ಆದಿ ಕರ್ನಾಟಕರ ಹೆಸರಿನಲ್ಲಿ. ಮಾದಿಗರ ಪ್ರತ್ಯೇಕ ಮೀಸಲಾತಿ ಬೇಡಿಕೆ ಕುರಿತು ಗಮನಿಸುವ ಮೊದಲು ಮಾದಿಗ ಜನಾಂಗವನ್ನು ಗಮನಿಸೋಣ. ಭಾರತದ ಎಲ್ಲಾ ಪ್ರದೇಶಗಳಲ್ಲಿ ಸರ್ವೇ ಸಾಮಾನ್ಯವಾಗಿ ಕಂಡುಬರುವ ಪ್ರಮುಖ ಪರಿಶಿಷ್ಟ ಜಾತಿಯ ಜನರೆಂದರೆ ಮಾದಿಗರು ಮಾತ್ರ ಎಂಬ ಮಾತಿನಲ್ಲಿ ಉತ್ಪ್ರೇಕ್ಷೆಯೇನೂ ಇಲ್ಲ. ಹಾಗೆಯೇ, ಕರ್ನಾಟಕದಲ್ಲಿ ಮಾದಿಗ ಅಥವಾ ಆದಿ ಜಾಂಬವ

ಜನಾಂಗದವರು ಬಹುಸಂಖ್ಯಾತರು ಎಂಬುದೂ ನಿಜ. ೧೯೯೧ರ ಜನಗಣತಿ ವರದಿ ಪ್ರಕಾರ, ದಕ್ಷಿಣ ಭಾರತದಲ್ಲಿ ಪರಿಶಿಷ್ಟ ಜಾತಿಯ ಜನರಲ್ಲಿ ಮಾದಿಗರ ಸಂಖ್ಯೆ ಶೇ. ೫೦ ರಷ್ಟು. ೧೯೭೫ರಲ್ಲಿ ಸರ್ಕಾರಕ್ಕೆ ಒಪ್ಪಿಸಲಾದ ಹಾವನೂರು ಆಯೋಗ ವರದಿ ಹೇಳುವಂತೆ, ಕರ್ನಾಟಕದ ಮಾದಿಗರ ಸಂಖ್ಯೆ ಶೇ. ೫೭.೨ ರಷ್ಟು. ಒಂದು ಅಂದಾಜಿನಂತೆ ಕರ್ನಾಟಕದಲ್ಲಿರುವ ಮಾದಿಗ ಜನಾಂಗದ ಸಂಖ್ಯೆ ೮೫ ಲಕ್ಷ. ಬಹುಸಂಖ್ಯಾತರಾದ ಮಾದಿಗರಲ್ಲಿ ತಮಗೆ ನ್ಯಾಯಯುತ ಮೀಸಲಾತಿ ದೊರೆತಿಲ್ಲವೆಂಬ ಅತೃಪ್ತಿ ಇದೆ. ಸಂವಿಧಾನದ ೧೬(೪) ಮತ್ತು ೩೩೫ನೇ ಅನುಚ್ಛೇದಗಳಲ್ಲಿ ಪರಿಶಿಷ್ಟ ಜಾತಿ ಮತ್ತು ವರ್ಗಗಳಿಗೆ ಮೀಸಲಾತಿ ಕುರಿತ ನಿಯಮಗಳನ್ನು ಅಳವಡಿಸಲಾಗಿದ್ದರೂ, ಈ ಮೀಸಲಾತಿಯಿಂದ ಮಾದಿಗರಿಗೆ ನೌಕರಿಗಳು ದೊರೆತು ಅವರ ಸರ್ವತೋಮುಖಿ ಪ್ರಗತಿಯಾಗಬಹುದೆಂಬ ನಿರೀಕ್ಷೆ ಹುಸಿಯಾಗಿದೆ. ಅವರ ಇಂದಿನ ದುಸ್ಥಿತಿಯೇ ಇದಕ್ಕೆ ಸಾಕ್ಷಿ. ತಮ್ಮ ಹೆಸರಿನಲ್ಲಿ 'ಬಲಗೈ'ನವರು ಅವಕಾಶಗಳೆಲ್ಲವನ್ನೂ ಪಡೆದುಕೊಳ್ಳುತ್ತಿದ್ದಾರೆಂಬುದು ಅವರ ಆರೋಪ. ಅವರ ಈ ಹೋರಾಟಕ್ಕೆ ಪ್ರೇರಣೆ ದೊರೆತುದು ಆಂಧ್ರಪ್ರದೇಶದಲ್ಲಿ ಪ್ರತ್ಯೇಕ ಮೀಸಲಾತಿಗಾಗಿ ಆರಂಭಗೊಂಡ ಮಾದಿಗರ ಚಳವಳಿಯಿಂದ. ಇದು 'ಮೀಸಲಾತಿಯಲ್ಲಿ ಮೀಸಲಾತಿ ಜಾರಿಗೆ ತರಲು ನಡೆಸಿದ ಚಳವಳಿ'ಯೆಂತಲೇ ಪ್ರಸಿದ್ಧಿಯಾಗಿದೆ.

ಆಂಧ್ರದಲ್ಲಿಯ ಮಾಲ, ಮಾದಿಗ ಮುಂತಾದ ಪರಿಶಿಷ್ಟ ಜಾತಿಯವರಿಗೆ ಇರುವ ಮೀಸಲಾತಿ ಸೌಲಭ್ಯವನ್ನು ಆಯಾ ಗುಂಪುಗಳ ಜನಸಂಖ್ಯೆಯ ಪ್ರಮಾಣದ ಮೇಲೆ ನಿರ್ಧರಿಸಲು ರಾಜ್ಯ ಸರ್ಕಾರ ಆಜ್ಞೆ ಹೊರಡಿಸಿತು. ನೌಕರಿ ಮತ್ತು ಶಾಲಾ ಪ್ರವೇಶಗಳಿಗೆ ಸಂಬಂಧಿಸಿದಂತೆ ಈಗಿರುವ ಶೇ. ೧೫ ಮೀಸಲಾತಿಯಲ್ಲಿ ಮಾದಿಗರಿಗೆ ಶೇ. ೭.೧; ಮಾಲರಿಗೆ ಶೇ. ೬; ರೆಲ್ಲಿ ಮತ್ತು ಆದಿ ಆಂಧ್ರ ಸಮುದಾಯಗಳಿಗೆ ಶೇ. ೧ರಷ್ಟು ನಿರ್ಧರಿಸಲಾಯಿತು. ಮಾಲರಿಗೆ ಹೋಲಿಸಿದರೆ ಮಾದಿಗರಿಗೆ ನಿಗದಿತ ಪ್ರಮಾಣದಲ್ಲಿ ಮೀಸಲಾತಿ ಸೌಲಭ್ಯವಿಲ್ಲವೆಂಬ ಆರೋಪವೇ ಈ 'ಮೀಸಲಾತಿಯಲ್ಲಿಯ ಮೀಸಲಾತಿಗೆ' ಕಾರಣ. ಇದನ್ನು ಒತ್ತಾಯಿಸಿ ಚಳವಳಿ, ಜಾಥಾ, ನಿರಶನವ್ರತ, ಮೆರವಣಿಗೆಗಳನ್ನು ಎರಡು ವರ್ಷಗಳ ಕಾಲ ಸಂಘಟಿಸಿದ ಮಾದಿಗ ಮೀಸಲಾತಿ ಹೋರಾಟ ಸಮಿತಿ (ಎಮ್. ಆರ್. ಪಿ. ಎಸ್.) ಕಡೆಗೂ ಸರ್ಕಾರದಿಂದ ಮೀಸಲಾತಿ ಆಜ್ಞೆ ಹೊರಡಿಸುವಲ್ಲಿ ಸಫಲಗೊಂಡುದು ಚರಿತ್ರಾರ್ಹ ಘಟನೆ. ಆದರೆ ಈ ಆಜ್ಞೆಯನ್ನು ಆಂಧ್ರ ಹೈಕೋರ್ಟ್ ತಳ್ಳಿಹಾಕಿದರೂ, ಪರಿಶಿಷ್ಟ ಜಾತಿಗಳನ್ನು ಪುನರ್ ವಿಂಗಡಿಸಲು ರಾಜ್ಯಗಳಿಗೆ ಅಧಿಕಾರ ವಿಲ್ಲವೆಂದು ತೀರ್ಪು ಕೊಟ್ಟರೂ ಚಂದ್ರಬಾಬುನಾಯ್ಡು ಸರ್ಕಾರ ಇದಕ್ಕೆ ಮಣಿಯದೆ ತನ್ನ ವಿಶೇಷ ಮೀಸಲಾತಿ ಆಜ್ಞೆಯನ್ನು ಒಪ್ಪಿಗೆಗಾಗಿ ಕೇಂದ್ರ ಸರ್ಕಾರದ ಪರಿಶಿಷ್ಟ ಜಾತಿ ಆಯೋಗಕ್ಕೆ ಕಳುಹಿಸಿಕೊಟ್ಟಿತು. ಆಯೋಗವೂ ಈ ಆಜ್ಞೆಯನ್ನು ತಿರಸ್ಕರಿಸಿದುದು ಗಮನಾರ್ಹ. ಪರಿಶಿಷ್ಟ ಜಾತಿ ಮೀಸಲಾತಿಯಲ್ಲಿ ಎ.ಬಿ.ಸಿ.ಡಿ. ಗುಂಪುಗಳನ್ನು ಮಾಡಿ ಮಾದಿಗ ಸಮುದಾಯಕ್ಕೆ 'ಬಿ' ವರ್ಗದ ಸ್ಥಾನವನ್ನೂ, ಮಾಲ ವರ್ಗಕ್ಕೆ 'ಸಿ' ವರ್ಗದ ಸ್ಥಾನವನ್ನೂ ನಾಯ್ಡು ಸರ್ಕಾರ ನೀಡಿದ್ದಿತು.

ಆಂಧ್ರ ಸರ್ಕಾರ ಈ ಮೀಸಲಾತಿ ಅಧ್ಯಯನಕ್ಕಾಗಿ ನೇಮಿಸಿದ್ದ ನ್ಯಾಯಮೂರ್ತಿ ಪಿ. ರಾಮಚಂದ್ರರಾಜು ವಿಚಾರಣಾ ಆಯೋಗ ತನ್ನ ವರದಿಯಲ್ಲಿ ಮಾದಿಗರಿಗೆ

ಅನ್ಯಾಯವಾಗಿದೆಯೆಂದು ಸಾಬೀತು ಪಡಿಸಿದುದನ್ನು ಗಮನಿಸಬೇಕು. ಮಾಲರಿಗೆ ಹೋಲಿಸಿದರೆ ಮಾದಿಗರು ಎಲ್ಲ ಕ್ಷೇತ್ರಗಳಲ್ಲಿಯೂ ಹಿಂದೆ ಬಿದ್ದಿದ್ದಾರೆಂಬುದನ್ನು ರಾಮಚಂದ್ರರಾಜು ಆಯೋಗ ದೃಢಪಡಿಸುತ್ತದೆ. ೧೯೯೧ರ ಜನಗಣತಿ ವರದಿ ಪ್ರಕಾರ, ಆಂಧ್ರದಲ್ಲಿರುವ ಪರಿಶಿಷ್ಟ ಜಾತಿಗಳ ಒಟ್ಟು ಸಂಖ್ಯೆ ೫೯. ಇದರಲ್ಲಿ ಮಾದಿಗರದ್ದೇ ೧೮ ಉಪಜಾತಿಗಳಿವೆ. ಇವರೆಲ್ಲರ ಒಟ್ಟು ಸಂಖ್ಯೆ ೩೭ ಲಕ್ಷ. ಸಾಕ್ಷರತೆ ಪ್ರಮಾಣ ಶೇ. ೧೧.೮೧. ಮಾಲರು ೨೮ ಉಪಜಾತಿಗಳಲ್ಲಿ ಹಂಚಿಹೋಗಿದ್ದು, ಇವರ ಸಂಖ್ಯೆ ೩೨ ಲಕ್ಷ. ಸಾಕ್ಷರತೆ ಪ್ರಮಾಣ ಶೇ. ೨೧. ಸಮಾಜ ಕಲ್ಯಾಣ ಇಲಾಖೆ ನಡೆಸುವ ವಿದ್ಯಾರ್ಥಿನಿಲಯಗಳಲ್ಲಿ ೬೦ ಸಾವಿರ ಮಂದಿ ಮಾದಿಗರಿದ್ದರೆ, ಮಾಲರ ಸಂಖ್ಯೆ ೫೮ ಸಾವಿರ. ರೆಲ್ಲಿಗಳು ೬೭೫, ಆದಿ ಆಂಧ್ರರು ೧೫೦೦. ಉಳಿದ ೫೫ ಪರಿಶಿಷ್ಟ ಜಾತಿಗಳ ವಿದ್ಯಾರ್ಥಿಗಳ ಸಂಖ್ಯೆ ೨೬೦೦. ರಾಮಚಂದ್ರರಾಜು ವರದಿ ತೋರಿಸಿಕೊಟ್ಟಂತೆ, ಸರ್ಕಾರಿ ಉದ್ಯೋಗ ಮತ್ತು ಶಾಲಾ-ಕಾಲೇಜುಗಳಲ್ಲಿ ಪ್ರವೇಶಗಳಿಗೆ ಸಂಬಂಧಿಸಿದಂತೆ, ಪ್ರತಿ ನೂರು ಅವಕಾಶಗಳಲ್ಲಿ ೬೪ ಮಾಲರಿಗೆ ದಕ್ಕಿದ್ದರೆ ೩೬ ಮಾತ್ರ ಮಾದಿಗರದು.

ಮಾದಿಗರು ಬಹುಸಂಖ್ಯಾತರಾದರೂ ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಅವರು ಮಾಲರಿಗಿಂತಲೂ ಹಿಂದುಳಿದಿರುವರು. ಮಾದಿಗರ ಹೆಸರಿನಲ್ಲಿ ಮಾಲರೇ ಎಲ್ಲಾ ಸೌಲಭ್ಯಗಳನ್ನೂ ಗಿಟ್ಟಿಸುವುದರೊಡನೆ ಇತರ ಎಲ್ಲಾ ಪರಿಶಿಷ್ಟ ಜಾತಿಗಳಿಗಿಂತ ಮುಂದಿರುವರು. ಮಾದಿಗರ ಚಳವಳಿಯ ಮೂಲ ಇದೇ ಎಂಬುದು ಸ್ಪಷ್ಟ. ಈ ಅಸಮಾನತೆಯನ್ನು ನಿವಾರಿಸಲೆಂದೇ ಎಮ್. ಆರ್. ಪಿ. ಎಸ್., ಚಂದ್ರಬಾಬುನಾಯ್ಡು ಸರ್ಕಾರದ ಮೇಲೆ ಒತ್ತಡ ಹೇರಿದುದುಂಟು. ಮೀಸಲಾತಿ ಆಜ್ಞೆ ಜಾರಿ ವಿನಾ ಉಳಿದ ಯಾವ ನೆಪಗಳನ್ನೂ ಈ ಸಮಿತಿ ಕೇಳಲು ತಯಾರಿಲ್ಲದಿರುವುದು ಸಮಸ್ಯೆಯನ್ನು ಇನ್ನಷ್ಟು ಜಟಿಲಗೊಳಿಸಿದಂತಾಗಿದೆ. ಆದರೆ 'ಮೀಸಲಾತಿಯಲ್ಲಿ ಮೀಸಲಾತಿ ಆಜ್ಞೆ' ಜಾರಿಗೆ ಬಂದೇ ತೀರಬೇಕೆಂಬ ಎಮ್. ಆರ್. ಪಿ. ಎಸ್.ನ ನಿಲುವು ಇತರ ರಾಜ್ಯಗಳ, ಮುಖ್ಯವಾಗಿ ಕರ್ನಾಟಕದ ಪರಿಶಿಷ್ಟ ಜಾತಿಗಳಿಗೆ ಮಾದರಿಯಾಗಿರುವಂತೆಯೇ ಪ್ರೇರಕವೂ ಆಗಿದೆಯೆಂಬುದು ಸ್ಪಷ್ಟ.

ಆಂಧ್ರದಲ್ಲಿ ಮಾದಿಗ ಮೀಸಲಾತಿ ಹೋರಾಟ ಸಮಿತಿಯನ್ನು ಬೆಂಬಲಿಸಿದ ಇತರ ಸಂಘಟನೆಗಳು ಸಾಮಾಜಿಕ ನ್ಯಾಯಪರವಾದ ಹೋರಾಟದಲ್ಲಿ ವಿಶ್ವಾಸವುಳ್ಳವು. ಅಲ್ಲದೆ, ಸ್ವತಃ ಈ ಸಮಿತಿಯ ವರ್ಚಸ್ವೀ ಅಧ್ಯಕ್ಷ ಮಂದ ಕೃಷ್ಣಮಾದಿಗ ಅವರು ಈ ಚಳವಳಿಯನ್ನು ಯಶಸ್ವಿಯಾಗಿ ಮುನ್ನಡೆಸುವಲ್ಲಿ ನಿರ್ವಹಿಸಿದ ಪಾತ್ರವೂ ಪರಿಗಣನಾರ್ಹ. ಇವರ ಪ್ರಭಾವ ಎಷ್ಟೆಂದರೆ, ಕರ್ನಾಟಕದಲ್ಲಿ ಮಾದಿಗ ದಂಡೋರ ಪ್ರತ್ಯೇಕ ಮೀಸಲಾತಿ ಹೋರಾಟ ಕಾಡ್ಗಿಚ್ಚಿನಂತೆ ಹಬ್ಬಲು ಇವರೇ ಕಾರಣಕರ್ತರು. 'ದಂಡೋರ' ಎಂಬುದು ಆಂಧ್ರಪ್ರದೇಶದ ದಲಿತರು ಪಾರಂಪರಿಕವಾಗಿ ಆಚರಿಸಿಕೊಂಡು ಬಂದ 'ಡಂಗೂರ ಸಾರುವ' ಕಾಯಕಕ್ಕೆ ಸಂಬಂಧಿಸಿದ್ದು. ಹಿಂದೊಮ್ಮೆ ಇತರರ ಸಂದೇಶಗಳನ್ನು ಡಂಗೂರ ಸಾರುವುದರೊಡನೆ ಜನತೆಗೆ ಮುಟ್ಟಿಸುತ್ತಿದ್ದ ದಲಿತರು, ಈ ಚಳವಳಿಯ ಸಂದರ್ಭದಲ್ಲಿ ತಮ್ಮಲ್ಲೇ ಉಪಜಾತಿಯಾದ ಮಾದಿಗರ ಅತೃಪ್ತಿಯನ್ನು ಸಾರಲು ಡಂಗೂರವನ್ನು ಬಳಸಿಕೊಂಡುದು ಗಮನಾರ್ಹ.*

---

* "The Dalits of Andhra Pradesh have been the traditional 'criers', using their drums to communicate important messages throughout the village

ಈಗ ಅಖಿಲ ಭಾರತ ಮಾದಿಗ ಮೀಸಲಾತಿ ಹೋರಾಟ ಸಮಿತಿಯ ಅಧ್ಯಕ್ಷರೆನಿಸಿರುವ ಮಂದಾ ಕೃಷ್ಣಮಾದಿಗ ಅವರು, ಪರಿಶಿಷ್ಟರಲ್ಲಿ ಬಹುಸಂಖ್ಯಾತರಾಗಿರುವ ಮಾದಿಗ ಜನಾಂಗಕ್ಕೆ ಪ್ರತ್ಯೇಕ ಮೀಸಲಾತಿ ನೀಡದಿದ್ದರೆ, ಭಾರತದ ೧೫ ಕೋಟಿ ಜನ ಪ್ರತ್ಯೇಕ ರಾಜಕೀಯ ಪಕ್ಷವನ್ನೆ ಕಟ್ಟಿಕೊಂಡು ಹೋರಾಟ ನಡೆಸಬೇಕಾಗುತ್ತದೆಂದು ಘೋಷಿಸಿದರು. ಶತಮಾನಗಳಿಂದ ಅಸ್ಪೃಶ್ಯರಾಗಿ ಸಮಾಜದಿಂದ ದೂರವಿದ್ದು, ಸಾಮಾಜಿಕವಾಗಿ ತುಳಿತಕ್ಕೆ ಒಳಗಾಗಿ ಬಡತನದ ರೇಖೆಗಿಂತ ಕೆಳಗೆ ಬದುಕುತ್ತಿರುವವರಿಗೆ ಸಂವಿಧಾನದಲ್ಲಿ ಶೇ. ೧೮ ಮೀಸಲಾತಿ ನೀಡಲಾಗಿದೆ. ಸಂವಿಧಾನ ಶಿಲ್ಪಿ ಡಾ. ಅಂಬೇಡ್ಕರರು ಮೀಸಲಾತಿ ನೀಡುವಾಗ ಪರಿಶಿಷ್ಟ ಜಾತಿ ಹಾಗೂ ಪಂಗಡಗಳಲ್ಲಿ ೬೩೦ ಜಾತಿ- ಉಪಜಾತಿಗಳನ್ನು ಗುರುತಿಸಿ, ಅವರಿಗೆ ಶಿಕ್ಷಣ, ಸರ್ಕಾರಿ ಸೇವೆ ಹಾಗೂ ರಾಜಕೀಯ ಸೇರಿದಂತೆ ಸೌಲಭ್ಯ ನೀಡಲು ಸೂಚಿಸಿದ್ದರು. ಆದರೆ, ಸ್ವಾತಂತ್ರ್ಯ ದೊರೆತು ೫೦ ವರ್ಷಗಳಾದರೂ ಈ ಎಲ್ಲ ವರ್ಗದವರಿಗೆ ಈ ಸೌಲಭ್ಯಗಳು ದೊರೆಯುತ್ತಿಲ್ಲ. ಕೇವಲ ೨೮ ಜಾತಿಯವರು ಮಾತ್ರ ಮೀಸಲಾತಿ ಸೌಲಭ್ಯ ಪಡೆಯುತ್ತಿದ್ದಾರೆ. ಇದರಲ್ಲಿ ಪ್ರಮುಖವಾಗಿ ಬಹುಸಂಖ್ಯಾತರಾಗಿರುವ ಮಾದಿಗರನ್ನು ಕಡೆಗಣಿಸಲಾಗುತ್ತಿದೆ ಎಂದಿದ್ದರು ಮಂದಾ ಕೃಷ್ಣಮಾದಿಗ. ಹರಿಜನರಲ್ಲಿ ಅನಾದಿಕಾಲದಿಂದಲೂ ಮೀಸಲಾತಿಯಲ್ಲಿ ಅನ್ಯಾಯವಾಗುತ್ತಿರುವುದು ಮಾದಿಗರಿಗೇ. ಪರಿಶಿಷ್ಟ ವರ್ಗಕ್ಕೆ ನೀಡಿರುವ ಮೀಸಲಾತಿಯಲ್ಲಿ ಪ್ರತ್ಯೇಕ ಮೀಸಲಾತಿ ನೀಡದಿದ್ದಲ್ಲಿ ಪ್ರತ್ಯೇಕ ರಾಜಕೀಯ ಪಕ್ಷವನ್ನು ರಚಿಸಿ ಹೋರಾಟ ನಡೆಸಬೇಕಾದ ಅಗತ್ಯವಿದೆ. ಮಾದಿಗ ಜನಾಂಗಕ್ಕೆ ನಿರಂತರವಾಗಿ ಆಗುತ್ತಿರುವ ಶೋಷಣೆಯನ್ನು ತಡೆಯಲು ಮಾದಿಗ ದಂಡೋರ ಸ್ಥಾಪನೆಗೊಂಡಿದೆ; ರಾಜಕೀಯ ಅಥವಾ ಅಧಿಕಾರದ ಆಸೆಗಾಗಿ ಅಲ್ಲ. ೧೯೯೬ರಲ್ಲಿ ಸ್ಥಾಪನೆಗೊಂಡ ಮಾದಿಗ ದಂಡೋರ ಇಲ್ಲಿಯವರೆಗೆ ೧೫ ಕೋಟಿಗೂ ಹೆಚ್ಚು ಮಂದಿಯನ್ನು ಸಂಘಟಿಸಿದೆಯೆಂಬ ವಿವರಣೆ ನೀಡಿದ್ದರು.

ಆಂಧ್ರದಲ್ಲಿ ಪರಿಶಿಷ್ಟರ ಸಂಖ್ಯೆ ೧ ಕೋಟಿ, ೨೦ ಲಕ್ಷ ಇದ್ದು, ಇವರಲ್ಲಿ ಮಾದಿಗರ ಸಂಖ್ಯೆ ೭೦ ಲಕ್ಷ. ಆದರೆ ಇವರಿಗೆ ಮೀಸಲಾತಿ ಸೌಲಭ್ಯ ದೊರೆತಿರುವುದು ಶೇ. ೨ ರಷ್ಟು ಮಾತ್ರ. ೪೦ ಲಕ್ಷ ಜನಸಂಖ್ಯೆ ಇರುವ ಚಲವಾದಿಗಳಿಗೆ ಶೇ. ೧೩ ರಷ್ಟು ಮೀಸಲಾತಿ ದಕ್ಕಿದೆ. ಉಳಿದ ೧೦ ಲಕ್ಷ ಜನರಿಗೆ ಶೇ. ೭ರಷ್ಟು ಮೀಸಲಾತಿ ದಕ್ಕಿದ್ದು, ಬಹು ಸಂಖ್ಯಾತರಾದ ಮಾದಿಗರಿಗೆ ಮೀಸಲಾತಿಯಲ್ಲಿ ವಂಚನೆಯಾಗಿದೆ. ಆಂಧ್ರದಲ್ಲಿ ಮೀಸಲಾತಿ ಮರುಹಂಚಿಕೆಗಾಗಿ ನೇಮಿಸಿದ್ದ ನ್ಯಾಯಮೂರ್ತಿ ಪಿ. ರಾಮಚಂದ್ರರಾಜು ನೇತೃತ್ವದ ಆಯೋಗ ೧೯೯೭ ಮೇ ತಿಂಗಳಲ್ಲಿ ನೀಡಿದ ವರದಿಗೆ ಶಾಸನಸಭೆಯಲ್ಲಿ ಸರ್ವಪಕ್ಷಗಳು ಒಮ್ಮತದಿಂದ ಅನುಮೋದನೆ ನೀಡಿದ್ದವು. ಆದರೆ ಮುಖ್ಯಮಂತ್ರಿ ಚಂದ್ರಬಾಬುನಾಯ್ಡು ಪರಿಶಿಷ್ಟ ಸಮುದಾಯದಲ್ಲಿ ಒಡೆದು ಆಳುವ ನೀತಿ ಅನುಸರಿಸಿದ್ದರಿಂದ, ರಿಟ್ ಪುರಸ್ಕರಿಸಿದ ಹೈಕೋರ್ಟ್ ಮೀಸಲಾತಿ ವರ್ಗೀಕರಣ ಮಾಡುವ ಹಕ್ಕು ರಾಜ್ಯ ಸರ್ಕಾರಕ್ಕೆ ಇಲ್ಲವೆಂದು

community. 'Dandora' as this mode of communication is known, is now once again being resorted to by a section of the Dalits. This time the 'Dandora' is being sounded to broadcast the unhappiness of one of the sub-castes among them, the Madigas, and to warn of an agitation if the injustice done to them in the past four decades of preservation is not set right at least now" - R. Akhileshwari, 'Strains behind the Drumbeats', **Deccan Herald,** August 25, 1996.

ತೀರ್ಪು ನೀಡಿತು. ವಾಸ್ತವದಲ್ಲಿ, ಮಾದಿಗರ ಮೀಸಲಾತಿ ಬೇಡಿಕೆಗೆ ತಡೆಯಾಜ್ಞೆ ತಂದವರು ಪರಿಶಿಷ್ಟ ಜಾತಿ ಹೆಸರಿನಲ್ಲಿ ಈಗಾಗಲೇ ಸೌಲಭ್ಯ ಪಡೆಯುತ್ತಿರುವವರೇ.

ಅಲ್ಲದೆ, ಕೇಂದ್ರದ ಪರಿಶಿಷ್ಟ ಜಾತಿ-ಬುಡಕಟ್ಟುಗಳ ಆಯೋಗದ ಅಧ್ಯಕ್ಷರಾಗಿದ್ದ ಎನ್. ವೈ. ಹನುಮಂತಪ್ಪ ನೇತೃತ್ವದ ಸಮಿತಿಯ ವರದಿಯಿಂದಲೂ ಮಾದಿಗ ಜನಾಂಗಕ್ಕೆ ಅನ್ಯಾಯವಾಗಿರುವುದುಂಟು. ಏಕೆಂದರೆ ಆ ವರದಿಯಲ್ಲಿ ಹೆಚ್ಚು ಅನುಕೂಲ ಕಲ್ಪಿಸಲಾಗಿರುವುದು ಚಲವಾದಿಗಳಿಗೇ. ಇದನ್ನು ಪ್ರತಿಭಟಿಸುವುದರೊಡನೆ, ಚಿತ್ರದುರ್ಗದಲ್ಲಿ ಮಾದಿಗರ ಬೃಹತ್ ಪ್ರಮಾಣದ ಸಮಾವೇಶ ನಡೆಸಿ, ಕರ್ನಾಟಕದಲ್ಲಿಯೂ ಆಗಿರುವ ಮೀಸಲಾತಿ ತಾರತಮ್ಯಗಳ ಬಗೆಗೆ ಜನಜಾಗೃತಿ ಮೂಡಿಸುವ ಕಾರ್ಯಕ್ರಮ ಹಮ್ಮಿಕ್ಕೊಳ್ಳಬೇಕು; ಆಂಧ್ರದ ಮೀಸಲಾತಿ ವರ್ಗೀಕರಣ ಪ್ರಸ್ತಾವನೆಗೆ ರಾಷ್ಟ್ರಪತಿಗಳ ಒಪ್ಪಿಗೆ ದೊರೆತ ನಂತರ, ಕರ್ನಾಟಕದಲ್ಲಿಯೂ ಈ ಮಾದರಿಯಲ್ಲಿ ಮೀಸಲಾತಿ ಜಾರಿಗೊಳಿಸುವಂತೆ ಒತ್ತಾಯಿಸಿ ಹೋರಾಟ ಆರಂಭಿಸಬೇಕೆಂತಲೂ ಮಂದ್ಾ ಕೃಷ್ಣ ಮಾದಿಗ ಅವರು ತಮ್ಮ ಮುಂದಿನ ಹೋರಾಟದ ಸೂಚನೆ ನೀಡಿದ್ದುದುಂಟು. ಅವರು ಪ್ರತಿಪಾದಿಸಿದಂತೆ, ಬೇರೆಲ್ಲಾ ಜಾತಿ - ಜನಾಂಗದವರು ತಮ್ಮ ಹೆಸರಿನ ಮುಂದೆ ಜಾತಿ ಹೆಸರು ಇಟ್ಟುಕೊಳ್ಳುವಂತೆ ಮಾದಿಗರೂ ಹಾಗೆ ಕರೆದುಕೊಳ್ಳಲು ಹಿಂಜರಿಯದೆ ಆತ್ಮಾಭಿಮಾನ ರೂಢಿಸಿಕೊಂಡು ತಮಗೆ ಸಿಗಬೇಕಾದ ನ್ಯಾಯಾಯುತ ಹಕ್ಕುಗಳಿಗಾಗಿ ಹೋರಾಡಬೇಕು. ಭರತನಿಂದ ಭಾರತ ಎಂಬ ಹೆಸರು ಪಡೆದ ಈ ದೇಶ ಹಿಂದೆ ಜಂಬೂದ್ವೀಪ ಎಂದು ಕರೆಸಿಕೊಳ್ಳುತ್ತಿತ್ತು. ನಮ್ಮ ಪೂರ್ವಜರಿಂದ ಜಾಂಬವರ ನಾಡಾಗಿದ್ದ ಈ ದೇಶ ಮಾದಿಗರಿಗೇ ಸೇರಿದ್ದು. ಈ ದೇಶದಲ್ಲಿ ಬಹುಸಂಖ್ಯಾತರಾದ ಮಾದಿಗರು ಇತರ ಜಾತಿಯವರ ವಿರುದ್ಧವಾಗಿಲ್ಲ. ಸಮಾಜಿಕ ನ್ಯಾಯಕ್ಕಾಗಿ ಮಾದಿಗರ ಈ ಸಂಘಟನೆ ಅನಿವಾರ್ಯವಾಗಿದೆ.

೧೯೯೬ ಅಕ್ಟೋಬರ್‌ನಲ್ಲಿ ಆಂಧ್ರಪ್ರದೇಶ ಸರ್ಕಾರದ ರಾಜ್ಯ ಸಚಿವ ಸಂಪುಟವು 'ಆಂಧ್ರಪ್ರದೇಶ ಪರಿಶಿಷ್ಟ ಜಾತಿಗಳ (ಮೀಸಲಾತಿ ಸುಧಾರಣೆ) ಸುಗ್ರೀವಾಜ್ಞೆ೧೯೯೬' ಎಂಬ ಹೆಸರಿನ ಸುಗ್ರೀವಾಜ್ಞೆಯ ಕರಡು ಪ್ರತಿ ಒಪ್ಪಿಗೆಗಾಗಿ ರಾಜ್ಯಪಾಲರಿಗೆ ಕಳುಹಿಸಿತು. ರಾಜ್ಯಪಾಲರು ಸಂವಿಧಾನದ ೨೧೩ನೇ ವಿಧಿಯ ಒಂದನೇ ಪರಿಚ್ಛೇದದ ಅನ್ವಯ ರಾಷ್ಟ್ರಪತಿಗಳ ಸಲಹೆ ಕೇಳಿದರು. ರಾಷ್ಟ್ರಪತಿಗಳು ಈಚೆಗೆ ತಮ್ಮ ಒಪ್ಪಿಗೆ ಸೂಚಿಸಿದ್ದಾರೆ (ಡಿಸೆಂಬರ್ ೧೯೯೬). ಇದರ ಪ್ರಕಾರ ಇದೀಗ ಆಂಧ್ರಪ್ರದೇಶದ ರಾಜ್ಯಪಾಲರು ಸುಗ್ರೀವಾಜ್ಞೆಗೆ ತಮ್ಮ ಅಂಕಿತ ಹಾಕಿದ್ದಾರೆ. ಈ ಆಜ್ಞೆಯ ಪ್ರಕಾರ ಸರ್ಕಾರಿ ಹುದ್ದೆ ಹಾಗೂ ಶೈಕ್ಷಣಿಕ ಸಂಸ್ಥೆಗಳ ಪ್ರವೇಶಕ್ಕಾಗಿ ಆಂಧ್ರಪ್ರದೇಶ ಮೊದಲಬಾರಿಗೆ ಪರಿಶಿಷ್ಟ ಜಾತಿಗಳನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಿ ಹೊರಡಿಸಿದ ಸುಗ್ರೀವಾಜ್ಞೆಗೆ ಜೀವ ಬಂದಂತಾಗಿದೆ. ಮೇಲೆಯೇ ನೋಡಿದಂತೆ, ಈ ಸುಗ್ರೀವಾಜ್ಞೆ ಪ್ರಕಾರ ಪರಿಶಿಷ್ಟ ಜಾತಿಗಳನ್ನು ಎ.ಬಿ.ಸಿ.ಡಿ. ಎಂದು ವರ್ಗೀಕರಿಸಲಾಗಿದೆ. ಈ ವರ್ಗೀಕರಣದ ಪರ ಮತ್ತು ವಿರುದ್ಧ ಹೋರಾಟವ ನ್ನಾರಂಭಿಸಿದ್ದ ಮಾದಿಗ ಮತ್ತು ಮಾಲರ ನಡುವೆ ಆರಂಭಗೊಂಡಿದ್ದ ಹೋರಾಟ ಈಗ ಅಂತ್ಯ ಕಂಡಂತಾಗಿದೆ. ಈ ಪರಿಶಿಷ್ಟ ಜಾತಿಗೆ ಸೇರಿದ ಮಾದಿಗರಿಗೇ ಅಂತಿಮವಾಗಿ ಜಯ ದೊರೆತಂತಾಗಿದೆ; ಎಮ್.ಆರ್.ಪಿ.ಎಸ್.ನ ಹೋರಾಟ ಕೊನೆಯಾದಂತಾಗಿದೆ. ಹಾಗೆಯೇ, ಇದು ಹೊಸ ವಿವಾದವನ್ನೂ ಹುಟ್ಟು ಹಾಕಿರುವುದುಂಟು.

ಆಂಧ್ರಪ್ರದೇಶದ ಮಾಲ ಸಂಘಟನೆಯಾದ ಮಾಲ ಮಹಾನಾಡು ಈಗಾಗಲೇ ಈ ಸುಗ್ರೀವಾಜ್ಞೆಯ ವಿರುದ್ಧ ತನ್ನ ವಿರೋಧ ವ್ಯಕ್ತಪಡಿಸಿದೆ. ೧೯೯೯ ಡಿಸೆಂಬರ್‌ನಲ್ಲಿ ಈ ಸಂಘಟನೆ ಕರೀಂನಗರದಲ್ಲಿ ಸಭೆ ಸೇರಿದ್ದು, ತನ್ನ ಮುಂದಿನ ಹೋರಾಟ ಕುರಿತು ಚರ್ಚಿಸಿದೆ. ಆಂಧ್ರ ಸರ್ಕಾರ ಕೈಗೊಂಡಿರುವ ಪ್ರತ್ಯೇಕ ಮೀಸಲಾತಿ ವರ್ಗೀಕರಣವು ಸಂವಿಧಾನ ವಿರೋಧಿ ತೀರ್ಮಾನವಾಗಿದ್ದು, ಮಾಲ ಮತ್ತು ಮಾದಿಗರ ನಡುವಣ ಒಳಭೇದವನ್ನು ಇನ್ನಷ್ಟು ಹೆಚ್ಚಿಸಿದೆಯೆಂದು ವ್ಯಕ್ತಪಡಿಸಿದೆ. ರಾಜಕೀಯ ಲಾಭಕ್ಕಾಗಿ ತೆಲುಗುದೇಶಂ ಪಕ್ಷ ಇಂಥಾ ಒಡೆದು ಆಳುವ ನೀತಿ ಅನುಸರಿಸಿದೆಯೆಂದು ದೂರಿದೆ. ಮಾಲ ಮಹಾನಾಡು ನಾಯಕರು ವಾದಿಸುವಂತೆ, ರಾಷ್ಟ್ರಪತಿಯವರು ಒಪ್ಪಿರುವ ಈ ಮೀಸಲಾತಿ ವರ್ಗೀಕರಣ ಸುಗ್ರೀವಾಜ್ಞೆಯನ್ನು ಸಂವಿಧಾನದ ತಿದ್ದುಪಡಿ ಮೂಲಕವೇ ಅನುಮೋದಿಸಬೇಕಾಗುತ್ತದೆ. ಆದ್ದರಿಂದ ಇದು ಬಹುದೊಡ್ಡ ನ್ಯಾಯಾಂಗ ವಿವಾದವನ್ನು ಹುಟ್ಟುಹಾಕಲಿದೆ. ಆಂಧ್ರಪ್ರದೇಶದ ಹೈಕೋರ್ಟ್ ಈ ಪ್ರತ್ಯೇಕ ಮೀಸಲಾತಿ ವರ್ಗೀಕರಣವನ್ನು ತಿರಸ್ಕರಿಸಿರುವಾಗ, ಪರಿಶಿಷ್ಟ ಜಾತಿ- ಪಂಗಡಗಳ ರಾಷ್ಟ್ರೀಯ ಆಯೋಗವೂ ಪೂರಕ ಅಭಿಪ್ರಾಯ ನೀಡಲು ನಿರಾಕರಿಸಿರುವಾಗ, ಈ ತೀರ್ಮಾನ ಸಾಧುವಲ್ಲವೆಂಬ ಅಭಿಪ್ರಾಯ ಅವರದು. ದಲಿತರ ಸಂಘಟನೆ ಸದ್ಯದ ತುರ್ತು ಅಗತ್ಯ; ಎಮ್. ಆರ್.ಪಿ.ಎಸ್., ಪ್ರಮುಖ ವಿಷಯಗಳಾದ ಜನಸಂಖ್ಯಾನುಗುಣವಾಗಿ ಮೀಸಲಾತಿ ನಿಗದಿಗೆ ಹಾಗೂ ಖಾಸಗಿ ವಲಯಗಳಲ್ಲಿ ಮೀಸಲಾತಿ- ಇವುಗಳಿಗೆ ಒತ್ತಾಯಿಸದೆ, ಕೇವಲ ಸಣ್ಣಪುಟ್ಟ ಲಾಭಗಳತ್ತ ಗಮನ ಹರಿಸಿದೆಯೆಂದು ಟೀಕಿಸಿದ್ದಾರೆ. ಹಾಗೆಯೇ ಉದಾರೀಕರಣ ಮತ್ತು ಖಾಸಗೀಕರಣ ನೀತಿಗಳ ಅನುಸರಣೆಯ ನೆಲೆಯಲ್ಲಿ ದಲಿತರು ದೊಡ್ಡ ಅಡ್ಡಿಯಾಗಿರುವುದನ್ನು ನಿವಾರಿಸಲು ಬಿ.ಜೆ.ಪಿ. ಮತ್ತು ತೆಲುಗುದೇಶಂ ಸರ್ಕಾರಗಳು ಇಂಥಾ ಹುನ್ನಾರ ನಡೆಸಿವೆಯೆಂದು ಆರೋಪಿಸಿದ್ದಾರೆ. ಈ ಮಧ್ಯೆ, ಎಮ್.ಆರ್.ಪಿ.ಎಸ್. ಸಂಘಟನೆಯ ರಾಜ್ಯಾಧ್ಯಕ್ಷ ಮಂದಾ ಕೃಷ್ಣಮಾದಿಗ ಅವರು ಪ್ರತ್ಯೇಕ ಮೀಸಲಾತಿ ಆಜ್ಞೆಯ ಜಾರಿಗೆ ಸರ್ಕಾರ ಆದೇಶ ಹೊರಡಿಸಬೇಕೆಂದು ಒತ್ತಾಯಿಸಿದ್ದಾರೆ. ಇದರ ನಂತರದ ಬೆಳವಣಿಗೆಗಳನ್ನು ಕಾದು ನೋಡಬೇಕಿದೆ.

* * *

ಮಾದಿಗರಿಗೆ ಪ್ರತ್ಯೇಕ ಮೀಸಲಾತಿ ನೀಡದಿದ್ದರೆ ರಾಜಕೀಯ ಹೋರಾಟ ನಡೆಸುವ ಬಗೆಗೆ ಕರ್ನಾಟಕದ ಮಾದಿಗ ಜನಾಂಗದವರೂ ಘೋಷಿಸಿರುವುದು ಈ ಹಿನ್ನೆಲೆಯಲ್ಲಿಯೇ. ೧೯೯೭ ನವೆಂಬರ್ ೨ ರಂದು ಧಾರವಾಡದಲ್ಲಿ ಎನ್. ಕೆ. ಹೆಡ್ ಅವರ ಅಧ್ಯಕ್ಷತೆಯಲ್ಲಿ ನಡೆದ 'ಕರ್ನಾಟಕ ರಾಜ್ಯ ಮಾದಿಗರ ಹೋರಾಟ ಸಮಿತಿ'ಯ ಸಭೆ ಕರ್ನಾಟಕದಲ್ಲಿ ಆಂಧ್ರ ಮಾದರಿಯ ಹೋರಾಟದ ಹೊಳಹುಗಳನ್ನು ತೋರಿತು. ಆಂಧ್ರದಿಂದ ಬಂದ ಡಾ. ಮುತ್ತಯ್ಯ ಮಾದಿಗ, ಕೃಪೀಕರ ಮಾದಿಗ ಅವರು ಅಂಕಿ ಸಂಖ್ಯೆ ಹಾಗೂ ತಾವು ನಡೆಸಿದ ಹೋರಾಟ ವಿವರಿಸಿದ ಬಗೆಗೆ ಮೋಹನ ನಾಗಮ್ಮನವರ ಅವರು ದಾಖಲಿಸಿದ್ದಾರೆ (ವೀರಭದ್ರಪ್ಪ, ಜಾಪ್ಪವಿ : ೧೯೯೮ : ೨೩೬). ಇಷ್ಟಕ್ಕೂ, ಕರ್ನಾಟಕದಲ್ಲಿ ಮಾದಿಗರ ಸಂಘಟನೆ ಇದೇ ಮೊದಲೇನಲ್ಲ. ಈ ಹಿಂದೆಯೂ ಎಂ. ಪಿ. ಗುಂಡಪ್ಪ ಕೊರವರ ನೇತೃತ್ವದ ಕರ್ನಾಟಕ ಪ್ರದೇಶ ಮಾದಿಗರ ಸಂಘ, ಡಿ. ಮಂಜುನಾಥ್ ನೇತೃತ್ವದ ಅಖಿಲ ಕರ್ನಾಟಕ ಆದಿ ಜಾಂಬವ ಸಂಘ, ದಿ. ಜೋಗಣ್ಣನವರ ನೇತೃತ್ವದ ಜಾಂಬವ ಸಂಘ

ಗಳಿದ್ದವು. ಅವರ್‍ಯಾರೂ ಇಷ್ಟೊಂದು ನಿಖರವಾದ ಪ್ರತ್ಯೇಕತೆಯ ವಾದ ಮುಂದಿಟ್ಟಿರಲಿಲ್ಲ. ಮಾದಿಗ ಸಮುದಾಯಕ್ಕೆ ಅನ್ಯಾಯವಾಗಿದೆ ನಿಜ, ಆದರೆ ಆಂಧ್ರ ಪ್ರದೇಶದಷ್ಟಲ್ಲವೆಂತಲೂ ಅವರು ವ್ಯಾಖ್ಯಾನಿಸುತ್ತಾರೆ.

ಪ್ರತ್ಯೇಕ ಮೀಸಲಾತಿ ಬೇಡಿಕೆಯ ನಿಟ್ಟಿನಲ್ಲಿ ಈಗಾಗಲೇ ಅಸ್ತಿತ್ವಕ್ಕೆ ಬಂದಿರುವ ಸಂಘ-ಸಂಸ್ಥೆಗಳೆಂದರೆ, ಮಾದಿಗ ದಂಡೋರ ಮೀಸಲಾತಿ ಹೋರಾಟ ಸಮಿತಿ (ಬೆಂಗಳೂರು), ಅಖಿಲ ಕರ್ನಾಟಕ ಆದಿ ಜಾಂಬವ ಸಂಘ (ಬೆಂಗಳೂರು), ಮಾದಿಗ ದಂಡೋರ ಮಾದಿಗ ಮೀಸಲಾತಿ ಹೋರಾಟ ಸಮಿತಿ (ಬಳ್ಳಾರಿ), ಅಖಿಲ ಕರ್ನಾಟಕ ಆದಿ ಜಾಂಬವ ಸಂಘ (ಬಳ್ಳಾರಿ), ಆದಿ ಜಾಂಬವ ಐಕ್ಯತಾ ವೇದಿಕೆ (ಬಳ್ಳಾರಿ), ಕರ್ನಾಟಕ ಮಾದಿಗ ರಿಸರ್ವೇಶನ್ ಹೋರಾಟ ಸಮಿತಿ (ರಾಯಚೂರು), ಅಖಿಲ ಕರ್ನಾಟಕ ಆದಿ ಜಾಂಬವ (ಮಾದಿಗರ) ಸಂಘ (ಕುಷ್ಟಗಿ), ಕರ್ನಾಟಕ ಮಾದಿಗ ದಂಡೋರ ಮಾದಿಗ ಮೀಸಲಾತಿ ಹೋರಾಟ ಸಮಿತಿ (ಚಿತ್ರದುರ್ಗ), ಕರ್ನಾಟಕ ರಾಜ್ಯ ಹರಿಜನ ಹೋರಾಟ ಸಮಿತಿ (ಹಿರಿಯೂರು), ಜಿಲ್ಲಾ ಆದಿಕರ್ನಾಟಕ ಜನಾಂಗದ ಸಂಘ (ತುಮಕೂರು) ಮೊದಲಾದುವು. ಹಾಗೆಯೇ, ಈ ಸಂಘಟನೆಗಳು ಕರ್ನಾಟಕಾದ್ಯಂತ ಶಾಖೋಪಶಾಖೆಗಳಲ್ಲಿ ನೆಲೆಗೊಳ್ಳುತ್ತಿರುವುದನ್ನೂ ನೋಡಬಹುದು. ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳ ಮಾದಿಗರ ಪ್ರತ್ಯೇಕ ಮೀಸಲಾತಿ ಹೋರಾಟ ಸಮಿತಿಯೂ ಅಸ್ತಿತ್ವಕ್ಕೆ ಬಂದಿದೆ. ಅಲ್ಲದೆ, ಈ ಸಂಘಟನೆಗಳು ಈಗಾಗಲೇ ಸ್ವಾಭಿಮಾನ ಸಮಾವೇಶ, ಬೃಹತ್ ಸಮ್ಮೇಳನ, ತರಬೇತಿ ಶಿಬಿರ, ಜಾಂಬವ ಕಲಾಮೇಳ, ವಿಚಾರ ಸಂಕಿರಣ ಇತ್ಯಾದಿಗಳನ್ನು ಏರ್ಪಡಿಸಿ ಜನಜಾಗೃತಿ ಕಾರ್ಯದಲ್ಲಿ ವ್ಯವಸ್ಥಿತವಾಗಿ ತೊಡಗಿಸಿಕೊಂಡಿವೆ.

"ಡಂಗೂರ ಸಾರುತ್ತಿದ್ದೇವೆ, ಜಾತೀಯತೆ ತುಂಬಿರುವ ಈ ದೇಶದಲ್ಲಿ ಮಾದಿಗರಿಗೆ ಅನ್ಯಾಯವಾಗಿದೆ ಎಂದು... ಡಂಗೂರ ಸಾರುತ್ತಿದ್ದೇವೆ ನಮಗೆ ಪ್ರತ್ಯೇಕ ಮೀಸಲಾತಿ ಕೊಡಿ ಎಂದು" ಎಂಬ ಘೋಷಣೆಯೊಡನೆ, 'ದಂಡೋರ' ವೃತ್ತಿನೆಲೆಯ ಆಶಯವನ್ನು ಮಾದಿಗ ಜನಾಂಗ ತನ್ನ ಹೋರಾಟಕ್ಕೂ ಅನ್ವಯಿಸಿಕೊಳ್ಳುತ್ತಿರುವುದು ಗಮನಾರ್ಹ. ಆಂಧ್ರದಲ್ಲಿ ಪ್ರತ್ಯೇಕ ಮೀಸಲಾತಿಗೆ ನಡೆದ ಹೋರಾಟದ ನೆಲೆ-ಹಿನ್ನೆಲೆಗಳನ್ನು ಗಮನಿಸಿರುವ ಕರ್ನಾಟಕದ ಮಾದಿಗ ಜನಾಂಗದವರು ತಮ್ಮ ಹೋರಾಟದ ಸ್ವರೂಪವನ್ನು ನಿರ್ಧರಿಸುವಲ್ಲಿ ತೀರಾ ಗಂಭೀರವಾಗಿ ವರ್ತಿಸುತ್ತಿರುವುದು ಸ್ಪಷ್ಟಪಡುತ್ತದೆ. ಆಂಧ್ರ ಮಾದರಿಯಲ್ಲಿ ಕರ್ನಾಟಕದಲ್ಲಿಯೂ ಹೋರಾಟ ನಡೆಸಲು ಸಿದ್ಧತೆ ನಡೆಸಲಾಗುತ್ತಿದೆ. ಕರ್ನಾಟಕದಲ್ಲಿರುವ ೧.೩೫ ಕೋಟಿ ಪರಿಶಿಷ್ಟರಲ್ಲಿ ೮೫ ಲಕ್ಷ ಮಾದಿಗರಿದ್ದು, ಹೊಲೆಯರ ಸಂಖ್ಯೆ ೫೫ ಲಕ್ಷವೆಂದು ಅಂಕಿ-ಅಂಶಗಳನ್ನು ಮುಂದೊಡ್ಡಲಾಗುತ್ತಿದೆ. ಆಂಧ್ರಕ್ಕಿಂತಲೂ ಕರ್ನಾಟಕದಲ್ಲಿ ಮಾದಿಗರಿಗೆ ಹೆಚ್ಚು ಅನ್ಯಾಯವಾಗಿದೆಯೆಂಬುದೇ ಮುಖ್ಯ ಆರೋಪ. ಕಳೆದ ಬಾರಿ ಪರಿಶಿಷ್ಟರಲ್ಲಿ ಶೇ. ೫೭.೩ ರಷ್ಟಿರುವ ಮಾದಿಗರ ಶಾಸಕರು ಕೇವಲ ೬ ಜನರಿದ್ದರೆ, ಹೊಲೆಯರಲ್ಲಿ ೧೪ ಜನರಿದ್ದರೆಂಬುದನ್ನು; ಸಚಿವ ಸಂಪುಟದ ಹೊಲೆಯರು ೪ ಜನರಿದ್ದರೆ, ಒಬ್ಬರು ಮಾತ್ರ ಮಾದಿಗದ್ದರೆಂಬುದನ್ನು ಸೋದಾಹರಣವಾಗಿ ತೋರಿಸಲಾಗಿದೆ. ಪರಿಶಿಷ್ಟರಲ್ಲಿ ಜನಸಂಖ್ಯೆಗನುಗುಣವಾಗಿ ಮೀಸಲಾತಿ ಸಿಕ್ಕಿದ್ದರೆ ಮಾದಿಗರು ಹೋರಾಟ

ಕೈಗೊಳ್ಳುವ ಅಗತ್ಯ ಎಲ್ಲಿರುತ್ತಿತ್ತು? ಅವರು ಬಹುಸಂಖ್ಯಾತರಾಗಿದ್ದರೂ ಅವರಿಗೆ ಅನ್ಯಾಯವಾಗಿದೆ: ಆದ್ದರಿಂದ ಪ್ರತ್ಯೇಕ ಮೀಸಲಾತಿ ಬೇಡಿಕೆಯನ್ನು ಈಗ ಬಲವಾಗಿ ಮಂಡಿಸಲಾಗುತ್ತಿದೆಯೆಂಬ ಸಮರ್ಥನೆ ದೊರಕುತ್ತದೆ.

ವಾಸ್ತವದಲ್ಲಿ, ಕರ್ನಾಟಕ ಮಾದಿಗ ದಂಡೋರ ಅಥವಾ ಆದಿ ಜಾಂಬವ ಮಾದಿಗರ ನಿರ್ದಿಷ್ಟ ಬೇಡಿಕೆಗಳೇನು? ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಹಿಂದುಳಿದಿರುವ ಮಾದಿಗರಿಗೆ ಪ್ರತ್ಯೇಕ ಮೀಸಲಾತಿ ಜಾರಿಗೆ ತರುವುದು; ಈ ನಾಡಿನ ಮೂಲನಿವಾಸಿಗಳಾದ ಆದಿ ಜಾಂಬವರು (ಮಾದಿಗ, ಮಾದಿಗದಾಸ, ದೊಡ್ಡಮಾದಿಗ, ಚಿಕ್ಕಮಾದಿಗ, ತೋಟಿ ಮಾದಿಗ, ಚೌಡಿಕೆ ಮಾದಿಗ) ಸರ್ವವಿಧದಿಂದಲೂ ಶೋಷಣೆಗೆ ಒಳಗಾಗಿದ್ದು, ರಾಜ್ಯದ ಒಟ್ಟು ಜನಸಂಖ್ಯೆಯ ಶೇ. ೨೪ ರಷ್ಟಿರುವ ಈ ಜನಾಂಗದವರಿಗೆ ಶೇ. ೯ರಷ್ಟು ಪ್ರತ್ಯೇಕ ಮೀಸಲಾತಿ ಜಾರಿಗೆ ತರುವುದು; ರಾಜ್ಯದಲ್ಲಿರುವ ೧.೩೫ ಕೋಟಿ ಪರಿಶಿಷ್ಟರಲ್ಲಿ ೮೫ ಲಕ್ಷ ಮಾದಿಗರು ಮತ್ತು ಮಾದಿಗ ಉಪಜಾತಿಯವರಿದ್ದಾರೆ. ಶೇ. ೧೫ ರಷ್ಟು ಮೀಸಲಾತಿಯಲ್ಲಿ ಮಾದಿಗರು ನ್ಯಾಯವಂಚಿತರಾಗಿದ್ದಾರೆ. ಈ ಅಸಮತೋಲನ ಸರಿಪಡಿಸಲು ಜನಸಂಖ್ಯೆ ಆಧಾರದ ಮೇಲೆ ಮೀಸಲಾತಿಯನ್ನು ಎ. ಬಿ. ಸಿ. ಡಿ. ವಿಧದಲ್ಲಿ ಹಂಚಿ ಮಾದಿಗರಿಗೆ ನ್ಯಾಯ ಸಿಗುವಂತೆ ಮಾಡುವುದು. ಅಂದರೆ, ಪರಿಶಿಷ್ಟ ಜಾತಿ ಮೀಸಲಾತಿಯಲ್ಲಿ ಆಯಾ ಉಪಜಾತಿಗೆ ಅನುಗುಣವಾಗಿ ಮೀಸಲಾತಿ ಪ್ರಮಾಣವನ್ನು ವರ್ಗೀಕರಣ ಮಾಡಿರುವ ಆದೇಶ ಪುನಾ ಜಾರಿಗೆ ಬರುವಂತೆ ನೋಡಿಕೊಳ್ಳುವುದು [ಈಗಾಗಲೇ ಪರಿಶಿಷ್ಟ ಜಾತಿಗಳು ಎ. ಬಿ. ಸಿ. ಡಿ. ವರ್ಗೀಕರಣದ ಹೋರಾಟವನ್ನು ಆಂಧ್ರಪ್ರದೇಶದಲ್ಲಿ (ಮಾದಿಗರು) ಮತ್ತು ತಮಿಳುನಾಡಿನಲ್ಲಿ (ಚೆಕ್ಲಿಯಾರ್) ಆರಂಭಿಸಿ ಯಶಸ್ವಿಯಾಗಿರುವುದನ್ನು ಇಲ್ಲಿ ಗಮನಿಸಬೇಕು]; ಆದಿ ಜಾಂಬವ ಪರಿಶಿಷ್ಟ ಜನಾಂಗದ ಅಭಿವೃದ್ಧಿಗೆ ಪ್ರತ್ಯೇಕ ನಿಗಮವೊಂದನ್ನು ರಚಿಸುವುದು; ಚರ್ಮವೃತ್ತಿಯವರಿಗೆ ವಿಶೇಷ ರಿಯಾಯಿತಿ ನೀಡುವುದು; ರಾಜ್ಯದಲ್ಲಿ ಸುಮಾರು ೨೫ ಸಾವಿರದಷ್ಟಿರುವ ಬ್ಯಾಕ್‌ಲಾಗ್ ಹುದ್ದೆಗಳನ್ನು ತುಂಬುವಾಗ ರಾಜ್ಯ ಸರ್ಕಾರ ಜನಸಂಖ್ಯೆಗೆ ಅನುಗುಣವಾಗಿ ಮೀಸಲಾತಿಯನ್ನು ಜಾರಿಗೆ ತಂದು ಕನಿಷ್ಠ ಶೇ. ೯.೫ ರಷ್ಟನ್ನು ಮಾದಿಗ ಜನಾಂಗಕ್ಕೆ ಮೀಸಲಿಡುವುದು; ರಾಜ್ಯದಲ್ಲಿರುವ ಮಾದಿಗ ಜನಾಂಗದ ಆರ್ಥಿಕ ಹಾಗೂ ಸಾಮಾಜಿಕ ಸಮೀಕ್ಷೆ ಕೈಗೊಂಡು ಅವರ ಅಭಿವೃದ್ಧಿ ಕಾರ್ಯದಲ್ಲಿ ಸಹಕರಿಸುವುದು; ಅಸ್ಪೃಶ್ಯರಲ್ಲಿ ಅಸ್ಪೃಶ್ಯರೆನಿಸಿರುವ ಮಾದಿಗ ಜನಾಂಗಕ್ಕೆ ಪ್ರತ್ಯೇಕ ಮೀಸಲಾತಿ ಬೇಡಿಕೆಯಿಂದ ಜಾತಿ ಜಾತಿಗಳಲ್ಲಿ ಒಡಕುಂಟಾಗುವುದರ ಬದಲಿಗೆ ಜಾತಿಗಳಲ್ಲಿ ಸಮಾನತೆ ಬೆಳೆಯುತ್ತದೆಂಬುದನ್ನು ಜನತೆಗೆ ಮನದಟ್ಟು ಮಾಡಿಸುವುದು; ಅವಜ್ಞೆಗೆ ಒಳಗಾಗಿರುವ ಮಾದಿಗರು ಸರ್ವ ರಂಗಗಳಲ್ಲೂ ಏಳಿಗೆ ಹೊಂದುವಂತಾಗಲು ರಚನಾತ್ಮಕ ಕಾರ್ಯಕ್ರಮಗಳನ್ನು ರೂಪಿಸುವುದು; ಶಿಕ್ಷಣಕ್ಷೇತ್ರದಲ್ಲಿ ಲಭ್ಯವಿರುವ ಸೌಲಭ್ಯಗಳನ್ನು ಗರಿಷ್ಠ ಪ್ರಮಾಣದಲ್ಲಿ ಬಳಸಿಕೊಳ್ಳಲು ಪ್ರಯತ್ನಿಸುವಂತೆ ಮಾಡುವುದು, ಇತ್ಯಾದಿ.

ಇಚ್ಛಾಶಕ್ತಿ ಪ್ರದರ್ಶಿಸದ ಯಾವುದೇ ವ್ಯಕ್ತಿ, ಜನಾಂಗ ಸಮಾಜದಲ್ಲಿ ತನ್ನ ಅಸ್ತಿತ್ವ ಕಳೆದುಕೊಳ್ಳುವುದಷ್ಟೆ ಅಲ್ಲ, ಆ ಜನಾಂಗ ನಶಿಸುವ ಸೂಚನೆಯೂ ಆಗಿರುತ್ತದೆ. ಈ ಮಾತು ಮಾದಿಗರಿಗೆ ಅಕ್ಷರಶಃ ಅನ್ವಯವಾಗುತ್ತದೆ. ಎಲ್ಲರ ಸುಖದಲ್ಲಿ ತನ್ನ ಸುಖ ಕಂಡುಕೊಳ್ಳುವ, ಚಾರಿತ್ರಿಕವಾಗಿ ದುಡಿಯುವವರ ಜೊತೆ ತನ್ನನ್ನು ಗುರುತಿಸಿಕೊಂಡ ಮಾದಿಗ,

ತನ್ನ ಜನಾಂಗದ ವಿಷಯದಲ್ಲಿ ಮಾತ್ರ ನಿರ್ಲಿಪ್ತಿತ ನಿಷ್ಕಾಳಜಿ ವಹಿಸಿದ್ದಕ್ಕೆ ಕಾರಣಗಳಾದರೂ ಏನು? - ಎಂಬ ಪ್ರಶ್ನೆಯನ್ನು ಎತ್ತಿದೆ ರಾಯಚೂರಿನ ಮಾದಿಗ ರಿಸರ್ವೇಶನ್ ಹೋರಾಟ ಸಮಿತಿ. ದನದ ಚರ್ಮವನ್ನು ಹದಮಾಡಿ ಚಪ್ಪಲಿಯನ್ನು ಹೊಲಿದು, ಬೀದಿಗಳಲ್ಲಿ ಕಸಗುಡಿಸಿ, ಸತ್ತ ಹೆಣವನ್ನು ಹೊತ್ತು ಮುಟ್ಟಬಾರದವರಾಗಿ ಜೀವಿಸುತ್ತಾ, ಮೇಲ್ಜಾತಿಗಳ ಹಿಡಿತಕ್ಕೆ ಗುರಿಯಾಗಿ ರಾಜಕೀಯ ಪಕ್ಷಗಳ ಬಾವುಟಗಳನ್ನು ಹೊರುತ್ತಾ ಅದರ ಕೆಳಗೆ ನಮ್ಮ ಮಾದಿಗಜಾತಿ ಶಾಶ್ವತವಾಗಿ ಸಾಯುತ್ತಾ ಬಂದಿದೆ. ಕೇವಲ ಒಂದು ಹೊತ್ತು ಹೊಟ್ಟೆ ತುಂಬಾ ಊಟವನ್ನು ತಿನ್ನಲಾಗದ ಪರಿಸ್ಥಿತಿ ಏರ್ಪಟ್ಟಿದೆ. ಈ ಜಾತಿಯ ನೋವು, ನರಳಾಟಗಳನ್ನು ಯಾವ ಪಕ್ಷವೂ ಗುರುತಿಸದೆ ಕೇವಲ ಎಲ್ಲಾ ಪಕ್ಷಗಳೂ ಮಾದಿಗರನ್ನು ಓಟ್ಸ್ ಬ್ಯಾಂಕ್‌ಗಳ ದೃಷ್ಟಿಯಲ್ಲಿ ಕಾಣುತ್ತಾ ಬಂದಿವೆ. ಜನಾಕರ್ಷಣ ಪದಕಗಳನ್ನು (ಪಕ್ಷಗಳ ಪ್ರಣಾಳಿಕೆ) ಪ್ರದರ್ಶಿಸಿ ನಮ್ಮ ಓಟುಗಳಿಗೆ ಗಾಳಾ ಹಾಕುತ್ತಾ, ನಮ್ಮ ಹಕ್ಕು - ಅಧಿಕಾರಗಳನ್ನು ಕಸಿದುಕೊಂಡು ಅಧಿಕಾರದ ಗದ್ದುಗೆಗೆ ಏರುತ್ತಾ ಬಂದಿದ್ದಾರೆ. ಆದರೆ ನಮ್ಮ ಜಾತಿಯನ್ನು ಮಾತ್ರ ಮುಟ್ಟಬಾರದವರಾಗಿಯೇ ನೋಡುತ್ತಿದ್ದಾರೆ. ಇಂಥಾ ಪರಿಸ್ಥಿತಿಯನ್ನು ನಾವು ಎಷ್ಟು ವರ್ಷಗಳ ಕಾಲ ಅನುಭವಿಸುತ್ತಾ ಬರುತ್ತಿರುವುದು? - ಎಂದು ಕೇಳುತ್ತದೆ ಹಿರಿಯೂರು ತಾಲ್ಲೂಕು ಮಾದಿಗ ದಂಡೋರ - ಕರ್ನಾಟಕ ಮಾದಿಗ ಮೀಸಲಾತಿ ಹೋರಾಟ ಸಮಿತಿ. ಹಾಗೆಯೇ, ಚಿತ್ರದುರ್ಗದ ಕರ್ನಾಟಕ ಮಾದಿಗ ದಂಡೋರ - ಮಾದಿಗ ಮೀಸಲಾತಿ ಹೋರಾಟ ಸಮಿತಿಯ ಜಿಲ್ಲಾ ಶಾಖೆ ಪ್ರಸ್ತಾಪಿಸಿರುವಂತೆ, ಅತಿ ಹೆಚ್ಚು ಜನಸಂಖ್ಯೆ ಹೊಂದಿರುವ ಮಾದಿಗರು ಮತ್ತು ಅತಿ ಹಿಂದುಳಿದಿರುವ ಇತರ ಸಣ್ಣ ಸಣ್ಣ ಜಾತಿಗಳವರು (ಮೈಕ್ರೋ ಎಸ್. ಸಿ.) ಎಲ್ಲಾ ಕ್ಷೇತ್ರಗಳಲ್ಲಿಯೂ ಎಲ್ಲಾ ಸವಲತ್ತುಗಳಿಂದ ವಂಚಿತರಾಗಿದ್ದಾರೆ. ಮುಂದೊಂದು ದಿನ ಇಡೀ ಪರಿಶಿಷ್ಟ ಜಾತಿಗಳ ಐಕ್ಯತೆಯೇ ಸ್ಫೋಟಗೊಳ್ಳುವ ಸೂಚನೆಗಳಿವೆ.

ಅಖಿಲ ಕರ್ನಾಟಕ ಮಾದಿಗ ಜನಾಂಗ ಒಕ್ಕೂಟದ ಆಶ್ರಯದಲ್ಲಿ ಬೆಂಗಳೂರಿನಲ್ಲಿ ನಡೆದ ಮಾದಿಗ ಜನಾಂಗದ ಪ್ರತಿಭಟನಾ ರ್‍ಯಾಲಿ (ನವೆಂಬರ್ ೧೯೯೯) ಹಲವಾರು ಅಂಶಗಳತ್ತ ನಮ್ಮ ಗಮನ ಸೆಳೆದಿದೆ. ಈ ಪ್ರತಿಭಟನೆಯನ್ನು 'ಶೋಷಿತ ಅಸ್ಪೃಶ್ಯ ಮಾದಿಗ'ರೆಲ್ಲರ ಸ್ವಾಭಿಮಾನದ ಸಂಕೇತವಾಗಿ, ಅಧಿಕಾರದಲ್ಲಿ ಪಾಲು ಪಡೆಯುವ ಹೋರಾಟವಾಗಿ ವಿವರಿಸಲು ಪ್ರಯತ್ನಿಸಲಾಗಿದೆ. ಪ್ರಜಾಪ್ರಭುತ್ವದಲ್ಲಿ ಜನಸಂಖ್ಯೆಗನುಸಾರವಾಗಿ ಅಧಿಕಾರದಲ್ಲಿ ಪಾಲು ಪಡೆಯುವುದು ಎಲ್ಲಾ ಶೋಷಿತ ಜಾತಿಗಳ ಹಕ್ಕು; ಇದು ಬಲಾಢ್ಯ ಜಾತಿಗಳ ಮರ್ಜಿಯೂ ಅಲ್ಲ, ಉಪಕಾರವೂ ಅಲ್ಲವೆಂಬುದನ್ನು ಈ ಸಂಘಟನೆ ಎತ್ತಿ ಹೇಳಿದೆ. ಇದು ವ್ಯಕ್ತಪಡಿಸಿರುವ ಅಸಮಾಧಾನದ ಅಂಶಗಳೆಂದರೆ, ಕರ್ನಾಟಕದಲ್ಲಿ ಅಧಿಕಾರದ ಗದ್ದುಗೆ ಹಿಡಿದ ಕಾಂಗ್ರೆಸ್ ಸರ್ಕಾರ ರಚಿಸಿದ ಸಂಪುಟದಲ್ಲಿ ಅಸ್ಪೃಶ್ಯರಲ್ಲಿ ಬಹುಸಂಖ್ಯಾತ ರಾಗಿರುವ ಮಾದಿಗ ಜನಾಂಗದವರಿಗೆ ಪ್ರಾತಿನಿಧ್ಯ ನೀಡದಿರುವುದು; ಕಳೆದ ೫೨ ವರ್ಷಗಳ ರಾಜಕಾರಣದಲ್ಲಿ ಸಮರ್ಥ ರಾಜಕೀಯ ನಾಯಕತ್ವವಿಲ್ಲದೆ ನಿರಂತರವಾಗಿ ಈ ಜನಾಂಗದ ಜನಸಂಖ್ಯೆಗೆ ಆಧಾರವಾಗಿ ಶಾಸನಸಭೆ, ಪಾರ್ಲಿಮೆಂಟುಗಳಲ್ಲಿ ಪ್ರಾತಿನಿಧ್ಯ ಸಿಕ್ಕಿಲ್ಲದಿರುವುದು; ರಾಜ್ಯದ ಮಾದಿಗ ಜನಾಂಗ ಬೇರೆ ಜಾತಿಯ ರಾಜಕಾರಣಿಗಳನ್ನು ಅವಲಂಬಿಸು

ವಂತಾಗಿರುವುದು; ರಾಜ್ಯದ ೫೦ಕ್ಕೂ ಹೆಚ್ಚು ವಿಧಾನಸಭಾ ಕ್ಷೇತ್ರಗಳಲ್ಲಿ ಬಹುಸಂಖ್ಯಾತ ಮತದಾರರಾಗಿ ಈ ಜನಾಂಗದವರಿದ್ದರೂ ಶಾಸನಸಭೆಗೆ ಆಯ್ಕೆಯಾಗಲು ಸಾಧ್ಯವಾಗಿಲ್ಲದಿರುವುದು, ಇತ್ಯಾದಿ.

ಸಂಘಟನೆಗಳು ಮಾದಿಗರ ಪ್ರತ್ಯೇಕ ಮೀಸಲಾತಿಗಾಗಿ ರ್‍ಯಾಲಿಗಳನ್ನು ಸಂಘಟಿಸುತ್ತಿದ್ದರೆ, ಈ ಜನಾಂಗದ ಜನಪ್ರತಿನಿಧಿಗಳು ಆಂಧ್ರಪ್ರದೇಶ ಮಾದರಿಯಲ್ಲಿ ಪ್ರತ್ಯೇಕ ಮೀಸಲಾತಿ ಬೇಡಿಕೆ ಮಂಡಿಸತೊಡಗಿದ್ದಾರೆ. ಪರಿಶಿಷ್ಟರ ಜನಸಂಖ್ಯೆ ಎಷ್ಟಿದೆಯೆಂಬುದನ್ನು ಕಂಡು ಹಿಡಿಯಲು ನ್ಯಾಯಾಧೀಶರನ್ನೊಳಗೊಂಡ ಸಮಿತಿಯನ್ನು ರಚಿಸಿ, ಆ ಸಮಿತಿ ಸಲ್ಲಿಸುವ ವರದಿಯನ್ನಾಧರಿಸಿ ಎ.ಬಿ.ಸಿ.ಡಿ. ವರ್ಗೀಕರಣಕ್ಕೆ ಅನುಗುಣವಾಗಿ ಮೀಸಲಾತಿ ನಿರ್ಧರಿಸಬೇಕೆಂಬುದು ಅವರ ಒತ್ತಾಯ. ಮಾದಿಗರಿಗೆ ಶಾಸನಸಭೆ, ಜಿಲ್ಲಾ ಪಂಚಾಯಿತಿ, ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ನಗರಪಾಲಿಕೆ ಹಾಗೂ ಸರ್ಕಾರಿ ಕ್ಷೇತ್ರಗಳಲ್ಲಿ ನಿರೀಕ್ಷಿಸಿದ ಸವಲತ್ತುಗಳು ಲಭ್ಯವಾಗಿಲ್ಲವೆಂಬುದನ್ನು; ಬಹುಮಂದಿ ಮಾದಿಗರು ಭೂರಹಿತ ಕೃಷಿ ಕಾರ್ಮಿಕರಾಗಿ, ಪೌರ ಕಾರ್ಮಿಕರಾಗಿ, ಚರ್ಮಗಾರಿಕೆ ಕೆಲಸದವರಾಗಿ ನಿಕೃಷ್ಟ ಆದಾಯ ಗಳಿಸುತ್ತಿದ್ದಾರೆ, ಹೀನಾಯ ಸ್ಥಿತಿಯಲ್ಲಿದ್ದಾರೆಂಬುದನ್ನು; ದಲಿತರಿಂದಲೇ ದಲಿತರಿಗೆ ಶೋಷಣೆಯಾಗಬಾರದೆಂಬುದನ್ನು ಅವರು ಅಂಕಿ-ಅಂಶಗಳ ಸಹಿತ ವಿವರಿಸುವುದುಂಟು. ಹಲವಾರು ರಾಜ್ಯಗಳು ಪರಿಶಿಷ್ಟ ಜಾತಿಯವರಿಗೆ ಸಿಗುತ್ತಿರುವ ಶೇ. ೧೫ ರಷ್ಟು ಸೌಲಭ್ಯಗಳನ್ನು ಪರಿಶಿಷ್ಟ ಜಾತಿಗಳ ಜನಸಂಖ್ಯೆಗೆ ಅನುಗುಣವಾಗಿ ವರ್ಗೀಕರಣ ಮಾಡಿಕೊಟ್ಟಿವೆ. ಆಂಧ್ರಪ್ರದೇಶ ಸರ್ಕಾರ ಮಾದಿಗರಿಗೆ ಶೇ. ೭ ರಷ್ಟು ಮೀಸಲಾತಿ ಸೌಲಭ್ಯ ನೀಡಿದೆ. ಹಾಗೆಯೇ, ಜನಸಂಖ್ಯೆ ಆಧಾರದ ಮೇಲೆ ಮಾದಿಗರಿಗೆ ಶೇ. ೧೦ ರಷ್ಟು ರಾಜಕೀಯ ಮೀಸಲಾತಿ ಸೌಲಭ್ಯಗಳನ್ನು ನೀಡಬೇಕೆಂತಲೂ ಬೇಡಿಕೆ ಸಲ್ಲಿಸಲಾಗುತ್ತದೆ.

ಯಾವುದೇ ಜಾತಿಗೆ ಪ್ರಾತಿನಿಧ್ಯತೆಯನ್ನು ನಿಗದಿಮಾಡುವ ಕಾಲಕ್ಕೆ ಜನಸಂಖ್ಯಾ ಪ್ರಮಾಣವು ಒಂದು ಮಾನದಂಡವಾಗಲೇಬೇಕೆಂಬುದನ್ನು ಒಪ್ಪಿಕೊಳ್ಳಬೇಕೆಂಬ ಡಾ. ಅಂಬೇಡ್ಕರ್‌ರ ಮಾತನ್ನು ಮಾದಿಗ ಸಂಘಟನೆಗಳು ಎತ್ತಿ ಹಿಡಿಯುತ್ತವೆ. ಮಾದಿಗರು ಬಹುಸಂಖ್ಯಾತರಾದರೂ ತಮ್ಮ ಜನಸಂಖ್ಯಾವಾರು ಹಕ್ಕುಗಳಿಂದ, ಇತರ ಸೌಲಭ್ಯಗಳಿಂದ ಹೇಗೆ ವಂಚಿತರಾಗಿರುವರೆಂಬುದಕ್ಕೆ ಈ ಕೆಳಕಂಡ ಕೋಷ್ಟಕ ಒಂದು ಉದಾಹರಣೆಯೆನಿಸುತ್ತದೆ :

### ೧. ರಾಜಕೀಯವಾಗಿ (ಎಂ.ಎಲ್.ಎ.ಗಳು)

| ಪರಿಶಿಷ್ಟ ಜಾತಿಗಳು | ಜನಸಂಖ್ಯೆ ಶೇಕಡವಾರು | | ಸಿಗಬೇಕಾದ ಸ್ಥಾನಗಳು | ಸಿಕ್ಕಿದ ಸ್ಥಾನ | ಕಳೆದುಕೊಂಡಿದ್ದು |
|---|---|---|---|---|---|
| ಮಾದಿಗ ಸಂಬಂಧಿತ ಜಾತಿಗಳು | ೫೭.೦೦ | ೫೭.೩ | ೧೯ | ೬ | ೧೩ |
| ಹೊಲೆಯ ಸಂಬಂಧಿತ ಜಾತಿಗಳು | ೨೭.೦೦ | ೨೬.೩ | ೯ | ೧೪ | - |
| ಇತರರು | ೧೬.೦೦ | ೧೬.೪ | ೫ | ೧೩ | - |
| ಮಾದಿಗರಿಗೆ ಸಿಗಬೇಕಾದ ಮಂತ್ರಿ ಸ್ಥಾನಗಳು | | | ೬ | ೨ | ೪ |

## ೨. ಸರ್ಕಾರಿ ಸೇವೆಗಳು

| ವರ್ಗೀಕರಣ | ಒಟ್ಟು ಹುದ್ದೆಗಳು | ಸಿಗಬೇಕಾದ ಸ್ಥಾನಗಳು | ಸಿಕ್ಕಿದ ಸ್ಥಾನ | ಕಳೆದುಕೊಂಡಿದ್ದು |
|---|---|---|---|---|
| 'ಎ' ಗ್ರೇಡ್ ಹುದ್ದೆಗಳು | ೨,೨೦೦ | ೧,೪೦೦ | ೨೨೦ | ೧,೧೮೦ |
| 'ಬಿ' ಗ್ರೇಡ್ ಹುದ್ದೆಗಳು | ೪,೩೦೦ | ೨,೬೦೦ | ೪೩೦ | ೨,೧೭೦ |
| 'ಸಿ' ಗ್ರೇಡ್ ಹುದ್ದೆಗಳು | ೪೫,೦೦೦ | ೨೭,೦೦೦ | ೧೦,೦೦೦ | ೧೭,೦೦೦ |
| 'ಡಿ' ಗ್ರೇಡ್ ಹುದ್ದೆಗಳು | ೨೦,೦೦೦ | ೧೨,೦೦೦ | ೧೦,೦೦೦ | ೨,೦೦೦ |
| ನೇರ ನೇಮಕಾತಿಯಿಂದ | | | | |

ಕರ್ನಾಟಕದಲ್ಲಿ ೧೯೮೦ರಲ್ಲಿ ೨೨ ಐ.ಎ.ಎಸ್ - ಪ.ಜಾ. ಅಧಿಕಾರಿಗಳಲ್ಲಿ - ಮಾದಿಗರು ೨ ಮಾತ್ರ.
ಕರ್ನಾಟಕದಲ್ಲಿ ೧೯೮೦ರಲ್ಲಿ ಐ.ಪಿ.ಎಸ್ - ಪ. ಜಾ. ಅಧಿಕಾರಿಗಳಲ್ಲಿ - ಮಾದಿಗರು ಇಲ್ಲ.

(ಆಕರ : ಮಾದಿಗ ರಿಸರ್ವೇಶನ್ ಹೋರಾಟ ಸಮಿತಿ, ರಾಯಚೂರು ಜಿಲ್ಲಾ ಘಟಕದ ಪ್ರಕಟಣೆ, ಮೇ ೧೯೯೯).

ಮಾದಿಗರ ಇಂಥಾ ಪ್ರತ್ಯೇಕ ಸಂಘಟನೆ - ಸಮಾವೇಶಗಳು ದಲಿತ ವರ್ಗದ ಭವಿಷ್ಯವನ್ನು ಹೇಗೆ ರೂಪಿಸಬಹುದು? ಕರ್ನಾಟಕ ದಲಿತ ಸಂಘರ್ಷ ಸಮಿತಿ ರಾಜಕೀಯ ನೆಲೆಯಲ್ಲಿ ಇಬ್ಭಾಗವಾದಾಗಲೇ ಎದುರಾದ ಈ ಪ್ರಶ್ನೆ ಈಗೀಗ ಬಲವಾಗಿ ಕಾಡತೊಡಗಿರುವುದಂತೂ ಸ್ಪಷ್ಟ. ಈವರೆಗಿನ ಸಂಘಟಿತ ದಲಿತ ಶಕ್ತಿಯನ್ನು ನಾಶಗೊಳಿಸುವಲ್ಲಿ ಮಾತ್ರ ಈ ಸಮಾವೇಶಗಳು ಸಫಲಗೊಳ್ಳುತ್ತಿವೆಯೆಂಬುದು ಮಂಜುನಾಥ ಎಂ. ಅದ್ದೆಯವರ ಅಭಿಪ್ರಾಯ (ಅಗ್ನಿ : ೫ ಏಪ್ರಿಲ್ ೧೯೯೯ : ೧೧). ಹೊಲೆಮಾದಿಗರ ಮಧ್ಯೆ ಜಾತ್ಯತೀತ ಭಾವನೆ ಮೂಡಿಸಿ ಅವರನ್ನು ಮಾನಸಿಕವಾಗಿ ಕೇವಲ ದಲಿತರನ್ನಾಗಿಸಬೇಕು, ಅವರ ಮಧ್ಯೆ ರಕ್ತಸಂಬಂಧ ಬೆಳೆಯಬೇಕು; ಹೊಲೆಮಾದಿಗರೇ ಜಾತಿ ಬಿಡದಿದ್ದರೆ ಈ ಶ್ರೇಣೀಕೃತ ಸಮಾಜದ ಮೇಲ್ತುದಿಯಲ್ಲಿರುವವರು ಜಾತಿ ಬಿಡಲು ಸಾಧ್ಯವೇ? - ಎಂದು ಪ್ರಶ್ನಿಸುತ್ತಾರೆ ರಂಜಾನ್ ದರ್ಗಾ (ವೀರಭದ್ರಪ್ಪ, ಜಾಹ್ನವಿ : ೧೯೯೮ : ೧೯೯). ದಲಿತರಲ್ಲಿ ಇಂದು ಎಡ-ಬಲ ಎಂಬ ಭೇದ ಅಧಿಕಗೊಂಡು ಒಬ್ಬರನ್ನೊಬ್ಬರು ಸಂಶಯದಿಂದ ನೋಡುವಂತಾಗಿರುವುದು, ದಲಿತ ಸಂಘರ್ಷ ಸಮಿತಿಯ ನಾಯಕತ್ವದಲ್ಲಿದ್ದ ದೋಷ, ಸ್ವಾರ್ಥಗಳೇ ಕಾರಣವಲ್ಲವೇ? - ಹೀಗೆ ಕೆದಕುವವರು ಶಿವರಾಮು ಕಾಡನಕುಪ್ಪೆ (ಅಲ್ಲೇ : ೨೦೪). ಮಾದಿಗ ಸಮುದಾಯಕ್ಕೆ ಅನ್ಯಾಯವಾಗಿದೆ ನಿಜ, ಆದರೆ ಆಂಧ್ರಪ್ರದೇಶದಷ್ಟಲ್ಲ. ಕರ್ನಾಟಕದ ಸ್ಥಿತಿಯೇ ಭಿನ್ನವಾಗಿರುವುದರಿಂದ ಸಮಸ್ತ ಸಮುದಾಯ ಮತ್ತೊಮ್ಮೆ ಪುನರವಲೋಕನವನ್ನಂತೂ ಮಾಡಿಕೊಳ್ಳಬೇಕಿದೆ. ಎಷ್ಟೆಲ್ಲಾ ಜನರ ಬೆವರು, ನೆತ್ತರಿನ ಹೋರಾಟದೊಂದಿಗೆ, ಕನಸುಗಳೊಂದಿಗೆ ಕಟ್ಟಿದ ದಲಿತ ಶಕ್ತಿಯ ಮರ ಫಲಕೊಡುವ ಹೊತ್ತಿನಲ್ಲಿ ಮರ ಬೆಳಸಿದ ಸೋದರರೇ ಪಾಲು ಬೇಡಿ ಟೊಂಗೆಗಳಿಗೆ ಕೊಡಲಿ ಹಚ್ಚಿದರೆ ಹೇಗೆಂಬುದನ್ನು ಅರಿಯಬೇಕಿದೆಯೆಂಬ ಕಾಳಜಿ ವ್ಯಕ್ತಪಡಿಸುವ ಮೋಹನ ನಾಗಮ್ಮನವರ ಅವರು, ದಾಯಾದಿ ಕಲಹದಲ್ಲಿ ದೂರ ನಿಂತು ಬಲ ವೃದ್ಧಿಸಿ ಕೊಳ್ಳುತ್ತಿರುವ ಶತ್ರುವಿನ ಬಗೆಗೂ ಎಚ್ಚರವಹಿಸಬೇಕಿದೆಯೆಂಬ ಸಲಹೆಯನ್ನು ನೀಡುತ್ತಾರೆ (ಅಲ್ಲೇ : ೨೩೮).

ಅಸ್ಪೃಶ್ಯರ ಅಸ್ಪೃಶ್ಯತೆಯನ್ನು ಅಸ್ಪೃಶ್ಯರೇ ಹೆಚ್ಚಿಸುವ ಈ ವಿನಾಶಕಾರೀ ಪ್ರಯತ್ನವು ದಲಿತವರ್ಗಗಳ ಪಾಲಿಗೆ ಶಾಶ್ವತ ಶಾಪವಾಗಿ ಪರಿಣಮಿಸುತ್ತವೆ. ಹೊಲೆ-ಮಾದಿಗ ಸಮಸ್ಯೆಯು ಮೂಲ ಕೇಂದ್ರ ದಲಿತ ಸಂಘರ್ಷ ಸಮಿತಿಯೇ ಆಗಿದೆ. ಪುರಾತನ ಕಾಲದ ಜಾತಿ ವ್ಯವಸ್ಥೆಯ ವಿರುದ್ಧ ಸಿಡಿದೆದ್ದ ದಸಂಸ ತನ್ನ ಅಂತರಂಗದಲ್ಲೇ ಇದ್ದ ಉಪಜಾತಿ ಸಮಸ್ಯೆಯನ್ನು ಅಲಕ್ಷಿಸಿತು. ಈ ಉದಾಸೀನವೇ ಮುಂದೆ ಹೊಲೆಮಾದಿಗ ಉಪಜಾತಿಗಳು ಪ್ರತ್ಯೇಕ ಕೇಂದ್ರಬಿಂದುಗಳಾದವು. ೧೯೮೯ನೇ ಇಸವಿಯಲ್ಲಿ ಆದಿ ಜಾಂಬವ ಸಂಘಟನೆ ಕರ್ನಾಟಕದಲ್ಲಿ ಜನಿಸಿತು. ಮೈಸೂರು ಈ ಸಂಘಟನೆಯ ಕೇಂದ್ರ ಬಿಂದುವಾಯಿತು. ಅಲ್ಲದೆ, ಈ ಸಂಘಟನೆಯಲ್ಲಿ ದಸಂಸದ ಶಕ್ತಿಯ ಕಾರ್ಯಕರ್ತರೇ ತಮ್ಮನ್ನು ತೊಡಗಿಸಿಕೊಂಡು ಅದುವರೆಗೆ ತಾವು ಮಾಡುತ್ತಿದ್ದ ಜಾತ್ಯತೀತ ಚಟುವಟಿಕೆಗಳ ವಿರುದ್ಧ ಜಾತಿವಾದಿ ಚಟುವಟಿಕೆಗಳನ್ನು ಆರಂಭಿಸಿದರು. ಜಾತಿಯ ನೆಲೆಯಲ್ಲಿ ಸಂಘಟನೆಯಾಗುತ್ತಾ ಜಾತ್ಯತೀತ ಮೌಲ್ಯಗಳಿಗೆ ತಿಲಾಂಜಲಿಯನ್ನು ನೀಡಿದರೆಂಬ ಚರಿತ್ರೆಯನ್ನು ಬಿಚ್ಚಿಡಲು ಪ್ರಯತ್ನಿಸುತ್ತಾರೆ ಮುಳ್ಳೂರು ನಾಗರಾಜ (ಮುನಿವೆಂಕಟಪ್ಪ : ೧೯೯೮: ೮೯). ದಲಿತ ಸಂಘಟನೆಕಾರರು ಸಮಾಜದ ಹಿತವನ್ನು ಕಡೆಗಣಿಸಿ ಒಳಜಾತಿ ವಿಚಾರಗಳಲ್ಲಿ ಮಾತ್ರ ಜಗಳ ಕಾಯುವ ಕೇಂದ್ರವ್ಯಕ್ತಿಗಳಾಗಿದ್ದಾರೆ. ದಲಿತ ನಾಯಕರಂತೂ ಮಠ-ಮಂದಿರಗಳನ್ನು ನಿರ್ಮಾಣ ಮಾಡಲು ಹೊರಟಿರುವುದು ದುರಂತವೇ ಸರಿ. ವೈದಿಕ ವ್ಯವಸ್ಥೆಯಿಂದಲೂ ದಲಿತರನ್ನು, ಶೋಷಿತರನ್ನು ಮಠ ಮಂದಿರದವರೆ ದೂರಿಟ್ಟಿರುವುದು ಗೊತ್ತಿದ್ದೂ, ೨೧ನೇ ಶತಮಾನದಲ್ಲಿ ಮಠಗಳನ್ನು ಹೊಂದಲು ದಲಿತ ನಾಯಕರು ಹವಣಿಸುತ್ತಿರುವುದು ಹೆಡ್ಡತನವಲ್ಲದೆ ಮತ್ತೇನೂ ಅಲ್ಲ. ಇದಲ್ಲದೆ ಅಂಥವರಿಗೆ ಚರಿತ್ರೆಯ ಅರಿವು ಇಲ್ಲವೆಂದರೆ ತಪ್ಪಾಗಲಾರದೆಂದು ಟೀಕಿಸುತ್ತಾರೆ ಡಾ. ಎಚ್. ಟಿ. ಪೋತೆ (ಅಲ್ಲೆ : ೬-೭). ಈಗ ದಲಿತ ಚಳವಳಿ ಒಂದು ನೆನಪು ಮಾತ್ರ. 'ಇಕ್ಕಲೂ ಆಗದ ಒದೆಯಲೂ ಆಗದ' ಸ್ಥಿತಿಯಲ್ಲಿದೆ. ಇಪ್ಪತ್ತು ವರ್ಷದಲ್ಲಿ ಗಟ್ಟಿಯಾಗಿ ಬೆಳೆದದ್ದು ಕಣ್ಣೆದುರಿನಲ್ಲೆ ಕುಸಿದಿದೆ. ನಾಯಕರ ತೀರ್ಮಾನಗಳು, ಎಡಬಲ ಜಾತಿಗಳು, ಸ್ವಾರ್ಥ, ರಾಜಕೀಯ ಪ್ರಜ್ಞೆಯ ಕೊರತೆಯಿಂದ ಇಂದು ಇಬ್ಭಾಗವಾಗಿದೆ. ಒಂದೇ ಕಡೆ ಕೆಲಸಮಾಡುತ್ತಿದ್ದ ಗೆಳೆಯರು ಬೇರೆ ಬೇರೆ ಕಡೆ ಕೆಲಸ ಮಾಡತೊಡಗಿದ್ದಾರೆ. ಇವರು ಸೇರುವ ದಾರಿ ಒಂದೇ ಆಗಿದ್ದರೂ ಚೂರು ಚೂರು ಒಡೆದು ಹೋಗಿದ್ದು, ಶೋಷಕರಿಗೆ ಮತ್ತೆ ಶೋಷಣೆ ಮಾಡಲು ದಾರಿ ಸಿಕ್ಕಿದಂತಾಗಿದೆಯೆಂಬ ಬೀರಮಾನಹಳ್ಳಿ ರಾಮಕೃಷ್ಣ ಅವರ ಮಾತುಗಳಲ್ಲಿರುವುದು (ಅಲ್ಲೇ : ೧೭೩) ಒಟ್ಟಾರೆ ಅವಲೋಕನ ಮತ್ತು ವಿಷಾದ.

ದಲಿತ ಸಂಘರ್ಷ ಸಮಿತಿ, ದಲಿತ ಚಳವಳಿ, ಮಾದಿಗರ ಪ್ರತ್ಯೇಕ ಮೀಸಲಾತಿ ಹೋರಾಟಗಳ ಬಗೆಗಿನ ಒಂದು ಮಿಂಚುನೋಟ ಈ ಮೇಲಿನ ಹೇಳಿಕೆಗಳಲ್ಲಿ ಹರಿದಿರುವುದು ಸ್ಪಷ್ಟ. ದಲಿತ ಸಮೂಹದ ಮಹತ್ವವನ್ನು ಬೇರೆಯವರಿಗೆ ಮನವರಿಕೆ ಮಾಡಿಕೊಡುವಲ್ಲಿ ವೈಚಾರಿಕ ನೆಲೆಗಟ್ಟಿನಲ್ಲಿ ಒಳಪಂಗಡಗಳಲ್ಲಿ ಒಂದಾಗಿ ಮುಂದುವರೆಯುವುದಾದರೆ ದಲಿತ ಚಳವಳಿಗೆ ಮಹತ್ವ ಬರುತ್ತದೆಂಬುದು ನಿಜವಾದರೂ ಈಗ ಅದು ಸಾಧ್ಯವೇ ಎಂದು ಕೇಳುವಂತಾಗಿದೆ. ದಲಿತ ಚಳವಳಿಯಲ್ಲಿ ಸಕ್ರಿಯವಾಗಿದ್ದ ಮಾದಿಗ ಜನಾಂಗ ಈಗ ಪ್ರತ್ಯೇಕವಾಗಿ ನಿಂತು ಸ್ವತಂತ್ರವಾಗಿ ಹೋರಾಡಲು ಹೊರಟಿರುವುದು ನಿಚ್ಚಳವಾಗಿ ಕಾಣುತ್ತಲಿದೆ. ಆದರೆ ಇಲ್ಲಿಯ ಪ್ರಶ್ನೆಯೆಂದರೆ, ಅದು ತನ್ನ ಈ ಪ್ರಯತ್ನದಲ್ಲಿ ಸಫಲವಾಗುವುದೇ

ಎಂಬುದು. ಏಕೆಂದರೆ ಭಂಗಿಗಳೂ ಸೇರಿದಂತೆ ಮಾದಿಗ ಸಮುದಾಯ ಮಾತ್ರ ಕರ್ನಾಟಕದಲ್ಲಿ 'ಅಸ್ಪೃಶ್ಯ' ಎನ್ನಿಸಿಕೊಳ್ಳರ್ಹವಾದುದು ಎಂಬ ವಾದವನ್ನು ಪ್ರತ್ಯೇಕ ಮೀಸಲಾತಿ ಸಂದರ್ಭದಲ್ಲಿ ಮಂಡಿಸುವಾಗ ಈ ಪ್ರಶ್ನೆಯನ್ನು ಕೇಳಲೇಬೇಕಾಗುತ್ತದೆ. ಇದು ಔಚಿತ್ಯದ ಪ್ರಶ್ನೆಯೂ ಹೌದು.

ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ೨೨ನೇ ಕ್ರಮಸಂಖ್ಯೆಯ ಅಡಿಯಲ್ಲಿ ಉಲ್ಲೇಖಿಸಲಾದ ಪರ್ಯಾಯ ಜಾತಿಗಳ ಸಂಖ್ಯೆ ೨೨. ಇವುಗಳಲ್ಲಿ ಮಾದರ್, ಮಾದಿಗ ಉಪಜಾತಿಗಳೂ ಸೇರಿವೆ. ಮಾದಿಗ ಸಮುದಾಯವೊಂದೇ ಪ್ರತ್ಯೇಕ ಮೀಸಲಾತಿ ಬೇಡಿಕೆ ಮುಂದೊಡ್ಡಿ ಮುಂದುವರೆಯುವುದೆಂದರೆ, ಅದು ತನ್ನ ಜತೆಯಿರುವ ಇತರ ಒಳ ಅಥವಾ ಪರ್ಯಾಯ ಜಾತಿಗಳನ್ನು ನಿರ್ಲಕ್ಷಿಸಿದೆಯೆಂದೇ ಅರ್ಥ. ಹಾಗಾದರೆ ಮಾದಿಗರಷ್ಟೆ ನಿಕೃಷ್ಟ ಬದುಕು ನಡೆಸುತ್ತಿರುವ ಇತರ ಸೋದರ ಜಾತಿಗಳು ಲೆಕ್ಕಕ್ಕಿಲ್ಲವೇ? ಅವರೂ ಸಮಾನತೆಯಲ್ಲಿ, ನ್ಯಾಯದಲ್ಲಿ ಪಾಲು ಪಡೆಯಲು ಅರ್ಹರಲ್ಲವೇ? ಏಕೀಕೃತಗೊಂಡ ದಲಿತ ಶಕ್ತಿಯನ್ನು ವಿಭಜಿಸಲು ಆಂಧ್ರದಲ್ಲಿ ಪ್ರತ್ಯೇಕತೆಯ ವಾದವನ್ನು ಪ್ರೋತ್ಸಾಹಿಸಲಾಗುತ್ತಿದೆಯೆಂಬ ಅಲ್ಲಿಯ ವಿಚಾರವಾದಿಗಳ ಅನಿಸಿಕೆಯ ಹಿನ್ನೆಲೆಯಲ್ಲೆ ಕರ್ನಾಟಕದ ಮಾದಿಗ ದಂಡೋರ ಚಳವಳಿಯ ಬೆಳವಣಿಗೆಯನ್ನೂ ವಿಶ್ಲೇಷಿಸಬೇಕಾಗುತ್ತದೆ. ಕರ್ನಾಟಕದಲ್ಲಿ ಬಹುಜನ ಸಮಾಜ ಪಕ್ಷದ ಚಟುವಟಿಕೆಗಳನ್ನು ಗಮನಿಸಿಯೂ ಈ ಮಾತನ್ನು ಹೇಳಬಹುದು. ಯಾವುದೇ ಜಾತಿ ಅಥವಾ ಉಪಜಾತಿ ಶಕ್ತಿಯಾಗಿ ನಿಲ್ಲಲು, ಬೆಳೆಯಲು ಇತರ ಜಾತಿಗಳ ಬೆಂಬಲವಿಲ್ಲದಿದ್ದರೆ ಸಾಧ್ಯವಾಗದು. ದಲಿತ ಶಕ್ತಿ ಇರುವುದು ಒಗ್ಗಟ್ಟಿನಲ್ಲಿ. ಈ ಶತಮಾನದ ಉತ್ತರಾರ್ಧದಲ್ಲಿ ಇಂಥಾ ಅಪರೂಪದ ಪ್ರಯೋಗ ನಡೆದಿದ್ದು, ಅಂತ್ಯದ ವೇಳೆಗೆ ಅದರ ನಾಶವನ್ನು ಕಣ್ಣಾರೆ ಕಾಣುವಂಥಾದರೆ ಅದು ದಲಿತರ ದುರಂತವೆನ್ನಬೇಕಾಗುತ್ತದೆ.

ಮಾದಿಗರ ಪ್ರತ್ಯೇಕ ಮೀಸಲಾತಿ ಬೇಡಿಕೆಯಂತೆಯೇ, ೧೯೭೦ರ ದಶಕದಲ್ಲಿ ಪಂಜಾಬ್ ಮತ್ತು ಹರ‍್ಯಾಣಗಳಲ್ಲಿ ಮಜಬಿ ಮತ್ತು ವಾಲ್ಮೀಕಿ ಜಾತಿಗಳವರು 'ಮೀಸಲಾತಿಯಲ್ಲಿ ಮೀಸಲಾತಿ' ಕಲ್ಪಿಸಿಕೊಡುವಂತೆ ಸರ್ಕಾರಗಳನ್ನು ಒತ್ತಾಯಿಸಿದುದು; ಆ ನಂತರ ಇಂಥಾ ಬೇಡಿಕೆಯನ್ನು ಮಹಾರಾಷ್ಟ್ರದಲ್ಲಿ ಮಾಂಗ್ ಜಾತಿಯವರು ಹಾಗೂ ಪಶ್ಚಿಮ ಬಂಗಾಳದಲ್ಲಿ ರಾಜವಂಶಿ ಜಾತಿಯವರು ಸರ್ಕಾರಗಳ ಮುಂದೆ ಮಂಡಿಸಿದುದು ಗಮನಕ್ಕೆ ಬರುತ್ತದೆ. ಕರ್ನಾಟಕದಲ್ಲಿ ಮೀಸಲಾತಿ ವಿಭಾಗೀಕರಣದಂಥಾ ಸಂಕೀರ್ಣ ಸಮಸ್ಯೆ ಕುರಿತು ಗಂಭೀರ ಚಿಂತನೆ ನಡೆಸುವ ಅಗತ್ಯವಿದೆಯೆಂದು ಪ್ರಜ್ಞಾವಂತ ವರ್ಗ ಅಪೇಕ್ಷಿಸುತ್ತದೆ. ಹಾಗೆಯೇ, ಮೀಸಲು ಗುಂಪಿನ ಜಾತಿಗಳನ್ನು ವಿಭಾಗೀಕರಿಸಬೇಕೆಂಬ ಬೇಡಿಕೆಗೆ ಸಂಬಂಧಿಸಿದಂತೆ ಕೆಲವು ಪ್ರಶ್ನೆಗಳನ್ನು ಪರಿಶೀಲಿಸಬೇಕೆಂದು ಸ್ವಾಗತಿಸುತ್ತದೆ. ಪ್ರಶ್ನೆಗಳಿವು:

ಕರ್ನಾಟಕದಲ್ಲಿ ಹೊಲೆಯ-ಮಾದಿಗ ಇತ್ಯಾದಿ ಉಪಜಾತಿಗಳು ಪಡೆದಿರುವ ಸೌಲಭ್ಯಗಳ ನಡುವಣ ಅಂತರವನ್ನು ಅಧಿಕೃತವಾಗಿ ಪತ್ತೆ ಹಚ್ಚಲು ಶೀಘ್ರ ಕ್ರಮಕೈಗೊಳ್ಳುವುದು ಸೂಕ್ತವಲ್ಲವೇ? ಈ ಉಪಜಾತಿಗಳು ಪಡೆದಿರುವ ಸೌಲಭ್ಯಗಳ ನಡುವೆ ತೀವ್ರ ಅಂತರ ಸಾಬೀತಾದರೆ, ಇದರ ನಿವಾರಣೆಗೆ ವಿಭಾಗೀಕರಣ ಸೂಕ್ತವಲ್ಲವೇ? ವಿಭಾಗೀಕರಣದ ಬಗೆಗೆ ತುಂಬು ಉತ್ಸುಕತೆಯನ್ನು ತೋರುತ್ತಿರುವ ಮಾದಿಗ ಜಾತಿಯವರಲ್ಲಿ 'ಪಡೆಯುವ

ಮುಷ್ಟಿ' ಹಾಗೂ ವಿಭಾಗೀಕರಣದ ಬಗೆಗೆ ಮುಕ್ತಚರ್ಚೆಗೆ ಹಿಂದೇಟು ಹಾಕುತ್ತಿರುವ ಹೊಲೆಯ ಜಾತಿಯವರಲ್ಲಿ 'ಕಳೆದುಕೊಳ್ಳುವ ಆತಂಕ' ಮನೆ ಮಾಡಿದೆಯೇ? ವಿಭಾಗೀಕರಣದ ಬಗೆಗೆ ಮಾದಿಗ ಮತ್ತು ಹೊಲೆಯ ಜಾತಿಯವರು ಒಟ್ಟಿಗೆ ಕುಳಿತು ಸಮಾಧಾನದಿಂದ, ಹಂತ ಹಂತವಾಗಿ ಚರ್ಚಿಸುವುದು ಅತ್ಯಗತ್ಯವಲ್ಲವೇ? ವಿಭಾಗೀಕರಣವನ್ನು ಲಾಭ-ನಷ್ಟದ ಪ್ರಶ್ನೆಯಾಗಿ ಪರಿಗಣಿಸದೆ, ನ್ಯಾಯ ಮತ್ತು ಮಾನವೀಯತೆಗಳ ಪರಿಪ್ರೇಕ್ಷ್ಯದಲ್ಲಿ ಪರಿಗಣಿಸುವುದು ಹೃದಯವಂತಿಕೆಯಲ್ಲವೇ? ವಿಭಾಗೀಕರಣದ ಬಳಿಕವೂ ಒಂದು ವಿಭಾಗದೊಳಗಿನ ಹಲವು ಜಾತಿಗಳು ಪಡೆಯುವ ಸೌಲಭ್ಯಗಳ ವಿಚಾರದಲ್ಲೂ ಇದೇ ರೀತಿಯ ಅಂತರ ಕಾಣಿಸಿಕೊಳ್ಳಬಹುದಲ್ಲವೇ? ವಿಭಾಗೀಕರಣದಿಂದ ಮೀಸಲು ಗುಂಪಿನ ಜಾತಿಗಳ ಒಗ್ಗಟ್ಟಿಗೆ ಧಕ್ಕೆ ಬರುವುದೇ? ವಿಭಾಗೀಕರಣವು ಬಲಾಢ್ಯ ಜಾತಿಗಳಿಗೊಂದು ವರವಾಗಿ ಪರಿಣಮಿಸುತ್ತದೆಯೇ? ವಿಭಾಗೀಕರಣವಾದ ಬಳಿಕವೂ ಮೀಸಲು ಗುಂಪಿನ ಜಾತಿಗಳು ಒಗ್ಗಟ್ಟಿನಿಂದ ಇರುವುದು ಅತ್ಯಗತ್ಯವಲ್ಲವೇ? ಇದನ್ನು ಸಾಧಿಸುವ ಮಾರ್ಗ ಯಾವುದು? ಮಾದಿಗ-ಹೊಲೆಯ ಜಾತಿಗಳ ಹಾಗೂ ಇತರ ಜಾತಿಗಳ ಪ್ರಜ್ಞಾವಂತರು, ವಿವೇಕಶಾಲಿಗಳು ಸೇರಿ ವಿಭಾಗೀಕರಣದ ಪ್ರಶ್ನೆಯನ್ನು ಚರ್ಚಿಸಿ ಅಸಮಾಧಾನ, ಅನ್ಯಾಯಗಳನ್ನು ದೂರಮಾಡುವುದು ದಲಿತರ ಒಗ್ಗಟ್ಟಿನ ದೃಷ್ಟಿಯಿಂದ ಅತ್ಯಗತ್ಯವಲ್ಲವೇ?- ಇತ್ಯಾದಿ. (ಆಧಾರ: ಬೆಂಗಳೂರಿನ ಬಾಬಾಸಾಹೇಬ್ ಅಂಬೇಡ್ಕರ್ ಅಧ್ಯಯನ ಕೇಂದ್ರ ಮತ್ತು ಡಾ. ಲೋಹಿಯಾ ಸಮತಾ ಸಂಘಟನೆಗಳ ಪ್ರಕಟಣೆ).

ಪ್ರಾಯಶಃ ಈ ಮೀಸಲಾತಿ ವಿಭಾಗೀಕರಣ ಬಿಕ್ಕಟ್ಟಿನ ಪರಿಹಾರದಲ್ಲಿಯೇ ಮಾದಿಗರ ಪ್ರತ್ಯೇಕ ಮೀಸಲಾತಿ ಬೇಡಿಕೆಗೂ ಪರಿಹಾರ ಇರಬಹುದಲ್ಲವೇ?

### ೫.೬. ಮೆರಿಟ್ ಸಿದ್ಧಾಂತ v/s ಮೀಸಲಾತಿ

ಜಾತಿಗಳ ಪ್ರತ್ಯೇಕತೆಯ ಸಮಸ್ಯೆ ಒಂದೆಡೆ ಭೂತಾಕಾರವಾಗಿ ಬೆಳೆಯುತ್ತಿದ್ದರೆ, ಇನ್ನೊಂದೆಡೆ ದಲಿತ ವರ್ಗದ ಮೀಸಲಾತಿಯೇ ಪ್ರಶ್ನೆಗೊಳಗಾಗುತ್ತಿದೆ. ಮೀಸಲಾತಿ ಕುರಿತ ಪರ-ವಿರೋಧ ಚಳವಳಿಗಳು ಕರ್ನಾಟಕಾದ್ಯಂತ ನಡೆಯತೊಡಗಿವೆ. ಪ್ರತಿಭೆ-ಸಾಮರ್ಥ್ಯ-ಅನುಭವ-ಅಂಕಗಳಿಕೆ, ಇತ್ಯಾದಿಗಳು ದಲಿತರನ್ನು ಹಾಗೂ ಇತರ ಹಿಂದುಳಿದ ವರ್ಗಗಳನ್ನು ಇನ್ನಷ್ಟು ಆಳದಲ್ಲಿ ಹೂಳುವ ನೆಪಗಳಾಗಿ ಪ್ರವರ್ತಿಸಿದುದನ್ನು ಯಾರೂ ಮರೆಯುವಂತಿಲ್ಲ. ಈ ಶತಮಾನದ ಪ್ರಾರಂಭದಿಂದಲೂ ಇಂಥಾ ಚರ್ಚೆಗಳು ನಡೆಯತೊಡಗಿ, ಈಗಲೂ ಅವು ಬೇರೆ ಬೇರೆ ರೂಪಗಳಲ್ಲಿ ಮರು ಅವತಾರ ತಳೆದು ಅಟ್ಟಹಾಸದಿಂದ ನರ್ತಿಸುತ್ತಿರುವುದನ್ನು ನೋಡಬಹುದು. ಹಿಂದುಳಿದವರ ಮತ್ತು ದಲಿತ ವರ್ಗದ ಮಟ್ಟಿಗೆ ಇದೊಂದು ಅಗ್ನಿಪರೀಕ್ಷೆ. ಅವರ ಬದುಕಿನ ಮುಗಿಯದ ನೋವಿನ ಕಥೆಯಲ್ಲಿ ಇನ್ನೊಂದು ಅಧ್ಯಾಯದ ಆರಂಭ.

ಇದಕ್ಕೆಲ್ಲಾ ಮೂಲಕಾರಣ ಮೀಸಲಾತಿ ಮೆರಿಟ್ ಸಿದ್ಧಾಂತಕ್ಕೆ ಧಕ್ಕೆಯನ್ನೊದಗಿಸುತ್ತದೆ; ಮೀಸಲಾತಿಯಿಂದ ಭಾರತದಲ್ಲಿ ಜಾತೀಯತೆ ಹೆಚ್ಚುತ್ತಿದೆ ಹಾಗೂ ದೇಶದ ಪ್ರಗತಿ ಕುಂಠಿತಗೊಳ್ಳುತ್ತಿದೆಯೆಂಬ ದ್ವೇಷಭರಿತ ಹೇಳಿಕೆಗಳು. ಇಂಥಾ ಹೇಳಿಕೆಗಳು ಸಹಜವಾಗಿಯೇ

ಮೇಲ್ವರ್ಗದವರಿಂದ ಬಂದಂಥವು. ಇವು ನೇರವಾಗಿ ದಲಿತರಿಗೇ ಅನ್ವಯಿಸುವಂಥವು. ಸಾಮರ್ಥ್ಯದ ಹೆಸರಿನಲ್ಲಿ 'ಘೋಂಗಿ ಕ್ಷೇತ್ರ'ವೊಂದನ್ನು ರಚಿಸಿ, ಜನಸಂಖ್ಯೆಗನುಗುಣವಾಗಿ ಎಲ್ಲ ಜಾತಿಗಳಿಗೂ ಬೇರೆ ಬೇರೆ ಕ್ಷೇತ್ರಗಳಲ್ಲಿ ಪಾಲು ದೊರೆಯದಂತೆ ವಂಚಿಸಿರುವ ವರ್ಗಗಳ ಹೂನ್ನಾರವನ್ನು ಬಯಲಿಗೆಳೆದು ಇದನ್ನು ಸಾರ್ವಜನಿಕವಾಗಿ ವಿಶ್ಲೇಷಿಸ ಬೇಕೆನ್ನುವುದು ಈಗಾಗಲೇ ಹಳೆಯ ಮಾತು. ಸಾಮರ್ಥ್ಯ ಕ್ಷೇತ್ರವನ್ನು (ಮೆರಿಟ್ ಪೂಲ್) ಗಣನೆಗೆ ತೆಗೆದುಕೊಂಡರೆ ಬ್ರಾಹ್ಮಣರನ್ನುಳಿದು ಇತರೆ ಯಾರಿಗೂ ಲಾಭವಾಗುವುದಿಲ್ಲ ವೆನ್ನುವುದನ್ನು ಅಧ್ಯಯನಗಳು ತೋರಿಸಿಕೊಟ್ಟಿವೆ. ಆದ್ದರಿಂದ ಜನಸಂಖ್ಯೆಗನುಗುಣವಾದ ಮೀಸಲಾತಿ ಬಗೆಗೆ ಹಿಂದುಳಿದ ವರ್ಗಗಳು ಒಲವು ತೋರಿಸಿದುದು ಚಾರಿತ್ರಿಕ ಸತ್ಯ.

ಮೈಸೂರು ಸಂಸ್ಥಾನದಲ್ಲಿ ಸರ್ ಲೆಸ್ಲಿ ಮಿಲ್ಲರ್ ಸಮಿತಿ ರಚನೆಯಾದುದು (೧೯೧೮) ಹಿಂದುಳಿದ ವರ್ಗಗಳಿಗೆ ಆದ ಅನ್ಯಾಯವನ್ನು ಸರಿಪಡಿಸಲು ಮಾಡಿಕೊಂಡ ಮನವಿಗಳ ಹಿನ್ನೆಲೆಯಲ್ಲಿ. ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರವರು ಬಹುಸಂಖ್ಯಾತರಾಗಿದ್ದ ಹಿಂದುಳಿದ ವರ್ಗಗಳ ಬೇಡಿಕೆಯನ್ನು ಈಡೇರಿಸಲೇ ಬೇಕಾಗಿತ್ತು. ಆದರೆ ದಿವಾನರಾಗಿದ್ದ ಎಂ. ವಿಶ್ವೇಶ್ವರಯ್ಯನವರ ಅಭಿಪ್ರಾಯ ಇದಕ್ಕೆ ವಿರುದ್ಧವಿದ್ದುದರಿಂದ ಅವರೀರ್ವರ ಮಧ್ಯೆ ಸಂಘರ್ಷ ನಡೆಯತೊಡಗಿತು. ಶಿಕ್ಷಣ ಮತ್ತು ಆಡಳಿತ ರಂಗದಲ್ಲಿ ಮೀಸಲಾತಿ ಇರಬೇಕು, ಅದಕ್ಕಾಗಿಯೇ ಒಂದು ಸಮಿತಿ ರಚಿಸಬೇಕು ಎಂಬುದು ಮಹಾರಾಜರ ನಿಲುವು; ಮೀಸಲಾತಿಯಿಂದ ಪ್ರತಿಭೆಗೆ ಧಕ್ಕೆಯೊದಗುತ್ತದೆ ಹಾಗೂ ಅದಕ್ಷತೆ ಮೂಡುತ್ತದೆ ಎಂಬುದು ವಿಶ್ವೇಶ್ವರಯ್ಯನವರ ನಿಲುವು. ಈ ಈರ್ವರೂ ಕಡೆಯತನಕ ತಮ್ಮ ತಮ್ಮ ನಿಲುವುಗಳಿಗೇ ಬದ್ಧರಾಗಿದ್ದರು. ಪಡೆದ ಅಂಕಗಳಿಗಿಂತ ಅಭ್ಯರ್ಥಿಯ ಸಾಮಾಜಿಕ ಹಿನ್ನೆಲೆ ಮುಖ್ಯ ಎಂದವರು ಕೃಷ್ಣರಾಜರು. ಇದರಿಂದ ಮುನಿಸಿಕೊಂಡು ೯ ಡಿಸೆಂಬರ್ ೧೯೧೮ ರಂದು ತಮ್ಮ ದಿವಾನಗಿರಿಗೆ ನಮಸ್ಕಾರ ಹೇಳಿ ಹೊರಬಿದ್ದವರು ವಿಶ್ವೇಶ್ವರಯ್ಯನವರು. ಇಲ್ಲಿ ಗಮನಿಸಬೇಕಾದ್ದೆಂದರೆ, ಮೀಸಲಾತಿಯಿಂದ ಪ್ರತಿಭೆಗೆ, ದಕ್ಷತೆಗೆ ಧಕ್ಕೆಯಾಗುತ್ತದೆಂಬ ವಿಶ್ವೇಶ್ವರಯ್ಯನವರ ನಿಲುವನ್ನು ಇಂದಿಗೂ ಬೆಂಬಲಿಸುತ್ತಾ ಹಿಂದುಳಿದ ವರ್ಗಗಳಿಗೆ, ದಲಿತರ ಪ್ರಗತಿಗೆ ಅಡ್ಡಗಾಲು ಹಾಕಲು ಪ್ರಯತ್ನಿಸುತ್ತಲೇ ಇರುವ ಮೇಲ್ವರ್ಗದವರ ಬದಲಾಗದ ಮನೋಧರ್ಮವನ್ನು. ಈ ಸಂಬಂಧದಲ್ಲಿ, ಡಾ. ಎಸ್. ಚಂದ್ರಶೇಖರ್ ಹೇಳುವುದನ್ನು ಗಮನಿಸೋಣ. ನೇಮಕಾತಿ ಮತ್ತು ಸಾಮರ್ಥ್ಯಕ್ಕೆ ಸಂಬಂಧಪಟ್ಟಂತೆ ವಿಶ್ವೇಶ್ವರಯ್ಯನವರ ವಿಚಾರಗಳು ಅವರ ಕಾಲಕ್ಕೇ ಏಕೆ ಈಗಿನ ಕಾಲದ ಬಹುಪಾಲು ಸಮುದಾಯಕ್ಕೆ ಒಪ್ಪಿಗೆಯಾಗದೆ ಹೋಗುತ್ತವೆನ್ನುತ್ತಾರೆ ಅವರು. ಆಗ ರಾಜಕೀಯವಾಗಿ ಪ್ರಬಲವಾಗುತ್ತಿದ್ದ ಬ್ರಾಹ್ಮಣೇತರ ಸಮುದಾಯದ ಜೊತೆಗೆ ಹೊಂದಿಕೊಳ್ಳುವುದು ಇವರಿಗೆ ಸಾಧ್ಯವಾಗಲಿಲ್ಲ. ಈ ನೀತಿ, ನಿಯಮಗಳಿಗೆ ಸಂಬಂಧಿಸಿದಂತೆ ಮಹಾರಾಜರು ಹಾಗೂ ದಿವಾನ್ ವಿಶ್ವೇಶ್ವರಯ್ಯನವರಿಗೆ ಹೊಂದಾಣಿಕೆ ಸಾಧ್ಯವಾಗಲಿಲ್ಲವಾದ್ದರಿಂದ - ಇದೇ ವಿಶ್ವೇಶ್ವರಯ್ಯನವರ ರಾಜೀನಾಮೆಗೆ ಕಾರಣವಾಯಿತು. ಈ ರೀತಿಯಲ್ಲಿ ದಿವಾನರಾದ ವಿಶ್ವೇಶ್ವರಯ್ಯನವರು ಬ್ರಾಹ್ಮಣೇತರ ವರ್ಗಗಳ ರಾಜಕೀಯ ಚಟುವಟಿಕೆಗಳ ಕಾರಣದಿಂದ ತಮ್ಮ ಸ್ಥಾನವನ್ನು ತೆರವು ಮಾಡಬೇಕಾಯಿತೆಂದು ವಿಶ್ಲೇಷಿಸುತ್ತಾರೆ (ಚಂದ್ರಶೇಖರ್ : ೧೯೮೩ : ೪೮-೪೯).

ಇಲ್ಲಿ ಎರಡು ಪ್ರಶ್ನೆಗಳಿವೆ. ಒಂದು, ದಕ್ಷತೆ ಅಥವಾ ಪ್ರತಿಭೆ ಎಂದರೇನು? ಎರಡು, ಮೀಸಲಾತಿಯಿಂದ 'ಮೆರಿಟ್ ಸಿದ್ಧಾಂತ'ಕ್ಕೆ ಧಕ್ಕೆಯಾಗುತ್ತದೆಯೇ? ಮೊದಲನೇ ಪ್ರಶ್ನೆಗೆ ಉತ್ತರವೆಂದರೆ, ಭಾರತೀಯ ಸಂದರ್ಭದಲ್ಲಿ ನಮ್ಮ ಸಂವಿಧಾನ ಪತ್ರಿ ಹಿಡಿಯುವ ಸರ್ವರಿಗೂ ಸಮಾನ ಬದುಕು, ಗೌರವ ಮತ್ತು ಅವಕಾಶಗಳನ್ನು ನೀಡುವ ಸಾಮಾಜಿಕ ಬದಲಾವಣೆಯನ್ನು ತರುವ ದಿಕ್ಕಿನತ್ತ ನಮ್ಮ ಆಡಳಿತಗಾರರು ಕಾರ್ಯಪ್ರವೃತ್ತರಾಗಿ ಯಶಸ್ಸು ಗಳಿಸುವುದೇ 'ದಕ್ಷತೆ' (ಗೋಪಿನಾಥ್ : ೧೯೯೫ : ೧೪). ಪ್ರತಿಭಾ ಸಿದ್ಧಾಂತವೆಂಬುದೇ ಒಂದು 'ಢೋಂಗಿ'; ಮೀಸಲಾತಿ ವಿರೋಧಿಗಳು ಇಂದಿಗೂ ಹೇಳುತ್ತಿರುವಂತೆ, 'ಪ್ರತಿಭೆಯೆಂದರೆ ಓದುವುದು ಹಾಗೂ ಬರೆಯುವುದು' ಅಷ್ಟೇ ಅಲ್ಲ (ಅಲ್ಲೇ : ೧೬). ಎರಡನೇ ಪ್ರಶ್ನೆಗೆ ನಮ್ಮ ಸಂವಿಧಾನವೇ ಉತ್ತರಿಸುತ್ತದೆ. ಜಾತಿವ್ಯವಸ್ಥೆಯ ಅನ್ಯಾಯವನ್ನು ನಿರ್ಮೂಲಗೊಳಿಸಲು ಮೀಸಲಾತಿ ಒಂದು ಸಾಧನವಾಗಿರುವಂತೆಯೇ, ಜಾತಿಪದ್ಧತಿ ವಿಧಿಸಿದ ಅಸಮರ್ಥತೆಗಳಿಗೆ ಬಲಿಯಾಗಿರುವ ಬಹುಸಂಖ್ಯಾತರಿಗೆ ಸಾಮಾಜಿಕ ನ್ಯಾಯ ಒದಗಿಸುವುದೇ ಮೀಸಲಾತಿಯ ಉದ್ದೇಶ. "ಮೀಸಲಾತಿ ನಮ್ಮ 'ಮಾನವ ಹಕ್ಕು'" (ರಾಜಶೇಖರ್ : ೧೯೮೭ : ೨೮). ಹಿಂದುಳಿದ ಜನಾಂಗಗಳ ಜೀವನದ ಕಹಿ ಅನುಭವಗಳು, ಅವರು ಆಡಳಿತಗಾರರಾಗಿ ಕಾರ್ಯ ನಿರ್ವಹಿಸುವಾಗ ಅವರಿಗೆ ಅತಿದೊಡ್ಡ ಆಸ್ತಿಯಾಗುತ್ತವೆ ಎನ್ನುತ್ತಾರೆ ಬಿ.ಪಿ. ಮಂಡಲ್. ಸಂಕ್ಷಿಪ್ತವಾಗಿ ಹೇಳುವುದಾದರೆ, ಮೀಸಲಾತಿ ನೀತಿ ಕುರಿತ ಈವರೆಗಿನ ಅಧ್ಯಯನಗಳು ಸಾಬೀತು ಪಡಿಸುವಂತೆ, ಮೀಸಲಾತಿಯಿಂದ ದಕ್ಷತೆ-ಅರ್ಹತೆಗಳಿಗೆ ಧಕ್ಕೆಯಾಗುತ್ತದೆಂಬುದು ಮೇಲ್ವರ್ಗದವರು ಹೇಳುತ್ತಾ ಬಂದಿರುವ 'ಕಪೋಲಕಲ್ಪಿತ ಹಸಿಸುಳ್ಳು'.

ಇದರ ಇನ್ನೊಂದು ಮಗ್ಗುಲನ್ನೂ ಇಲ್ಲಿ ಗಮನಿಸಬಹುದು. ದಲಿತರು ಅಥವಾ ಅಸ್ಪೃಶ್ಯರ ಮಟ್ಟಿಗೆ, ೧೯೩೨ ರಲ್ಲಿ ಗಾಂಧಿ ಮತ್ತು ಅಂಬೇಡ್ಕರ್‌ರ ನಡುವೆ ಏರ್ಪಟ್ಟ ಪೂನಾ ಒಪ್ಪಂದ (ಪೂನಾ ಪ್ಯಾಕ್ಟ್) ಬಹು ಮುಖ್ಯವಾದುದು. ಇದು ಎಲ್ಲಾ ಕ್ಷೇತ್ರಗಳಲ್ಲೂ ದಲಿತರ ಬದುಕಿನ ದಿಕ್ಕನ್ನೇ ಬದಲಾಯಿಸಿದ ಒಪ್ಪಂದ ಎಂದೇ ಭಾವಿಸಲಾಗುತ್ತದೆ. ಗಾಂಧಿಯವರ 'ಮಹಾತ್ಮ'ನ ಮುಖವಾಡ ಹಾಗೂ ಕಾಂಗ್ರೆಸ್ ಪಕ್ಷದ 'ಸುಳ್ಳು ರಾಷ್ಟ್ರೀಯ ಧೋರಣೆ'ಗಳನ್ನು ಬಯಲು ಮಾಡಿದ್ದು ಈ ಒಪ್ಪಂದ. ಇದನ್ನು ಸ್ವತಃ ಡಾ. ಅಂಬೇಡ್ಕರರೇ ಕಟುವಾದ ಮಾತುಗಳಲ್ಲಿ ನಿರೂಪಿಸಿದ್ದಾರೆ. ಇಂದಿನ ರಾಜಕೀಯ ಹಾಗೂ ಇತರ ಕ್ಷೇತ್ರಗಳಲ್ಲಿಯ ಮೀಸಲಾತಿ ಸಮಸ್ಯೆಗೂ, ಅಂದು ರಾಷ್ಟ್ರೀಯ ನಾಯಕರೆಲ್ಲರೂ ಮಾಡಿಕೊಂಡ ಈ ಒಪ್ಪಂದಕ್ಕೂ ನೇರ ಹಾಗೂ ಪರೋಕ್ಷ ಸಂಬಂಧಗಳಿರುವುದೇ ಇಲ್ಲಿ ಗಮನಿಸಬೇಕಾದ ಪ್ರಮುಖ ಅಂಶ.

೧೯೩೦ ನವೆಂಬರ್‌ನಲ್ಲಿ ಉದ್ಘಾಟನೆಗೊಂಡ ಭಾರತದ ದುಂಡುಮೇಜಿನ ಪರಿಷತ್ತಿನಲ್ಲಿ ಪ್ರಥಮಬಾರಿಗೆ ಇಬ್ಬರು ಅಸ್ಪೃಶ್ಯರನ್ನು ಪ್ರತ್ಯೇಕವಾಗಿ ಪ್ರತಿನಿಧಿಸಲು ಆಯ್ಕೆ ಮಾಡಲಾಗಿತ್ತು. ಅವರೆಂದರೆ ಡಾ. ಅಂಬೇಡ್ಕರ್ ಮತ್ತು ದಿವಾನ್ ಬಹಾದೂರ್ ಆರ್. ಶ್ರೀನಿವಾಸನ್. ಇವರಿಂದ ವ್ಯಕ್ತಪಟ್ಟುದುದೇನೆಂದರೆ, ಅಸ್ಪೃಶ್ಯರು ಹಿಂದೂಗಳಿಗಿಂತ ಬೇರೆಯೇ ಆದ ಅಸ್ತಿತ್ವ ಪಡೆದಿದ್ದಾರೆ ಹಾಗೂ ರಾಜ್ಯಾಂಗ ರಚಿಸುವಲ್ಲಿ ಅಸ್ಪೃಶ್ಯರೂ ತಮ್ಮ ಅಭಿಪ್ರಾಯ ನೀಡುವ ಹಕ್ಕುಳ್ಳವರಾಗಿದ್ದಾರೆಂಬುದು. ವಾಸ್ತವದಲ್ಲಿ, ಭಾರತದ ರಾಜ್ಯಾಂಗ ರಚಿಸುವಲ್ಲಿ

ಭಾರತೀಯರ ಹಕ್ಕುಗಳ ದೃಷ್ಟಿಯಿಂದ ಈ ಪರಿಷತ್ತು ಅತ್ಯಂತ ಮಹತ್ವಪೂರ್ಣ ವಾದುದಾಗಿದ್ದಿತು. ಆದರೆ ಡಾ. ಅಂಬೇಡ್ಕರರೇ ವ್ಯಕ್ತಪಡಿಸಿದಂತೆ, ಅಸ್ಪೃಶ್ಯರನ್ನು ಹೊರತುಪಡಿಸಿ ಇತರ ಜನಾಂಗಗಳ ರಾಜಕೀಯ ಬೇಡಿಕೆಗಳನ್ನಷ್ಟೆ ಈ ದುಂಡುಮೇಜಿನ ಪರಿಷತ್ತಿನಲ್ಲಿ ಈಡೇರಿಸಲಾಯಿತು. ಇದಕ್ಕೆ ಹಲವಾರು ಕಾರಣಗಳಿದ್ದವು. ಡಾ. ಅಂಬೇಡ್ಕರ್ ನಿರೀಕ್ಷಿಸಿದ್ದಂತೆ, ಇಂಗ್ಲಿಷರ ನಿರ್ಗಮನದ ನಂತರ ಭಾರತ ಎಂದಿನಂತೆ ಪುರೋಹಿತ ವರ್ಗದ ಹಿಡಿತಕ್ಕೆ ಬರುವುದು ಹಾಗೂ ಇಲ್ಲಿಯ ಪ್ರತಿಯೊಂದು ಜನಾಂಗ ಮತ್ತು ರಾಷ್ಟ್ರೀಯತೆಗಳು ನಿರ್ನಾಮವಾಗುವುದು ಖಚಿತವಾಗಿತ್ತು. ಈ ನಿಟ್ಟಿನಲ್ಲಿ ಕೈಗೊಳ್ಳಬೇಕಾದ ತುರ್ತು ತೀರ್ಮಾನಗಳೆಂದರೆ, ದುರ್ಬಲ ಜನಾಂಗಗಳಾದ ದಲಿತರು, ಕ್ರೈಸ್ತರು, ಮುಸಲ್ಮಾನರು, ಸಿಖ್ಖರು ಮುಂತಾದವರನ್ನು ಸ್ವತಂತ್ರಗೊಳಿಸುವುದು; ಈ ಎಲ್ಲ ವರ್ಗಗಳಿಗೆ ಅಧಿಕಾರ ಮತ್ತು ಸೇವೆಗಳಲ್ಲಿ ಸಮಾನವಾದ ಪ್ರಾತಿನಿಧ್ಯಕ್ಕೆ ಒತ್ತಾಯಿಸುವುದು; ಸಂಸದೀಯ ವ್ಯವಸ್ಥೆಯಲ್ಲೆ ಪ್ರತಿಯೊಂದು ವರ್ಗಕ್ಕೂ 'ಸ್ವಯಂ ನಿರ್ಣಯಾಧಿಕಾರ'ವನ್ನು ನೀಡುವ ಸಲುವಾಗಿ ಪ್ರತ್ಯೇಕ ಚುನಾವಣಾ ವ್ಯವಸ್ಥೆಯನ್ನು ಮಾಡುವುದು.

ದುಂಡುಮೇಜಿನ ಪರಿಷತ್ತಿನಲ್ಲಿ ನಡೆದ ಚರ್ಚೆಯ ಬಳಿಕ ಇಂಗ್ಲಿಷ್ ಸರ್ಕಾರ ಕೋಮುವಾರು ನಿರ್ಣಯದ ಮೂಲಕ ಪ್ರತ್ಯೇಕ ಚುನಾವಣಾ ವ್ಯವಸ್ಥೆಗೆ ಸಮ್ಮತಿಸಿತು. ಇದರಿಂದಾದ ಪರಿಣಾಮವೆಂದರೆ, ಈ ನಿರ್ಣಯದ ಮೂಲಕ ದಲಿತರಿಗೆ ದೊರಕುವ ರಾಜಕೀಯ ಪ್ರತ್ಯೇಕತೆಯನ್ನು ಗಾಂಧೀಜಿ ವಿರೋಧಿಸಿದರು ಹಾಗೂ ಆಮರಣಾಂತ ಉಪವಾಸ ಕೈಗೊಂಡರು. ಅಲ್ಲದೆ, ಗಾಂಧಿಯವರೊಂದಿಗೆ ಈ ಸಂಬಂಧದಲ್ಲಿ ಮಾತುಕತೆ ನಡೆಸುವಂತೆ ಡಾ. ಅಂಬೇಡ್ಕರ್‌ರ ಮೇಲೆ ಇತರರು ಒತ್ತಡ ಹೇರಿದರು. ಇದರಿಂದ ದೊರೆತ ಫಲಿತಾಂಶವೆಂದರೆ, ಇಂಗ್ಲಿಷರು ದಲಿತರಿಗೆ ನೀಡಿದ್ದ ೭೮ ಪ್ರತ್ಯೇಕ ಸ್ಥಾನಗಳಿಗೆ ಬದಲು ೧೫೧ ಮೀಸಲು ಸ್ಥಾನಗಳು ದೊರೆತದ್ದು. ಉದ್ಯೋಗ ಮತ್ತು ಶಿಕ್ಷಣದಲ್ಲಿ ಜನಸಂಖ್ಯೆಗನುಗುಣವಾಗಿ ಮೀಸಲಾತಿ ನೀಡಲು ಸಮ್ಮತಿಸಲಾಯಿತು. ಪೂನಾ ಒಪ್ಪಂದ ದಲಿತರಿಗೆ ಮೀಸಲು ಸ್ಥಾನಗಳನ್ನು ಹೆಚ್ಚಿಸಲು ಕಾರಣವೆನಿಸಿದರೂ ಕೋಮುವಾರು ನಿರ್ಣಯ ನೀಡಿದ್ದ ಎರಡು ಮತದಾನದ ಹಕ್ಕನ್ನು ಕಸಿದುಕೊಂಡಿತು.

ಪೂನಾ ಒಪ್ಪಂದ ಹಿಂದೂಗಳಲ್ಲಿ ಅಸಮಾಧಾನದ ಕಿಡಿ ಹುಟ್ಟಿಸಿದ್ದರೆ, ದಲಿತ ಸಮುದಾಯಕ್ಕೆ ಅನ್ಯಾಯವೆಸಗಿತ್ತು. ಆ ನಂತರ ಒಮ್ಮತದಿಂದ ಈ ಒಪ್ಪಂದದ ತೀರ್ಮಾನವನ್ನು ಭಾರತ ಸರ್ಕಾರದ ಕಾಯಿದೆಯಲ್ಲಿ ಸೇರಿಸಲಾಯಿತು. ಗಾಂಧೀಜಿ ಕೈಗೊಂಡಿದ್ದ ಆಮರಣಾಂತ ಉಪವಾಸ ತಪ್ಪಿಸುವ ಜವಾಬ್ದಾರಿ ಹೊತ್ತಿದ್ದ ಡಾ. ಅಂಬೇಡ್ಕರ್ ಆಮೇಲೆ, "…. ಒಂದು ಕಡೆ, ಮಾನವೀಯತೆಯುಳ್ಳ ಮನುಷ್ಯನಾಗಿ, ಗಾಂಧಿಯನ್ನು ಸಾವಿನ ದವಡೆಯಿಂದ ಪಾರುಮಾಡಬೇಕಿತ್ತು. ಮತ್ತೊಂದು ಕಡೆ, ಪ್ರಧಾನಮಂತ್ರಿಯವರು ಅಸ್ಪೃಶ್ಯರಿಗೆ ನೀಡಿದ್ದ ರಾಜಕೀಯ ಹಕ್ಕುಗಳನ್ನು ಉಳಿಸಿಕೊಳ್ಳುವ ಹೊಣೆಗಾರಿಕೆಯೂ ನನ್ನ ಹೆಗಲ ಮೇಲಿತ್ತು. ನಾನು ಮೊದಲನೆಯದನ್ನೇ ಆಯ್ಕೆ ಮಾಡಿಕೊಂಡೆ. ಮನುಷ್ಯತ್ವದ ಕರೆಯನ್ನು ಮನ್ನಿಸಿ, ಗಾಂಧಿಗೆ ಒಪ್ಪಿಗೆಯಾಗುವಂತೆ ಕೋಮುವಾರು ನಿರ್ಣಯವನ್ನು ತಿದ್ದುಪಡಿ ಮಾಡಲು ಒಪ್ಪಿಕೊಂಡೆ" ಎಂದು ಹೇಳಿದರು. ಹಾಗೆಯೇ, ಪೂನಾ ಒಪ್ಪಂದ ಕುರಿತ ತಮ್ಮ ಪುಸ್ತಕದ ಕೊನೆಯಲ್ಲಿ ಅವರು ವಿಷಾದಭರಿತರಾಗಿ ಬರೆದಿರುವುದು ಹೀಗೆ:

"ಪೂನಾ ಒಪ್ಪಂದದಲ್ಲಿನ ರಸವನ್ನು ಹೀರಿಕೊಂಡ ಕಾಂಗ್ರೆಸ್ ಪಕ್ಷ, ಸಿಪ್ಪೆಯನ್ನು ಅಸ್ಪೃಶ್ಯರ ಮುಖದ ಮೇಲೆ ಉಗುಳಿತು" (ಅಂಬೇಡ್ಕರ್ : ೧೯೯೫ : ೬೪).

ಇಂಗ್ಲಿಷ್ ಸರ್ಕಾರ ಒಪ್ಪಿದ್ದ, ಕೋಮುವಾರು ನಿರ್ಣಯದ ಮೂಲಕ ಪ್ರತ್ಯೇಕ ಚುನಾವಣಾ ವ್ಯವಸ್ಥೆ ಜಾರಿಗೆ ಬಂದಿದ್ದಲ್ಲಿ ದಲಿತರಿಗೆ ಅಪಾರ ಲಾಭವಾಗುತ್ತಿದ್ದಿತೆಂಬುದರಲ್ಲಿ ಸಂಶಯವಿಲ್ಲ. ಈ ಕೋಮುವಾರು ನಿರ್ಣಯ ದಲಿತರಿಗೆ, ಕೆಲವು ನಿರ್ದಿಷ್ಟ ಸಂಖ್ಯೆಯ ಸ್ಥಾನಗಳಿಗೆ ದಲಿತ ಮತದಾರರಿಂದಲೇ ಆಯ್ಕೆಯಾದ ದಲಿತ ಅಭ್ಯರ್ಥಿಗಳನ್ನು ಪ್ರತಿನಿಧಿಗಳನ್ನಾಗಿ ಭರ್ತಿಮಾಡುವ; ಹಾಗೂ ಒಮ್ಮೆ ಪ್ರತ್ಯೇಕ ಚುನಾಯಕಗಳ ಮೂಲಕ - ಹೀಗೆ ಎರಡು ಬಾರಿ ಮತದಾನ ಮಾಡುವ ಎರಡು ಅನುಕೂಲತೆಗಳನ್ನು ಸೃಷ್ಟಿಸಿತ್ತು. ಈ ಕೋಮುವಾರು ನಿರ್ಣಯದ ಪ್ರಕಾರ, ಎರಡನೇ ಮತದಾನ ದಲಿತರಿಗೆ ಬೆಲೆ ಕಟ್ಟಲಾಗದ ಹಕ್ಕಾಗಿತ್ತು. ಪ್ರತಿ ಕ್ಷೇತ್ರದಲ್ಲಿ ೧೦ ಮತದಾರರ ಪೈಕಿ ಒಬ್ಬನು ದಲಿತ ಮತದಾರನಾಗಿರುತ್ತಿದ್ದ. ಈ ಪ್ರಮಾಣದ ಮತದಾನದ ಹಕ್ಕಿನ ಪರಿಣಾಮವಾಗಿ, ಸಾರ್ವತ್ರಿಕ ಚುನಾವಣೆಗಳಲ್ಲಿ ದಲಿತರು ನಿರ್ಣಾಯಕ ಪಾತ್ರ ವಹಿಸಬಲ್ಲವರಾಗಿದ್ದರು. ಯಾವುದೇ ಸಾಮಾನ್ಯ ಕ್ಷೇತ್ರದಲ್ಲಿ, ಯಾವನೇ ಹಿಂದೂ ಅಭ್ಯರ್ಥಿ ಅಸ್ಪೃಶ್ಯರನ್ನು ಅಲಕ್ಷಿಸುವ ಧೈರ್ಯ ಮಾಡುವಂತಿರಲಿಲ್ಲ; ಅಸ್ಪೃಶ್ಯರ ಮತಗಳ ಮೇಲೆ ಬಹಳಷ್ಟು ಅವಲಂಬಿತನಾಗಿರುವುದರಿಂದ, ಅವರನ್ನು ವಿರೋಧಿಸುವುದಾಗಲೀ ಅವರ ಹಿತಕ್ಕೆ ಧಕ್ಕೆ ತರುವಂತಹದ್ದಾಗಲೀ ಮಾಡುವ ಗೋಜಿಗೆ ಹೋಗುತ್ತಿರಲಿಲ್ಲ. ಇವೆಲ್ಲವುಗಳ ತಾತ್ಪರ್ಯವೆಂದರೆ, ಗಾಂಧಿಯ ಜೀವ ಉಳಿಸುವ ಇಡೀ ಪ್ರಯತ್ನದಲ್ಲಿ ದಲಿತರು ಭಾರೀ ಬೆಲೆ ತೆರಬೇಕಾಯಿತೆಂಬುದು ಸ್ಪಷ್ಟ. ಅಂದು ರಾಜಕೀಯವಾಗಿ ತಾವು ಕಳೆದುಕೊಂಡ ಪ್ರತ್ಯೇಕ ಸ್ಥಾನಗಳ ಅವಕಾಶದ ಕಾರಣದಿಂದಾಗಿ ಇಂದು ದಲಿತರು ತಾವು ಪಡೆಯುತ್ತಿರುವ ಮೀಸಲಾತಿಗಾಗಿ ರಾಜಕಾರಣಿಗಳ, ಅಧಿಕಾರಶಾಹಿಯ ಕಿರುಕುಳಗಳಿಗೆ ತುತ್ತಾಗುತ್ತಿದ್ದಾರೆ. ಸ್ವತಂತ್ರ ರಾಜಕೀಯ ಇಚ್ಛಾಶಕ್ತಿಯಿಲ್ಲದ್ದರಿಂದ ಇಂದು ದಲಿತರು ಪ್ರವೇಶ ಮಾಡುವ ಎಡೆಗಳಲ್ಲೆಲ್ಲ ಮೇಲ್ವರ್ಗದವರಿಂದ ನಾನಾ ತೆರನ ವಿರೋಧಗಳನ್ನು ಎದುರಿಸುವಂತಾಗಿದೆ.

ರಾಜಕೀಯವಾಗಿ, ದಲಿತರು ಒಪ್ಪಿದ ಮೀಸಲಾತಿ ಮೀಸಲುಕ್ಷೇತ್ರದಲ್ಲಿ ಮಾತ್ರ ಅವರು ಆಯ್ಕೆಗೊಳ್ಳುವ ಸ್ಥಿತಿಗೆ ತಂದಿದೆ. ಸಂವಿಧಾನಬದ್ಧ ಈ ಹಕ್ಕು ಎಷ್ಟು ಪ್ರಮಾಣದಲ್ಲಿ ಜಾರಿಯಾಗಿದೆಯೆಂಬುದೂ ಪ್ರಶ್ನೆಯಾಗುಳಿಯುತ್ತದೆ. ವಿವಿಧ ರಾಜಕೀಯ ಪಕ್ಷಗಳು ಈ ಮೀಸಲಾತಿಯನ್ನು ದುರುಪಯೋಗ ಪಡಿಸಿಕೊಳ್ಳುತ್ತಿರುವುದನ್ನು ಕಾಣಬಹುದು. ದಲಿತರ ಈ ಮೀಸಲಾತಿ ಆಧಾರದ ಮೇಲೆಯೇ ಅವರ ಅಭಿವೃದ್ಧಿ ಕಾರ್ಯಗಳನ್ನೂ ನಿರ್ಧರಿಸುವ ಪರಿಸ್ಥಿತಿ ಇರುವುದಂತೂ ದಿಟ. ಇದರಲ್ಲಿ ಉದ್ಯೋಗ ಮೀಸಲಾತಿ, ಶೈಕ್ಷಣಿಕ ಮೀಸಲಾತಿಗಳೂ ಸೇರುತ್ತವೆ. ರಾಜಕೀಯ ಮೀಸಲಾತಿಯಂತೆಯೇ ಇವು ಸಹಾ ಉಳ್ಳವರ, ಪ್ರಭಾವಿಗಳ ಕಾರಣದಿಂದಾಗಿ ದಲಿತರ ಕೈತಪ್ಪಿರುವುದು, ಅವನ್ನು ನ್ಯಾಯಯುತವಾಗಿ ಪಡೆಯುವಲ್ಲಿ ದಲಿತರು ಹೋರಾಡಬೇಕಿರುವುದು ಮುಂದುವರೆದಿದೆ. ಮೀಸಲಾತಿ ಕುರಿತು ದಲಿತರಲ್ಲಿಯೇ ಗೊಂದಲವೇರ್ಪಟ್ಟಿರುವುದು, ಅವರು ಜಿಜ್ಞಾಸೆಗೊಳಗಾಗಿರುವುದು ದಿಟ.

ಪ್ರೊ. ಬಿ. ಕೃಷ್ಣಪ್ಪನವರು ಹೇಳುವಂತೆ, ಯಾರಾದರೂ ಮೀಸಲಾತಿ ಮೇಲುಜಾತಿಯವರು ದಲಿತರಿಗೆ ತೋರಿಸುವ ಅನುಕಂಪ, ಕೊಡುವ ಭಿಕ್ಷೆ ಎಂದು

ಭಾವಿಸಿದ್ದರೆ ಅದು ತಪ್ಪು. ಮೀಸಲಾತಿ ಶತಮಾನಗಳ ಶೋಷಣೆಗಾಗಿ ದಲಿತರು ಗಳಿಸಿರುವ ಹಕ್ಕೇ ಹೊರತು ಅದು ಭಿಕ್ಷೆ ಅಲ್ಲ... ಪೂನಾ ಒಪ್ಪಂದದ ನಂತರ, ಸ್ವಾತಂತ್ರ್ಯದ ತರುವಾಯ ಬಾಬಾಸಾಹೇಬ ಅಂಬೇಡ್ಕರ್ ಅವರು, ಮೀಸಲಾತಿಗೆ ಕೇವಲ ಹತ್ತು ವರ್ಷಗಳು ಸಾಕು ಎಂದಿದ್ದರು. ಈಗ ಆ ಹತ್ತು ವರ್ಷಗಳು ಕಳೆದು ಮತ್ತೆ ಇಪ್ಪತ್ತು ವರ್ಷಗಳು ಮೀಸಲಾತಿಯನ್ನು ಮುಂದುವರೆಸಲಾಗಿದೆ. ಕಾರಣ ರಾಜ್ಯಾಂಗದ ಮೂಲ ಉದ್ದೇಶಗಳನ್ನು ಈ ಮೀಸಲಾತಿ ಸಾಧಿಸಿಲ್ಲ (ಕೃಷ್ಣಪ್ಪ : ೧೯೯೯ : ೨೧, ೨೭). ಶೈಕ್ಷಣಿಕ ಮೀಸಲಾತಿ, ರಾಜಕೀಯ ಮೀಸಲಾತಿಗಳು ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿ ಹಾಕಿಕೊಂಡಿರುವಂತೆಯೇ ಇದೀಗ ಉದ್ಯೋಗ ಮೀಸಲಾತಿಯೂ ಇಂಥದೇ ಸಮಸ್ಯೆ ಎದುರಿಸುತ್ತಲಿದೆ. ಪರಿಶಿಷ್ಟ ಜಾತಿ-ವರ್ಗದವರಿಗೆ ಬಡ್ತಿಯಲ್ಲಿ ಮೀಸಲಾತಿ ನೀಡುವ ವಿಷಯವೇ ಈಗ ವಿವಾದಕ್ಕೆ ಕಾರಣವಾಗಿರುವುದು. ಇದು ದಲಿತರಲ್ಲಿ ಮತ್ತೆ ಚಳವಳಿ ಸ್ವರೂಪದ ಹೋರಾಟಕ್ಕೆ ಸಜ್ಜುಗೊಳ್ಳಲು ಕಾರಣವೆನಿಸಿದೆ.

ಇದಕ್ಕೆ ಪೂರಕವಾಗಿ, ಮೀಸಲಾತಿ ಕುರಿತು ಈಚೆಗೆ ಸುಪ್ರಿಂ ಕೋರ್ಟ್ ನೀಡಿರುವ ತೀರ್ಪುಗಳು ಸಹಾ 'ಗಾಯದ ಮೇಲೆ ಬರೆ ಎಳೆಯುವ' ಕೆಲಸ ಮಾಡಿವೆಯೆಂದು ಭಾವಿಸಲಾಗುತ್ತದೆ. 'ರಾಷ್ಟ್ರದ ಹಿತಾಸಕ್ತಿಯ ದೃಷ್ಟಿಯಿಂದ' ವೈದ್ಯಕೀಯ ಹಾಗೂ ಇಂಜಿನಿಯರಿಂಗ್ ಸೂಪರ್ ಸ್ಪೆಷಾಲಿಟಿ ಅಧ್ಯಯನ ತರಗತಿಗಳಿಗೆ ಮಾಡಿಕೊಳ್ಳುವ ಭರ್ತಿ ಅರ್ಹತೆ ಆಧಾರದಲ್ಲಿ ಮಾತ್ರವೇ ನಡೆಯಬೇಕು; ಇದಕ್ಕೆ ಮೀಸಲಾತಿ ಕೂಡದು ಎಂಬ ಸುಪ್ರಿಂ ಕೋರ್ಟ್‌ನ ತೀರ್ಪು (ಆಗಸ್ಟ್ ೧೯೯೯) ಸಹಜವಾಗಿಯೇ ಹಿಂದುಳಿದ ಮತ್ತು ದಲಿತ ವರ್ಗಗಳಿಗೆ ಆಘಾತವನ್ನುಂಟು ಮಾಡಿದೆ. ವೈದ್ಯಕೀಯ ಸ್ನಾತಕೋತ್ತರ ತರಗತಿಗಳಿಗೆ ಪ್ರವೇಶ ನೀಡುವ ಸಂದರ್ಭದಲ್ಲಿ ಸಾಮಾನ್ಯ ವರ್ಗ ಹಾಗೂ ಮೀಸಲಾತಿ ವರ್ಗದ ವಿದ್ಯಾರ್ಥಿಗಳ ಕನಿಷ್ಠ ಅಂಕಗಳ ನಡುವೆ ಭಾರೀ ವ್ಯತ್ಯಾಸ ಇರಬಾರದೆಂದು ಸೂಚಿಸಿದೆ. ವೈದ್ಯಕೀಯ ಸ್ನಾತಕೋತ್ತರ ತರಗತಿಗಳಲ್ಲಿ ಮೀಸಲು ವರ್ಗದವರಿಗೆ ಕನಿಷ್ಠ ಅಂಕಗಳನ್ನು ಸಾಮಾನ್ಯ ವರ್ಗದ ಜನರಿಗಿಂತ ಕೆಳಮಟ್ಟದಲ್ಲಿ ನಿಗದಿ ಮಾಡಿದ ಉತ್ತರಪ್ರದೇಶ ಹಾಗೂ ಮಧ್ಯಪ್ರದೇಶಗಳ ಎರಡು ಕಾನೂನುಗಳನ್ನು ಪೀಠ ರದ್ದುಪಡಿಸುವುದರೊಡನೆ, ಮೀಸಲು ವರ್ಗಕ್ಕೆ ಶೇ. ೨೦ ಹಾಗೂ ಸಾಮಾನ್ಯ ವರ್ಗಕ್ಕೆ ಶೇ. ೪೫ರ ಕನಿಷ್ಠ ಅಂಕ ನಿಗದಿಮಾಡಿದುದು ಸಂವಿಧಾನದ ೧೫(೪) ವಿಧಿಯನ್ವಯ ಸರಿಯಲ್ಲ ಎಂದು ತನ್ನ ತೀರ್ಪಿನಲ್ಲಿ ಹೇಳಿದೆ.

ನಿರೀಕ್ಷಿಸಿದಂತೆಯೇ, ಈ ತೀರ್ಪಿನ ವಿರುದ್ಧ ದಲಿತ ಮತ್ತು ಹಿಂದುಳಿದ ಸಂಘಟನೆಗಳ ವತಿಯಿಂದ ಪ್ರತಿಭಟನೆಗಳು ನಡೆದವು. ವಾಸ್ತವದಲ್ಲಿ, ೧೯೯೨ರ ಮಂಡಲ್ ತೀರ್ಪು ಪರಿಶಿಷ್ಟ ನೌಕರರ ಬಡ್ತಿ ಮೀಸಲಾತಿಯನ್ನು ರದ್ದು ಪಡಿಸಿದ ಬಳಿಕ ದಸಂಸ ಮತ್ತಿತರ ಸಂಘಟನೆಗಳ ಹೋರಾಟದ ಫಲವಾಗಿ ಸಂವಿಧಾನ ತಿದ್ದುಪಡಿಯಾಗಿ ಪರಿಶಿಷ್ಟರಿಗೆ ಬಡ್ತಿ ಮೀಸಲಾತಿ ನೀಡುವ ೧೬(೪ಎ) ವಿಧಿ ಜಾರಿಯಾಯಿತು. ಈಗ ಸುಪ್ರಿಂ ಕೋರ್ಟ್ ನೀಡಿದ ತೀರ್ಪು ಈ ವರ್ಗಗಳಲ್ಲಿ ಮತ್ತೆ ಆತಂಕದ ಅಲೆ ಎಬ್ಬಿಸಿದಂತಾಗಿದೆ. ಸಂಘಟನೆಗಳು ಇದನ್ನು ತೀವ್ರವಾಗಿ ಪ್ರತಿಭಟಿಸಿವೆ. ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಉನ್ನತ ಶಿಕ್ಷಣದಲ್ಲಿ ದಲಿತರಿಗೆ ಮಾತ್ರವಲ್ಲ, ಹಿಂದುಳಿದವರು ಮತ್ತು ಅಲ್ಪಸಂಖ್ಯಾತರಿಗೂ ಮೀಸಲಾತಿಯನ್ನು ನಿರಾಕರಿಸುವ ಮೂಲಕ 'ಮೇಲ್ಜಾತಿ-ಮೇಲ್ವರ್ಗಗಳ ಪರವಾದ ತೀರ್ಪು' ನೀಡಿದೆಯೆಂದು

ಸುಪ್ರಿಂ ಕೋರ್ಟ್‌ನ ನಿಲುವನ್ನು ಟೀಕಿಸಿವೆ. ಅವುಗಳ ಪ್ರಕಾರ, ದಲಿತರ ಕೊರಳಿಗೆ ಉರುಳಾಗುವ ಈ ತೀರ್ಪು 'ಕೋರ್ಟ್‌ಗಳಲ್ಲಿ ಮನುಸ್ಮೃತಿ ಹೆಡೆ ಎತ್ತಿದೆ' ಎಂಬುದರ ಸಂಕೇತ.

ಹಾಗೆಯೇ, ಸೆಪ್ಟೆಂಬರ್ ೧೯೯೯ರಲ್ಲಿ ಸುಪ್ರಿಂ ಕೋರ್ಟ್ ನೀಡಿದ ಇನ್ನೊಂದು ತೀರ್ಪು ಸಹಾ ದಲಿತರಿಗೆ ಬಡ್ತಿ ಮೀಸಲಾತಿಯನ್ನು ಅಪರೋಕ್ಷವಾಗಿ ತಡೆಹಿಡಿದುದನ್ನು ಸ್ಪಷ್ಟಪಡಿಸಿದೆ. ಇದನ್ನು ಸಹಾ ತೀವ್ರವಾಗಿ ಪ್ರತಿಭಟಿಸಿರುವ ಸಂಘಟನೆಗಳು, ಇದು ಮೀಸಲಾತಿಯನ್ನು ಅಪರೋಕ್ಷವಾಗಿ ರದ್ದುಪಡಿಸುವ ವೈದಿಕ ತಂತ್ರವೆಂದು ಕರೆದಿವೆ. ದಲಿತರು, ಹಿಂದುಳಿದವರು ಮತ್ತು ಅಲ್ಪಸಂಖ್ಯಾತರಿಗೆ ಸುಪ್ರಿಂ ಕೋರ್ಟ್ ಮತ್ತು ಹೈಕೋರ್ಟ್ ನ್ಯಾಯಾಧೀಶರ ಹುದ್ದೆಗಳಿಗೆ ಮೀಸಲಾತಿ ನೀಡುತ್ತಿಲ್ಲ; ಬಹುತೇಕ ನ್ಯಾಯಾಧೀಶರು ಮೇಲ್ಜಾತಿಗಳಿಗೆ ಸೇರಿರುವುದರಿಂದ ಅವರ ಹಿತಾಸಕ್ತಿ ಕಾಪಾಡುವ ತೀರ್ಪುಗಳು ಹೊರಬರುತ್ತಿವೆಯೆಂದು ಆಕ್ಷೇಪಿಸಿವೆ. ಒಟ್ಟಾರೆ ಅಭಿಪ್ರಾಯವೆಂದರೆ, ದೇಶದಲ್ಲಿ ಶೇ. ೮೫ ರಷ್ಟಿರುವ ಪರಿಶಿಷ್ಟ ಜಾತಿ-ಬುಡಕಟ್ಟುಗಳು ಹಾಗೂ ಹಿಂದುಳಿದ ಸಮುದಾಯಗಳ ಮೇಲೆ ನ್ಯಾಯಾಂಗ ನಡೆಸಿರುವ ದೌರ್ಜನ್ಯ ಇದು. ಶೋಷಿತರನ್ನು ಇನ್ನಷ್ಟು ದಿಕ್ಕುಗೆಡಿಸುವ ಪ್ರಯತ್ನ ಮಾತ್ರ. ಇಂಥಾ ತೀರ್ಪು ಕೊಡುವ ನ್ಯಾಯಾಧೀಶರುಗಳಿಗೆ ಭಾರತೀಯ ಸಮಾಜದ ಸಂಕೀರ್ಣತೆಗಳನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವಿರುವುದೇ ಎಂಬ ಮೂಲಭೂತ ಪ್ರಶ್ನೆಯನ್ನೂ ಈ ಸಮುದಾಯಗಳು ಕೇಳತೊಡಗಿವೆ. ಇಂಥಾ ತೀರ್ಪುಗಳು ನ್ಯಾಯಾಂಗದ ವಿಚಿತ್ರ ವೈಖರಿಗೆ ಹಿಡಿದ ಕನ್ನಡಿಯಂತಿವೆ ಎಂದಿರುವುದರಲ್ಲಿ ಹುರುಳಿಲ್ಲದಿಲ್ಲ.

ಪರಿಶಿಷ್ಟ ಜಾತಿ-ಪಂಗಡಗಳ ಮೀಸಲಾತಿಗೆ ಸಂಬಂಧಿಸಿದಂತೆ ಇಲ್ಲಿ ಪ್ರಸ್ತಾಪಿಸಬೇಕಾದ ಇನ್ನೊಂದು ಸಂಗತಿಯೂ ಇದೆ. ರಾಜ್ಯದ ಗ್ರಾಮ ಪಂಚಾಯಿತಿಗಳಲ್ಲಿ ಪರಿಶಿಷ್ಟ ಜಾತಿ ಹಾಗೂ ಪಂಗಡಗಳಿಗೆ ಈಗ ಇರುವ ಶೇ. ೧೮ರ ಮೀಸಲಾತಿಯನ್ನು ಶೇ. ೨೮ಕ್ಕೆ ಹೆಚ್ಚಿಸಲು ಈಚೆಗೆ ಸರ್ಕಾರ ತೆಗೆದುಕೊಂಡಿರುವ ನಿರ್ಧಾರ (ಡಿಸೆಂಬರ್ ೧೯೯೯) ಸ್ವಾಗತಾರ್ಹ. ಈ ನಿರ್ಧಾರದಿಂದ ರಾಜ್ಯದ ಪ್ರತಿಯೊಂದು ಗ್ರಾಮ ಪಂಚಾಯಿತಿಯಲ್ಲಿ ಪರಿಶಿಷ್ಟ ಜಾತಿ-ಪಂಗಡಗಳಿಗೆ ಸೇರಿದವರಿಗೆ ಕನಿಷ್ಠ ಒಂದು ಸ್ಥಾನ ಮೀಸಲಿಡಲು ಸಹಾಯವಾಗುತ್ತದೆ. ಈ ಹೆಚ್ಚುವರಿ ಮೀಸಲಾತಿಯನ್ನು ಜಾರಿಗೆ ತರಲು ಪಂಚಾಯತ್‌ರಾಜ್ ಕಾಯಿದೆಗೆ ಸುಗ್ರೀವಾಜ್ಞೆ ಮುಖಾಂತರ ತಿದ್ದುಪಡಿ ತರಲಾಗಿದೆ. ಕರ್ನಾಟಕ ಪಂಚಾಯತ್ ರಾಜ್ ೧೯೯೩ರ ಕಾಯಿದೆ ಪ್ರಕಾರ ರಾಜ್ಯದಲ್ಲಿ ಅಸ್ತಿತ್ವದಲ್ಲಿದ್ದ ೫೬೪೦ ಗ್ರಾಮ ಪಂಚಾಯಿತಿಗಳನ್ನು ಮುಂದುವರೆಸಿಕೊಂಡು ಹೋಗುವುದಕ್ಕೆ ಅನುವಾಗುವಂತೆ ಕಾಯಿದೆ ತಿದ್ದುಪಡಿ ಮಾಡಿ ರಾಜ್ಯಪಾಲರು ಸುಗ್ರೀವಾಜ್ಞೆ ಹೊರಡಿಸಿರುವರು. ಪ್ರಸಕ್ತ ಪರಿಶಿಷ್ಟ ಜಾತಿಗೆ ೧೩, ೮೩೪ ಸ್ಥಾನಗಳು ಅಂದರೆ ಶೇ. ೧೫ ಹಾಗೂ ಪರಿಶಿಷ್ಟ ಪಂಗಡಗಳಿಗೆ ೩೮೪೨ ಸ್ಥಾನಗಳು ಅಂದರೆ ಶೇ. ೩ ರಷ್ಟು ಮೀಸಲಿರಿಸಲಾಗಿದೆಯೆಂತಲೂ ತಿಳಿಸಲಾಗಿದೆ. ಸರ್ಕಾರ ಕೈಗೊಂಡ ತೀರ್ಮಾನದ ಪ್ರಕಾರ, ಈ ಸುಗ್ರೀವಾಜ್ಞೆ ಆವರ್ತನೆ (ರೊಟೇಶನ್) ಆಧಾರದ ಮೇಲೆ ಪರಿಶಿಷ್ಟ ಜಾತಿ-ಪಂಗಡ, ಹಿಂದುಳಿದ ವರ್ಗ ಮತ್ತು ಮಹಿಳೆಯರಿಗೆ ಸ್ಥಾನಗಳನ್ನು ಮೀಸಲಿಡುವ ಪದ್ಧತಿಯನ್ನು ಪುನಃ ಜಾರಿಗೆ ತರಲು ಅನುವು ಮಾಡಿಕೊಡುತ್ತದೆ.

## ೫.೭. ಬಡ್ತಿ ಮೀಸಲಾತಿ ಸಮಸ್ಯೆ (ಶೇ. ೧೮ v/s ಶೇ. ೮೨ ವರ್ಗಗಳ ಸಂಘರ್ಷ)

ಬಡ್ತಿ ಮೀಸಲಾತಿ ಸಮಸ್ಯೆ ಹುಟ್ಟಿಕೊಂಡುದು ಸರ್ಕಾರದ ವಿವಿಧ ಇಲಾಖೆಗಳಲ್ಲಿ, ವಿಶೇಷವಾಗಿ ಲೋಕೋಪಯೋಗಿ ಹಾಗೂ ನೀರಾವರಿ ಇಲಾಖೆಗಳ ಇಂಜಿನಿಯರುಗಳಿಗೆ ಬಡ್ತಿಯಲ್ಲಿ ಮೀಸಲಾತಿ ನೀಡುವ ವಿಷಯಕ್ಕೆ ಸಂಬಂಧಿಸಿದಂತೆ. ಸಂವಿಧಾನದ ಅನುಚ್ಛೇದ ೧೬(೪) ರಲ್ಲಿ, ರಾಜ್ಯ ಸಿವಿಲ್ ಸೇವೆಯಲ್ಲಿ ಪರಿಶಿಷ್ಟ ಜಾತಿ-ವರ್ಗದವರಿಗೆ, ಹಿಂದುಳಿದ ವರ್ಗದವರಿಗೆ ನೇಮಕಾತಿಯಲ್ಲಿ ಮೀಸಲಾತಿ ಸೌಲಭ್ಯ ಕಲ್ಪಿಸಲು ಅವಕಾಶವಿದೆ. ಇದಕ್ಕೆ ಅನುಗುಣವಾಗಿ ಪ್ರತಿ ರಾಜ್ಯವೂ ಮೀಸಲಾತಿಗೆ ಸಂಬಂಧಿಸಿದಂತೆ ಆದೇಶಗಳನ್ನು ಹೊರಡಿಸಿವೆ. ಆದರೆ ತೊಂದರೆಯೆಂದರೆ, ಮೀಸಲಾತಿ ವಿಚಾರದಲ್ಲಿ ದೇಶದಲ್ಲಿ ಏಕರೀತಿಯ ನೀತಿ-ನಿಯಮಗಳಿಲ್ಲದಿರುವುದು.

ದಲಿತರಿಗೆ ಸಂವಿಧಾನಬದ್ಧವಾಗಿ ದೊರೆತ ಶೇ. ೧೮ ರಷ್ಟು ಮೀಸಲಾತಿಯಿದ್ದರೂ, ನೌಕರಿ ಬಡ್ತಿಯಲ್ಲಿ ಇವರಿಗೆ ನ್ಯಾಯ ದೊರೆಯುತ್ತಿಲ್ಲವೆಂಬ ಕಾರಣಕ್ಕೆ ಡಿ. ದೇವರಾಜ ಅರಸರು, ೧೯೭೮ ಏಪ್ರಿಲ್‌ನಲ್ಲಿ ಇನ್ನೊಂದು ಆಜ್ಞೆ ಹೊರಡಿಸಿ, ಬಡ್ತಿಯಲ್ಲೂ ಶೇ. ೧೮ ಮೀಸಲಾತಿ ಸೌಲಭ್ಯ ಒದಗಿಸಿಕೊಟ್ಟರು. ಆದರೆ ಆ ನಂತರದ ವರ್ಷಗಳಲ್ಲಿ ಇದು ಸಮರ್ಪಕವಾಗಿ ಜಾರಿಯಾಗಲೇ ಇಲ್ಲ. ಎಸ್. ಬಂಗಾರಪ್ಪನವರು ಮುಖ್ಯಮಂತ್ರಿಯಾದಾಗ, ೧೯೯೨ ರಲ್ಲಿ ಕರ್ನಾಟಕ ಸೇವಾ ನಿಯಮಾವಳಿ ೮ಕ್ಕೆ ತಿದ್ದುಪಡಿ ತಂದು, ೧೯೭೮ ರಿಂದ ಬಡ್ತಿಯಲ್ಲಿ ವಂಚಿತರಾದ ದಲಿತವರ್ಗದವರಿಗೆ, ಅಂದರೆ ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡುವಂತೆ ಆದೇಶ ಹೊರಡಿಸಿದರು. ಇದು ಮತ್ತೊಂದು ವಿವಾದ ಸೃಷ್ಟಿಸಿತು. ಈ ಆದೇಶಕ್ಕೆ ಸಂಬಂಧಿಸಿದ ವ್ಯಾಜ್ಯ ಸರ್ವೋಚ್ಚ ನ್ಯಾಯಾಲಯದ ಕಟ್ಟೆಯನ್ನೂ ಏರಿತಲ್ಲದೆ, ನ್ಯಾಯಾಲಯ ೧೯೯೭ ರಲ್ಲಿ ಸರ್ಕಾರದ ಈ ಆದೇಶವನ್ನು ಎತ್ತಿ ಹಿಡಿಯಿತು; ೧೯೭೮ ರಿಂದ ಬ್ಯಾಕ್‌ಲಾಗ್ ಹುದ್ದೆಗಳನ್ನು ತುಂಬಲು ಸೂಕ್ತ ಮಾರ್ಗಸೂಚಿಯನ್ನೂ ನೀಡಿತು. ಇದರಂತೆ, ಸರ್ಕಾರ ೧೯೭೮ರಿಂದ ಉಳಿದಿದ್ದ ಬ್ಯಾಕ್‌ಲಾಗ್ ಹುದ್ದೆಗಳನ್ನು ತುಂಬಲು ಆಜ್ಞೆ ಮಾಡಿತು; ಪರಿಶಿಷ್ಟ ಜಾತಿ-ಪಂಗಡಗಳಿಗೆ ಆದ ಅನ್ಯಾಯವನ್ನು ಸರಿಪಡಿಸುವತ್ತ ಹೆಜ್ಜೆ ಇಟ್ಟಿತು. ಇದರ ಫಲವಾಗಿ ಪರಿಶಿಷ್ಟ ಜಾತಿ-ಪಂಗಡಗಳ ಇಂಜಿನಿಯರ್‌ಗಳಿಗೆ ಉನ್ನತ ಹುದ್ದೆಗಳು ದೊರೆತವು. ಅವರ ಜತೆಯಲ್ಲೆ ಸೇವೆಗೆ ಸೇರಿದ ಮುಂದುವರೆದ ಇಂಜಿನಿಯರ್‌ಗಳು ಬಡ್ತಿಯಿಂದ ವಂಚಿತರಾದೆವೆಂದು ಭಾವಿಸಿದರು. ಪರಿಣಾಮವಾಗಿ, ಪರಿಶಿಷ್ಟ ಜಾತಿ-ವರ್ಗಗಳಿಗೆ ಇರುವ ಶೇ. ೧೮ ರಷ್ಟು ಮೀಸಲಾತಿ ವಿರುದ್ಧ ಶೇ. ೮೨ ರಷ್ಟು ಇರುವ ಇತರ ವರ್ಗಗಳವರು ಚಳವಳಿ ಹಾದಿ ತುಳಿದರು.

ಪರಿಶಿಷ್ಟ ಜಾತಿ - ವರ್ಗಗಳವರಿಗೆ ಈಗಾಗಲೇ ಮೀಸಲಿರಿಸಿರುವ ಶೇ. ೧೮ ಪ್ರಾತಿನಿಧ್ಯಕ್ಕಿಂತ ಹೆಚ್ಚು ನೀಡುತ್ತಿರುವ ಮೀಸಲಾತಿ ನೀತಿಗೆ ವಿರೋಧ; ಶೇ. ೧೮ ವರ್ಗದವರಿಗೆ ಹೇಗೆ ಬಡ್ತಿ ಅವಕಾಶಗಳು ಅಗತ್ಯವಿರುವುವೋ ಹಾಗೆಯೇ ಶೇ. ೮೨ ವರ್ಗದವರಿಗೂ ೩೮ ವರ್ಷಗಳ ಸೇವಾವಧಿಯಲ್ಲಿ ಬಡ್ತಿಗೆ ಅವಕಾಶ; ಪರಿಶಿಷ್ಟ ಜಾತಿ-ಪಂಗಡದ ಇಂಜಿನಿಯರುಗಳಿಗೆ ೩೮ ವರ್ಷಗಳ ಸೇವಾವಧಿಯಲ್ಲಿ ೫ ಬಡ್ತಿ ದೊರೆತರೆ ಅವರ ಜತೆಯಲ್ಲಿಯೇ ಕೆಲಸಕ್ಕೆ ಸೇರಿದ ಶೇ. ೮೨ ವರ್ಗದವರಿಗೆ ಒಂದೂ ಬಡ್ತಿ ಇಲ್ಲದೆ ನಿವೃತ್ತರಾಗುವುದಕ್ಕೆ ವಿರೋಧ - ಇವು ಅತೃಪ್ತ ಶೇ. ೮೨ ವರ್ಗದವರ ವಾದಗಳು.

ಕರ್ನಾಟಕ ಇಂಜಿನಿಯರ್‌ಗಳ ಸಂಘ ಮತ್ತು ಕರ್ನಾಟಕ ಇಂಜಿನಿಯರಿಂಗ್ ಸೇವಾ ಸಂಘದ ಜಂಟಿ ಕ್ರಿಯಾ ಸಮಿತಿಗಳು ಸಂಘಟಿಸಿದ ಈ ಚಳವಳಿಗೆ ಮಣಿದ ಸರ್ಕಾರ ೧೯೯೯ ಫೆಬ್ರವರಿ ೩ ರಂದು ಆದೇಶ ಹೊರಡಿಸಿ, ಬಡ್ತಿಯಲ್ಲಿ ಪರಿಶಿಷ್ಟ ಜಾತಿ-ಪಂಗಡಗಳಿಗೆ ಶೇ. ೧೮ ರಷ್ಟು ಮಾತ್ರ ಮೀಸಲಾತಿಯನ್ನು ಸಹಾಯಕ ಎಕ್ಸಿಕ್ಯೂಟಿವ್ ಇಂಜಿನಿಯರ್ ಹುದ್ದೆವರೆಗೆ ಮಾತ್ರ ಸೀಮಿತಗೊಳಿಸಿತು. ಇದಕ್ಕೆ ಮೊದಲು ಕಾರ್ಯನಿರ್ವಾಹಕ ಇಂಜಿನಿಯರ್‌ವರೆಗೆ ಈ ಸೌಲಭ್ಯವಿತ್ತು.

ಎಲ್ಲಾ ವರ್ಗಗಳಿಗೆ ನ್ಯಾಯ ಒದಗಿಸುವ ದೃಷ್ಟಿಯಿಂದ ಹೊರಡಿಸಲಾದ ಆಜ್ಞೆ ಇದೆಂದು ಸರ್ಕಾರ ಹೇಳಿತು. ಬಡ್ತಿಗೆ ಸಂಬಂಧಿಸಿದಂತೆ ಸುಪ್ರಿಂ ಕೋರ್ಟ್ ನೀಡಿರುವ ತೀರ್ಪುಗಳು ಹಾಗೂ ಕೇಂದ್ರ ಸರ್ಕಾರ ಹೊರಡಿಸಿರುವ ಮಾರ್ಗದರ್ಶಿ ಸೂತ್ರವನ್ನು ಗಮನಕ್ಕೆ ತೆಗೆದುಕೊಂಡು ಈ ಆಜ್ಞೆ ಹೊರಡಿಸಲಾಗಿದೆಯೆಂದು ಸ್ಪಷ್ಟಪಡಿಸಿತು. ಅಲ್ಲದೆ, ಬಡ್ತಿಯನ್ನು ಎಲ್ಲಾ ಗುಂಪಿನ ಎಲ್ಲಾ ವರ್ಗಗಳಲ್ಲಿ ಪರಿಶಿಷ್ಟ ಜಾತಿ-ಪಂಗಡಗಳಿಗೆ ಶೇ. ೧೮ಕ್ಕೆ ಸೀಮಿತಗೊಳಿಸಬೇಕೆಂದು ಮುಷ್ಕರ ನಡೆಸುತ್ತಿರುವ ಇಂಜಿನಿಯರ್‌ಗಳ ಬೇಡಿಕೆ ಈಡೇರಿಸಲು ಪ್ರಸಕ್ತ ಕಾನೂನುಗಳ ಅಡಿಯಲ್ಲಿ ಅವಕಾಶವಿಲ್ಲವೆಂತಲೂ ಸ್ಪಷ್ಟಪಡಿಸಿತು.

ಸರ್ಕಾರದ ಈ ಆದೇಶ ದಲಿತರ ನ್ಯಾಯಯುತ ಬಡ್ತಿ ಮೀಸಲಾತಿಯನ್ನು ಮೊಟಕುಗೊಳಿಸಿದೆಯೆಂದು ದಲಿತ ಸಂಘಟನೆಗಳು ಭಾವಿಸಿದವು. ಶೇ. ೮೨ ವರ್ಗದ ಇಂಜಿನಿಯರರ ಹಾಗೂ ಮೇಲ್ಜಾತಿಯವರ ಒತ್ತಡಕ್ಕೆ ಮಣಿದು ಸರ್ಕಾರ ಸಹಾಯಕ ಕಾರ್ಯನಿರ್ವಾಹಕ ಹುದ್ದೆಯವರೆಗೆ ಪರಿಶಿಷ್ಟ ಜಾತಿ-ಪಂಗಡಗಳವರ ಮೀಸಲು ಪ್ರಮಾಣವನ್ನು ಶೇ. ೧೮ ಕ್ಕೆ ಸೀಮಿತಗೊಳಿಸಿದೆ; ಇದು ಸಂವಿಧಾನಬಾಹಿರ ಕ್ರಮವೆಂದು ಅವು ಟೀಕಿಸಿದವು. ಸಂವಿಧಾನ ನೀತಿನಿಯಮಗಳಿಗೆ ಒಳಪಟ್ಟು, ಸರ್ವೋಚ್ಚ ನ್ಯಾಯಾಲಯದ ಆದೇಶಗಳಿಗೆ ಅನುಗುಣವಾಗಿ ಜಾರಿಯಲ್ಲಿದ್ದ ಮೀಸಲಾತಿ ನಿಯಮಗಳನ್ನು ಬದಲಾಯಿಸುವ ಮೂಲಕ ರಾಜ್ಯ ಸರ್ಕಾರ ಪರಿಶಿಷ್ಟ ಜಾತಿ - ಪಂಗಡಗಳ ಹಿತವನ್ನು ಬಲಿಗೊಟ್ಟಿದೆಯೆಂದು ಆರೋಪಿಸಿದವು. ಈ ಮುಂಬಡ್ತಿ ಆದೇಶವನ್ನು ರದ್ದುಪಡಿಸುವಂತೆ ಹಾಗೂ ಇನ್ನೂ ಹಲವಾರು ಬೇಡಿಕೆಗಳನ್ನು ಈಡೇರಿಸುವಂತೆ ಒತ್ತಾಯಿಸಲು ಈ ಸಂಘಟನೆಗಳು ರಾಜ್ಯಮಟ್ಟದಲ್ಲಿ ಬೃಹತ್ ರ್‍ಯಾಲಿಗಳನ್ನು ಸಂಘಟಿಸಿದವು. 'ದಲಿತ, ಹಿಂದುಳಿದ - ಅಲ್ಪಸಂಖ್ಯಾತ ಬಹುಜನ ಸಮಾಜದ ರಾಜ್ಯಮಟ್ಟದ ಬೃಹತ್ ರ್‍ಯಾಲಿ'ಯನ್ನು ಬೆಂಗಳೂರಿನಲ್ಲಿ ದಸಂಸದ ಎಂ. ಜಯಣ್ಣ ಬಣದವರು ಏರ್ಪಡಿಸಿದರೆ (೧೨ ಮಾರ್ಚ್ ೧೯೯೯), 'ದಲಿತ, ಹಿಂದುಳಿದ, ಅಲ್ಪಸಂಖ್ಯಾತರ ಮೀಸಲಾತಿ ರಕ್ಷಣಾ ಒಕ್ಕೂಟ'ದ ಹೆಸರಿನಲ್ಲಿ ಡಿ. ಜಿ. ಸಾಗರ್ ಬಣದವರು ಏರ್ಪಡಿಸಿದರು (೧೫ ಮಾರ್ಚ್ ೧೯೯೯).

ದಲಿತರ ಶಿಕ್ಷಣ-ನೌಕರಿ-ಬಡ್ತಿಗಳು ಸಾಮಾಜಿಕ - ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅಲ್ಪ-ಸ್ವಲ್ಪದ ಪಲ್ಲಟ ತರುತ್ತವೆ. ಸಮಾಜದ ಜಡತ್ವ ಕಳಚಿ ಚಲನೆ ಆರಂಭವಾಗುತ್ತದೆ. ದಲಿತರ ಆರ್ಥಿಕ - ರಾಜಕೀಯ - ಸಾಂಸ್ಕೃತಿಕ ಎತ್ತರವೂ ಸುಲಭ. ಜಾತೀಯತೆ ಸಡಿಲವಾಗುತ್ತದೆ. ಉತ್ಪಾದನಾ ಸಾಮಗ್ರಿಗಳು ದಲಿತರ ಕೈಗಳಿಗೂ ಬರುತ್ತವೆ. ಇದರಿಂದ ಅವರು ಇತರರಂತೆ ಬಾಳಲು ಸಾಧ್ಯವಾಗುತ್ತದೆ. ಪ್ರಸ್ತುತ ಆದೇಶ ಈ ಎಲ್ಲಾ ಭರವಸೆಗಳಿಗೆ ಭಗ್ನ ತರುತ್ತದೆ. ದಲಿತರನ್ನು ಮತ್ತೂ ಹಿಂದಕ್ಕೆ ಎಳೆಯುತ್ತದೆ. ಕರ್ನಾಟಕ ರಾಜ್ಯವೊಂದರಲ್ಲೇ ದಲಿತರಿಗೆ ಮೀಸಲಿರುವ ೨೫,೦೦೦ ಬ್ಯಾಕ್‌ಲಾಗ್ ಹುದ್ದೆಗಳು ಖಾಲಿ ಬಿದ್ದಿವೆ. ಕೇಂದ್ರ ಸರ್ಕಾರದಲ್ಲಿ

ಸುಮಾರು ೧೦,೦೦,೦೦೦ ಬ್ಯಾಕ್‌ಲಾಗ್ ಹುದ್ದೆಗಳಿವೆ. ಈ ಹುದ್ದೆಗಳನ್ನಷ್ಟೇ ತುಂಬಿದರೂ ಯಾವ ದಲಿತ ವಿದ್ಯಾವಂತನೂ ನಿರುದ್ಯೋಗದ ಬವಣೆಯಲ್ಲಿ ಬಳಲುವುದಿಲ್ಲ. ಸ್ವಾತಂತ್ರ್ಯ ಬಂದು ೫೦ ವರ್ಷಗಳೇ ಕಳೆದರೂ ಇದುವರೆಗೂ ಯಾವುದೇ ಇಲಾಖೆಯಲ್ಲಿ ಸಂವಿಧಾನಬದ್ಧ ಮೀಸಲಾತಿಯನ್ನು ಪರಿಶಿಷ್ಟ ಜಾತಿ-ಪಂಗಡಗಳವರಿಗೆ ಒದಗಿಸಿಲ್ಲ; ರಾಜ್ಯ ಸೇವೆಯಲ್ಲಿ ಹಿಂದುಳಿದ ವರ್ಗಗಳಿಗೆ ಮೀಸಲಾತಿಯಿದ್ದರೂ ಅವರಿಗೆ ನ್ಯಾಯಬದ್ಧ ಪ್ರಾತಿನಿಧ್ಯ ಸಿಕ್ಕಿಲ್ಲ. ಮುಂಬಡ್ತಿಯಲ್ಲಿ ಹಿಂದುಳಿದ ವರ್ಗಗಳಿಗೆ ಮೀಸಲಾತಿ ಒದಗಿಸಿಲ್ಲದ ಪ್ರಯುಕ್ತ ಅವರಿಗೆ ಸರ್ಕಾರಿ ಸೇವಾಕ್ಷೇತ್ರದಲ್ಲಿ ಘೋರ ಅನ್ಯಾಯವಾಗಿದೆ. ಮುಸಲ್ಮಾನ, ಕ್ರೈಸ್ತರೇ ಮೊದಲಾಗಿ ಧಾರ್ಮಿಕ ಅಲ್ಪಸಂಖ್ಯಾತರಿಗೆ ಜನಸಂಖ್ಯಾ ಪ್ರಮಾಣದ ಪ್ರಾತಿನಿಧ್ಯ ಸಿಕ್ಕೇ ಇಲ್ಲವೆಂದು ಈ ಮೇಲಿನ ಎರಡು ಬಣದವರೂ ದೂರಿದರು.

ಸಂವಿಧಾನದ ಆಶಯ ಹಾಗೂ ಸರ್ವೋಚ್ಛ ನ್ಯಾಯಾಲಯದ ಆದೇಶಗಳಿಗೆ ವಿರೋಧವಾದ ದಿನಾಂಕ ೩-೨-೯೯ರ ಸರ್ಕಾರದ ಮುಂಬಡ್ತಿ ಆದೇಶವನ್ನು ರದ್ದುಗೊಳಿಸಬೇಕು; ಈ ಆದೇಶಕ್ಕಿಂತ ಮುಂಚೆ ಇದ್ದ ಮೀಸಲಾತಿ ನೀತಿಯನ್ನು ಮುಂದುವರೆಸಬೇಕು; ೨೫,೦೦೦ ಬ್ಯಾಕ್‌ಲಾಗ್ ಹುದ್ದೆಗಳನ್ನು ದಿನಾಂಕ ೨೪-೬-೯೭ರ ಸರ್ಕಾರಿ ಆದೇಶದಂತೆ ತುಂಬಲು ಕೂಡಲೇ ಆದೇಶ ಹೊರಡಿಸಬೇಕು; ಇತರ ಹಿಂದುಳಿದ ಮತ್ತು ಅಲ್ಪಸಂಖ್ಯಾತ ವರ್ಗಗಳಿಗೂ ಬಡ್ತಿಯಲ್ಲಿ ಮೀಸಲಾತಿ ಜಾರಿಗೊಳಿಸಿ ರೋಸ್ಟರ್ ಅಳವಡಿಸಬೇಕು ಹಾಗೂ ವಿಧಾನಸಭೆ ಮತ್ತು ಲೋಕಸಭೆಗಳಲ್ಲಿ ಮೀಸಲಾತಿ ನೀಡಬೇಕು; ಭಕ್ತರಾಮೇಗೌಡರ ಕೇಸಿನ ಸರ್ವೋಚ್ಛ ನ್ಯಾಯಾಲಯದ ತೀರ್ಪು ಜಾರಿಗೆ ಬರಬೇಕು; ಜನಸಂಖ್ಯೆಗೆ ಅನುಗುಣವಾಗಿ ಜಾತಿವಾರು ಮೀಸಲಾತಿ ನಿಗದಿಪಡಿಸಬೇಕು; ಕೇಂದ್ರ ಸರ್ಕಾರ ೧೦ ಲಕ್ಷ ಬ್ಯಾಕ್‌ಲಾಗ್ ಹುದ್ದೆಗಳನ್ನು ತುಂಬಲು ಆದೇಶ ಹೊರಡಿಸಬೇಕು ಎಂಬ ಹಕ್ಕೊತ್ತಾಯಗಳನ್ನು ಈ ಎರಡು ಸಂಘಟನೆಗಳೂ ಸರ್ಕಾರದ ಮುಂದೆ ಸಲ್ಲಿಸಿದವು. ಈ ಸಂಬಂಧದಲ್ಲಿ ಬೆಂಗಳೂರಿನಲ್ಲಿ ಏರ್ಪಡಿಸಿದ ಬೃಹತ್ ಮೆರವಣಿಗೆಗಳಲ್ಲಿ ಲಕ್ಷಾಂತರ ಮಂದಿ ಭಾಗವಹಿಸಿ ಪ್ರತಿಭಟಿಸಿದುದು ಒಂದು ವಿಶೇಷವಾಗಿದ್ದರೆ, ಇತಿಹಾಸದಲ್ಲಿ ಮೊಟ್ಟಮೊದಲ ಬಾರಿಗೆ ಇಷ್ಟೊಂದು ಪ್ರಮಾಣದಲ್ಲಿ ದಲಿತರು, ಹಿಂದುಳಿದವರು, ಮುಸ್ಲಿಮರು, ಕ್ರೈಸ್ತರು, ಬೌದ್ಧರು ಹಾಗೂ ಜೈನರು ಒಟ್ಟಿಗೇ ಸೇರಿ ಪರಸ್ಪರ ಕೈಹಿಡಿದು ಹೊರಟಿದ್ದುದು ಇನ್ನೊಂದು ವಿಶೇಷವಾಗಿದ್ದಿತು. "ಈ ಎಲ್ಲಾ ಜನ ತಮ್ಮ ಜಾತಿ-ಮತಗಳನ್ನು ಬಿಟ್ಟು ಸಮಾನ ಉದ್ದೇಶಕ್ಕಾಗಿ ಒಂದೆಡೆ ಸೇರಿರುವುದು ರಾಜಧಾನಿಯಲ್ಲಿ ಇದೇ ಮೊದಲು. ಈ ರ್‍ಯಾಲಿ ಬಡ್ತಿ ಮೀಸಲಾತಿಯ ನೆಪದಲ್ಲಿ ನಡೆದದ್ದಾದರೂ ಅಲ್ಪಸಂಖ್ಯಾತರ ಮೇಲೆ ಆಗುತ್ತಿರುವ ಅಮಾನುಷ ಹಲ್ಲೆಗಳು, ಹಿಂದುಳಿದವರನ್ನು ದಲಿತರಿಂದ ಬೇರ್ಪಡಿಸಿ ದಿಕ್ಕು ತಪ್ಪಿಸುವ ಕುತಂತ್ರಗಳಿಗೆ ಇಲ್ಲಿ ಉತ್ತರವಿದೆ" ಎಂದು ಪತ್ರಿಕೆಗಳು ಬರೆದವು. ಈ ಹೋರಾಟದಲ್ಲಿ ಭಾಗವಹಿಸಿದ ಗೂಳೂರು ಮಾನವಧರ್ಮಪೀಠದ ವೀರಭದ್ರ ಚನ್ನಮಲ್ಲದೇಶಿಕೇಂದ್ರ ಸ್ವಾಮೀಜಿಯ ಪಾತ್ರವೂ ಪರಿಗಣನಾರ್ಹ.

ಇಲ್ಲಿ ಪ್ರಸ್ತಾಪಿಸಬೇಕಾದ ಇನ್ನೊಂದು ಸಂಗತಿಯೆಂದರೆ, ಶೇ. ೮೨ ಮೀಸಲಾತಿ ಬೇಡಿಕೆ ಇಟ್ಟವರ ಪರವಾಗಿ 'ಅಹಿಂಸಾ' (ಅಲ್ಪಸಂಖ್ಯಾತ, ಹಿಂದುಳಿದ ಹಾಗೂ ಸಾಮಾನ್ಯ ವರ್ಗ) ವೇದಿಕೆಯ ಪ್ರಥಮ ರಾಜ್ಯಮಟ್ಟದ ಸಮಾವೇಶವೂ ಆದಿಚುಂಚನಗಿರಿಯ

ಬಾಲಗಂಗಾಧರ ಸ್ವಾಮಿಯವರಿಂದ ಬೆಂಗಳೂರಿನಲ್ಲಿ ಉದ್ಘಾಟನೆಗೊಂಡಿತು. ಇದಕ್ಕೆ ಮೊದಲು 'ಅಹಿಂದ' (ಅಲ್ಪಸಂಖ್ಯಾತ, ಹಿಂದುಳಿದ ಹಾಗೂ ದಲಿತ ಒಕ್ಕೂಟ)ವೂ ಅಸ್ತಿತ್ವಕ್ಕೆ ಬಂದುದುಂಟು. ಈ ಎರಡೂ ಸಂಘಟನೆಗಳ ಉದ್ದೇಶ ಒಂದೇ : ನೇಮಕಾತಿ ಮತ್ತು ಬಡ್ತಿಯಲ್ಲಿ ಮೀಸಲಾತಿ ನೀಡುವುದನ್ನು ವಿರೋಧಿಸುವುದು.

ದಲಿತರ ಬಡ್ತಿ ಮೀಸಲಾತಿ ಕುರಿತು ೧೯೯೯ ಫೆಬ್ರವರಿ ೩ ರಂದು ಹೊರಬಿದ್ದ ಸರ್ಕಾರಿ ಆದೇಶದ ವಿರುದ್ಧ ಸರ್ಕಾರಿ ಮತ್ತು ಸರ್ಕಾರೇತರ ಸಂಘ-ಸಂಸ್ಥೆಗಳು ಹಾಗೂ ರಾಜಕೀಯ ಪಕ್ಷಗಳು ತಮ್ಮ ಅತೃಪ್ತಿಯನ್ನು ವ್ಯಕ್ತಪಡಿಸಿದುವಷ್ಟೆ. ಪರಿಶಿಷ್ಟ ಜಾತಿ-ಪಂಗಡಗಳ ಇಂಜನಿಯರ್‌ಗಳ ಸಂಬಂಧದಲ್ಲಿ ಬಡ್ತಿ ಮೀಸಲಾತಿಗೆ ಅನ್ವಯಿಸುವ ಫೆಬ್ರವರಿ ೩ರ ಸರ್ಕಾರಿ ಆದೇಶವನ್ನು ಹಿಂತೆಗೆದುಕೊಂಡು, ನೌಕರರಿಗೆ ಶೇ. ೩೨ ರಷ್ಟು ಬಡ್ತಿ ಮೀಸಲಾತಿ ನೀಡಿ ಆದೇಶ ಹೊರಡಿಸಬೇಕೆಂದು ರಾಜ್ಯ ಸರ್ಕಾರದ ಹಿಂದುಳಿದ ಹಾಗೂ ಅಲ್ಪಸಂಖ್ಯಾತ ಇಂಜಿನಿಯರ್‌ಗಳ ಕ್ಷೇಮಾಭಿವೃದ್ಧಿ ಸಂಘ ಆಗ್ರಹಪಡಿಸಿತು. ಹಿಂದುಳಿದ ವರ್ಗ ಮತ್ತು ಅಲ್ಪಸಂಖ್ಯಾತ ನೌಕರರಿಗೆ ಸೇವಾಬಡ್ತಿಯಲ್ಲಿ ಮೀಸಲಾತಿಗೆ ಅವಕಾಶವಿಲ್ಲವೆಂದೂ, ಇಂದ್ರ ಸಹಾನಿ ಪ್ರಕರಣದಲ್ಲಿ ಸುಪ್ರಿಂ ಕೋರ್ಟ್ ನೀಡಿದ ತೀರ್ಪಿನಿಂದಾಗಿ ಇಂಥಾ ಮೀಸಲಾತಿ ನೀಡಲು ಸಂವಿಧಾನದ ತಿದ್ದುಪಡಿ ಬೇಕಾಗುತ್ತದೆಂದೂ ಹೇಳುತ್ತಿರುವುದು ಸರಿಯಲ್ಲ; ವಾಣಿಜ್ಯ ತೆರಿಗೆ ಆಯುಕ್ತರು ಮತ್ತು ಜಿ. ಸೇತುಮಾಧವರಾವ್ ಪ್ರಕರಣದಲ್ಲಿ ೧೯೯೬ರಲ್ಲಿ ಸುಪ್ರಿಂ ಕೋರ್ಟ್ ತೀರ್ಪು ನೀಡಿ ಸಂವಿಧಾನದ ೭೭ನೇ ತಿದ್ದುಪಡಿ ಮೇರೆಗೆ ೧೬ನೇ ಅಧಿನಿಯಮಕ್ಕೆ ಸೇರಿಸಲಾದ (೪-ಎ) ಉಪವಿಧಿಯಲ್ಲಿ ಹಿಂದುಳಿದವರಿಗೆ ಸೇವಾಬಡ್ತಿಯಲ್ಲಿ ಮೀಸಲಾತಿ ಹಕ್ಕನ್ನು ಎತ್ತಿ ಹಿಡಿದಿದೆ; ಸುಪ್ರೀಂ ಕೋರ್ಟ್‌ನ ತೀರ್ಪಿನ ಹಿನ್ನೆಲೆಯಲ್ಲಿ ಸಂವಿಧಾನದ ೧೬(೪) ಅಧಿನಿಯಮದ ಪ್ರಕಾರ ಸೇವಾಬಡ್ತಿ ಮೀಸಲಾತಿ ಹಕ್ಕು ಪಡೆಯಲು ಹಿಂದುಳಿದ ವರ್ಗ ಮತ್ತು ಅಲ್ಪಸಂಖ್ಯಾತ ನೌಕರರು ಅರ್ಹರಾಗಿದ್ದಾರೆಂದು ಈ ಸಂಘ ಸ್ಪಷ್ಟಪಡಿಸಿತು. ಬಡ್ತಿ ಮೀಸಲಾತಿ ಹಾಗೂ ನೇಮಕಾತಿಯಲ್ಲಿ ಆಗಿರುವ ಈ ಅಸಮತೋಲನವನ್ನು ಸರಿಪಡಿಸುವಂತೆ ಸರ್ಕಾರವನ್ನು ಒತ್ತಾಯಿಸಿತು. ಈ ಆದೇಶ ಕೇವಲ ಎರಡು-ಮೂರು ಪ್ರಬಲ ಜಾತಿಗಳಿಗೆ ಅನುಕೂಲ ಮಾಡಿಕೊಡುವ ಉದ್ದೇಶ ಹೊಂದಿದ್ದು, ಹಿಂದುಳಿದ ವರ್ಗಗಳವರ ಪಾಲಿಗೆ ಇದೊಂದು ಕರಾಳ ಆದೇಶವಾಗಿದೆ; ಪರಿಶಿಷ್ಟ ಜಾತಿ-ಪಂಗಡಗಳಿಗೆ ಕನಿಷ್ಠ ಶೇ. ೧೮ ಮೀಸಲಾತಿ ಇರಬೇಕೆಂದು ಸಂವಿಧಾನದತ್ತವಾಗಿ ಆದೇಶವಿದ್ದರೂ ರಾಜ್ಯ ಸರ್ಕಾರ ಮೀಸಲಾತಿಯನ್ನು ಶೇ. ೧೮ಕ್ಕೆ ಮಿತಿಗೊಳಿಸಿರುವುದು ಸಂವಿಧಾನದ ಮೂಲತತ್ವಗಳನ್ನೇ ಉಲ್ಲಂಘನೆ ಮಾಡಿದಂತಾಗುತ್ತದೆ. ಆದ್ದರಿಂದ ಇದೊಂದು ಕ್ರೂರ ಆದೇಶವೆಂದು ಸಂಘ ಟೀಕಿಸಿತು.

ಕರ್ನಾಟಕ ಲೋಕೋಪಯೋಗಿ, ನೀರಾವರಿ ಹಾಗೂ ಜಿಲ್ಲಾ ಪಂಚಾಯಿತಿಗಳಲ್ಲಿ ಮೇಲ್ಜಾತಿ ಜನರಿಗೆ, ಪರಿಶಿಷ್ಟರಿಗೆ, ಹಿಂದುಳಿದವರು ಮತ್ತು ಅಲ್ಪಸಂಖ್ಯಾತರಿಗೆ ನೀಡಲಾಗಿರುವ ಬಡ್ತಿಹುದ್ದೆಗಳು ಹಾಗೂ ನೇರ ನೇಮಕಾತಿ ಹುದ್ದೆಗಳ ವಿವರವೊಂದಿದೆ. ಬಡ್ತಿ ಹಾಗೂ ನೇರ ನೇಮಕಾತಿಯ ಒಟ್ಟು ೧೨,೦೦೦ ಹುದ್ದೆಗಳಲ್ಲಿ ಜನ ಸಂಖ್ಯೆಗನು

ಗುಣವಾಗಿ ಪಡೆದ ಶೇಕಡವಾರು ಪ್ರಾತಿನಿಧ್ಯವನ್ನೂ ಈ ಕೆಳಗಿನ ಕೋಷ್ಟಕದಲ್ಲಿರುವಂತೆ ಸಂಘ ತೋರಿಸಿದೆ :

| ೧. ಬಡ್ತಿ ಹುದ್ದೆಗಳು | ಶೇ. ೨೫ ಜನಸಂಖ್ಯೆ ಇರುವವರ ಪ್ರಾತಿನಿಧ್ಯ | | ಪರಿಶಿಷ್ಟ/ಪಂಗಡದವರ ಶೇ. ೨೩ರ ಪ್ರಾತಿನಿಧ್ಯ | | ಶೇ. ೫೨ ಇರುವ ಹಿಂದುಳಿದ ಅಲ್ಪಸಂಖ್ಯಾತರ ಪ್ರಾತಿನಿಧ್ಯ | |
|---|---|---|---|---|---|---|
| | ಒಟ್ಟು | ಶೇ. | ಒಟ್ಟು | ಶೇ. | ಒಟ್ಟು | ಶೇ. |
| ೨೪೦೦ | ೧೮೧೦ | ೭೫.೪೧ | ೪೦೦ | ೧೬.೬೬ | ೧೯೦ | ೭.೯೧ |
| ೨. ನೇರ ನೇಮಕಾತಿ ಹುದ್ದೆಗಳು | | | | | | |
| ೯೬೦೦ | ೮೨೬೦ | ೮೬.೦೪ | ೩೮೦ | ೩.೫೦ | ೧೦೦೦ | ೧೦.೪೧ |
| ಒಟ್ಟು ೧೨,೦೦೦ | ೧೦೦೩೦ | ೮೩.೫೮ | ೭೮೦ | ೬.೫೦ | ೧೧೯೦ | ೯.೯೧ |

ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಯಲ್ಲಿರುವ ವಿವಿಧ ಜಾತಿ ಇಂಜಿನಿಯರ್‌ಗಳ ಸಂಖ್ಯೆಯನ್ನು ಈ ಕೆಳಗಿನ ಕೋಷ್ಟಕ ವಿವರಿಸುತ್ತದೆ :

| ಕ್ರ. ಸಂ. | ಜಾತಿ | ಈಗ ಕೆಲಸದಲ್ಲಿರುವ ಇಂಜಿನಿಯರ್‌ಗಳ ಸಂಖ್ಯೆ ಮತ್ತು ಶೇಕಡವಾರು ಪಾಲು | | | | ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇಕಡವಾರು ಜನ ಸಂಖ್ಯೆ | ನ್ಯಾಯವಾಗಿ ದಕ್ಕಬೇಕಾಗಿದ್ದ ಹುದ್ದೆಗಳು | ಈಗ ಇರುವ ಹೆಚ್ಚುವರಿ ಅಥವಾ ಕಡಿಮೆ ಹುದ್ದೆಗಳು (ಸಂಖ್ಯೆ ಮತ್ತು ಶೇಕಡವಾರು) | |
|---|---|---|---|---|---|---|---|---|---|
| | | ಬಡ್ತಿ ಹುದ್ದೆಗಳು | ನೇರ ನೇಮಕಾತಿ ಹುದ್ದೆಗಳು | ಒಟ್ಟು | ಶೇ. | | | ಸಂಖ್ಯೆ | ಶೇ. |
| ೧ | ಬ್ರಾಹ್ಮಣರು | ೫೩೦ | ೧೮೪೫ | ೨೩೭೫ | ೨೧.೮೭ | ೩ | ೩೦೬ | +೨೦೬೯ | ೧೯.೦೫ ಹೆಚ್ಚು |
| ೨ | ಲಿಂಗಾಯಿತರು | ೬೦೪ | ೨೧೯೨ | ೨೭೯೬ | ೨೪.೮೨ | ೧೫ | ೧,೬೩೨ | +೧೦೬೪ | ೯.೮ ಹೆಚ್ಚು |
| ೩ | ಒಕ್ಕಲಿಗರು | ೫೯೬ | ೧೮೫೬ | ೨೪೫೨ | ೨೨.೫೮ | ೧೦ | ೧,೦೨೦ | +೧೪೩೨ | ೧೩.೧೮ ಹೆಚ್ಚು |
| ೪ | ಹಿಂದುಳಿದ ವರ್ಗ ಹಾಗೂ ಜಾತಿಗಳು | ೧೯೩ | ೧೨೫೯ | ೧೪೫೨ | ೧೩.೩೭ | ೩೭ | ೩,೭೭೬ | -೨೩೨೪ | ೨೧೪೦ ಖೋತಾ |
| ೫ | ಪರಿಶಿಷ್ಟಜಾತಿಪಂಗಡ | ೩೯೮ | ೪೦೯ | ೮೦೭ | ೭.೪೩ | ೨೩ | ೨,೨೪೪ | -೧೪೪೪ | ೧೩.೩ ಖೋತಾ |
| ೬ | ಅಲ್ಪಸಂಖ್ಯಾತರು | ೮೮ | ೩೬೬ | ೪೫೪ | ೫.೧೮ | ೧೦ | ೧,೦೨೦ | - ೫೬೬ | ೫೨೧ ಖೋತಾ |
| ೭ | ಇತರರು | ೬೭ | ೫೫೫ | ೬೨೨ | ೫.೭೨ | ೨ | ೨೦೪ | + ೪೧೮ | ೩.೮೫ ಹೆಚ್ಚು |

ಬಡ್ತಿ ಮೀಸಲಾತಿಗೆ ಸಂಬಂಧಿಸಿದಂತೆ ಫೆಬ್ರವರಿ ೩ ರಂದು ಸರ್ಕಾರ ಹೊರಡಿಸಿದ ಪರಿಷ್ಕೃತ ಆದೇಶದಿಂದ ಪರಿಶಿಷ್ಟ ಜಾತಿ-ವರ್ಗಗಳಿಗೆ ಸೇರಿದ ನೌಕರರು ಹಾಗೂ ಅಧಿಕಾರಿಗಳಿಗೆ ಅನ್ಯಾಯವಾಗುತ್ತದೆ. ಆದ್ದರಿಂದ ಕೂಡಲೇ ಈ ಆದೇಶವನ್ನು ಹಿಂತೆಗೆದುಕೊಳ್ಳಬೇಕೆಂದು ಪರಿಶಿಷ್ಟ ಜಾತಿ-ವರ್ಗಗಳಿಗೆ ಸೇರಿದ ಮಂತ್ರಿಗಳು ಹಾಗೂ ಶಾಸಕರು ಸರ್ಕಾರದ ಮೇಲೆ ಒತ್ತಡ ತಂದರು. ಈ ಹಂತದಲ್ಲಿ ದಲಿತ ಸಚಿವರು, ಶಾಸಕರು ಅಥವಾ ದಲಿತ ಸಂಘಟನೆಗಳ ಒತ್ತಡಕ್ಕೆ ಮಣಿದು ಬಡ್ತಿ ಮೀಸಲಾತಿ ಕುರಿತಂತೆ ಈಗಾಗಲೇ ಹೊರಡಿಸಿರುವ ಆದೇಶವನ್ನು ಹಿಂತೆಗೆದುಕೊಳ್ಳದಂತೆ ಹಿಂದುಳಿದ ವರ್ಗ, ಅಲ್ಪಸಂಖ್ಯಾತರು ಮತ್ತು ಸಾಮಾನ್ಯವರ್ಗದವರನ್ನೊಳಗೊಂಡ 'ಅಹಿಂಸಾ' ವೇದಿಕೆ ಸರ್ಕಾರವನ್ನು ಒತ್ತಾಯಿಸಿತು. ಪರಿಶಿಷ್ಟ ನೌಕರರಿಗೆ ಸಂವಿಧಾನರೀತ್ಯ ಸಿಗಬೇಕಾದ ಬಡ್ತಿ ಅವಕಾಶ ನೀಡುವುದಕ್ಕೆ ತನ್ನ ವಿರೋಧವಿಲ್ಲ. ಆದರೆ ಅದೇ ಸಂದರ್ಭದಲ್ಲಿ ಪರಿಶಿಷ್ಟೇತರ ೮೨ ಪ್ರತಿಶತ ವರ್ಗದವರ ಸಂವಿಧಾನಬದ್ಧ ಹಕ್ಕುಗಳನ್ನು ಕಾಪಾಡುವುದು ಸಹಾ ಅಷ್ಟೇ

ಮುಕ್ತಿ ಎಂದಿತು 'ಅಹಿಂಸಾ'. ಮುಖ್ಯವಾಗಿ, ಬರೀ ಬಡ್ತಿ ಮೀಸಲಾತಿಗಷ್ಟೇ ಈ ವೇದಿಕೆ ಸೀಮಿತವಾಗಿಲ್ಲ. ಶೇ. ೮೨ರ ವರ್ಗದವರ ಮೇಲೆ ಕೆಲವು ಕಾನೂನು ದುರ್ಬಳಕೆ ಸೇರಿದಂತೆ ಯಾವುದೇ ರೀತಿಯ ಸಾಮಾಜಿಕ ದೌರ್ಜನ್ಯ, ಅನ್ಯಾಯ ನಡೆದರೆ ಅದರ ವಿರುದ್ಧ ಕೂಡಾ 'ಅಹಿಂಸಾ' ವೇದಿಕೆ ಹೋರಾಡುತ್ತದೆಂತಲೂ ಅದು ಪ್ರಕಟಿಸಿದುದು ಗಮನಾರ್ಹ.

ಹಾಗೆಯೇ, ಸರ್ಕಾರಿ ಆಜ್ಞೆ ಜಾರಿಗೆ ಅಡ್ಡಿಯುಂಟಾದರೆ ರಾಜ್ಯದ ಸುಮಾರು ೧೦ ಸಾವಿರ ಇಂಜಿನಿಯರ್‌ಗಳು ಮತ್ತು ೪ ಲಕ್ಷ ಸರ್ಕಾರಿ ನೌಕರರು ಮುಷ್ಕರದ ಹಾದಿ ಹಿಡಿಯಬೇಕಾಗುತ್ತದೆಂದು ಎಚ್ಚರಿಕೆ ನೀಡಿತು ಕರ್ನಾಟಕ ಇಂಜಿನಿಯರ್‌ಗಳ ಸಂಘದ ಜಂಟಿ ಕ್ರಿಯಾಸಮಿತಿ. ಸರ್ಕಾರದ ನೂತನ ಆದೇಶದಿಂದ ಭವಿಷ್ಯದಲ್ಲಿ ಹಿಂದುಳಿದ, ಅಲ್ಪಸಂಖ್ಯಾತ ಹಾಗೂ ಸಾಮಾನ್ಯ ವರ್ಗಕ್ಕೆ ಸೇರಿದ ಶೇ. ೮೨ ವರ್ಗದ ಇಂಜಿನಿಯರ್‌ಗಳಲ್ಲಿ ಶೇ. ೬೦ ಇಂಜಿನಿಯರ್‌ಗಳಿಗೆ ಮಾತ್ರ ಇದರ ಲಾಭವಾಗಲಿದೆ. ಉಳಿದ ಶೇ. ೪೦ ಭಾಗದ ಇಂಜಿನಿಯರ್‌ಗಳಿಗೆ ಅನುಕೂಲವಾಗಬೇಕಾದಲ್ಲಿ ಎಲ್ಲಾ ಬಡ್ತಿಹುದ್ದೆಗಳಿಗೂ ಮೀಸಲಾತಿಯನ್ನು ವಿಸ್ತರಿಸಿ, ಎಲ್ಲಾ ಹುದ್ದೆಗಳಲ್ಲಿ ಶೇ. ೧೮ ಹುದ್ದೆಗಳನ್ನು ಪರಿಶಿಷ್ಟ ಜಾತಿ ಪಂಗಡದವರಿಗೆ ಕಾಯ್ದಿರಿಸಬೇಕು. ಶೇ. ೮೨ ವರ್ಗದಲ್ಲಿರುವ ಶೇ. ೩೨ ರಷ್ಟು ಹಿಂದುಳಿದ ವರ್ಗಗಳವರಿಗೆ, ಅಲ್ಪಸಂಖ್ಯಾತರಿಗೆ ಪ್ರತ್ಯೇಕ ಬಡ್ತಿ ಮೀಸಲಾತಿಗೆ ಒತ್ತಾಯಿಸುವುದು ಸರಿಯಲ್ಲ. ಇದರಿಂದ ಈಗಿರುವ ಮೀಸಲಾತಿ ಸಮಸ್ಯೆ ಮತ್ತಷ್ಟು ಗೊಂದಲಮಯ ವಾಗುತ್ತದೆಯೆಂತಲೂ ಈ ಸಂಘ ಹೇಳಿತು.

ಫೆಬ್ರವರಿ ೩ ರ ಬಡ್ತಿ ಮೀಸಲಾತಿ ಪರಿಷ್ಕೃತ ಆಜ್ಞೆಯನ್ನು ಹಿಂತೆಗೆದುಕೊಳ್ಳುವಂತೆ ಪರಿಶಿಷ್ಟ ಜಾತಿ-ವರ್ಗಗಳ ಸಚಿವರು, ಶಾಸಕರು, ಸಂಘ-ಸಂಸ್ಥೆಗಳ ಒತ್ತಡ ಸರ್ಕಾರದ ಮೇಲೆ ಹೆಚ್ಚಾದುದು ಸ್ಪಷ್ಟ. ಸಾವಿರಾರು ವರ್ಷಗಳಿಂದ ಅವಕಾಶಗಳಿಂದ ವಂಚಿತರಾದ ದಲಿತರಿಗೆ ನ್ಯಾಯವಾಗಿ ದೊರಕಿಸಿಕೊಟ್ಟಿದ್ದ ಸೌಲಭ್ಯವನ್ನು ಈ ಆಜ್ಞೆಯ ಮೂಲಕ ಕಿತ್ತುಕೊಳ್ಳಲಾಗಿರುವುದರಿಂದ, ಈ ಆಜ್ಞೆಯ ಮರುಪರಿಶೀಲನೆ ಮಾಡಬೇಕೆಂದು ಎಲ್ಲೆಡೆ ಯಿಂದಲೂ ಒತ್ತಾಯ ಬರಲಾರಂಭಿಸಿತು. ಮೇಲ್ವರ್ಗದವರು ತಾವು ಮುಂದುವರೆಯಲು ದಲಿತರು, ಬಡವರು ಕಾರಣರೆಂಬುದನ್ನು ಮರೆಯಬಾರದು. ದುಡಿಯುವ ವರ್ಗವನ್ನು ನಿಕೃಷ್ಟವಾಗಿ ಕಾಣಲಾಗುತ್ತಿದೆ. ಇದೇ ಪರಿಸ್ಥಿತಿ ಮುಂದುವರೆದರೆ ರಕ್ತಪಾತವಾಗುವ ದಿನಗಳು ದೂರವಿಲ್ಲವೆಂಬ ಘೋಷಣೆಯೂ ಮೊಳಗಿತು. ಅಲ್ಲದೆ, ಈ ಬಡ್ತಿ ಮೀಸಲಾತಿ ಕುರಿತ ರಾಜ್ಯ ಸರ್ಕಾರದ ಸುತ್ತೋಲೆಯನ್ನು ಹಿಂತೆಗೆದುಕೊಳ್ಳುವಂತೆ ದಲಿತ ವರ್ಗಗಳ ಸದಸ್ಯರು ಸಂಸತ್‌ನಲ್ಲಿ ಉಂಟುಮಾಡಿದ ಕೋಲಾಹಲದಿಂದಾಗಿ ಈ ಸಮಸ್ಯೆ ರಾಷ್ಟ್ರವ್ಯಾಪಿಯಾಯಿತು. ಕರ್ನಾಟಕ ೧ನೇ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರಾಗಿದ್ದ ಎಲ್. ಜಿ. ಹಾವನೂರರು, ಈ ಆದೇಶದಿಂದ ಪರಿಶಿಷ್ಟ ಜಾತಿ-ವರ್ಗಗಳ ನೌಕರರಿಗೆ ತೀರಾ ಅನ್ಯಾಯ ವಾಗುತ್ತದೆ. ಅಲ್ಲದೆ, ಮೇಲ್ವರ್ಗದ ಇಂಜಿನಿಯರ್‌ಗಳು ಕೇಳಿದ್ದ ಬೇಡಿಕೆಗಳಿಗಿಂತ ಹೆಚ್ಚಿನ ಸವಲತ್ತನ್ನು ಸರ್ಕಾರ ಈ ಮೂಲಕ ನೀಡಿದೆ. ತಾವು ನೀಡಿದ್ದ ಹಿಂದುಳಿದ ವರ್ಗಗಳ ಆಯೋಗದ ವರದಿಯನ್ನು ಸರ್ಕಾರ ಈಗಾಗಲೇ ತಿದ್ದುಪಡಿ ಮಾಡಿ ತಾವು ಹೊಂದಿದ್ದ ಗುರಿ, ತತ್ವವನ್ನು ನಾಶಮಾಡಿದೆ; ಸುಪ್ರಿಂ ಕೋರ್ಟ್‌ನ ಆದೇಶವನ್ನು ಉಲ್ಲಂಘಿಸಿದೆ ಎಂದರು.

ಬಡ್ತಿ ಮೀಸಲಾತಿ ಪ್ರಶ್ನೆಗೆ ಪರಿಹಾರ ಹುಡುಕಲು ರಾಜ್ಯ ಸರ್ಕಾರ ಸರ್ವಪಕ್ಷಗಳ ಸಭೆ ನಡೆಸಿತು. ಈ ವಿವಾದದ ಸಂಬಂಧದಲ್ಲಿ ವಿಶೇಷ ಸಂಪುಟ ಸಭೆಯನ್ನೂ ಕರೆಯಿತು. ಫೆಬ್ರವರಿ ೩ರ ಬಡ್ತಿ ಮೀಸಲಾತಿ ಕುರಿತ ಸರ್ಕಾರಿ ಆದೇಶದಿಂದ ಒಕ್ಕಲಿಗರಿಗೆ ಮತ್ತು ಲಿಂಗಾಯಿತರಿಗೆ ಮಾತ್ರ ಅನುಕೂಲವಾಗುತ್ತದೆಂಬ ಆರೋಪದಿಂದ ಮುಕ್ತವಾಗಲು ಹಿಂದುಳಿದ ವರ್ಗದವರಿಗೂ ಬಡ್ತಿ ಮೀಸಲಾತಿ ನೀಡುವ ಬಗೆಗೆ ಸಭೆಯಲ್ಲಿ ತಾತ್ವಿಕ ಒಪ್ಪಿಗೆ ಪಡೆದುಕೊಂಡಿತು. ಇದಕ್ಕೆ ದಲಿತ ಮಂತ್ರಿಗಳು ವಿರೋಧವನ್ನೇನೂ ವ್ಯಕ್ತಪಡಿಸಲಿಲ್ಲ. ಈ ಸಂಬಂಧದಲ್ಲಿ ಕರಡು ಅಧಿಸೂಚನೆ ಸಿದ್ಧಪಡಿಸಲು ಮೀಸಲಾತಿ ಸಮಿತಿಯೂ ರಚನೆಗೊಂಡಿತು. ಅಲ್ಪಸಂಖ್ಯಾತ ಮತ್ತು ಹಿಂದುಳಿದ ವರ್ಗಗಳವರಿಗೆ ಬಡ್ತಿ ಮೀಸಲಾತಿಯಲ್ಲಿ ಶೇ. ೩೨ ರಷ್ಟು ಮೀಸಲಾತಿ ನೀಡುವುದಕ್ಕೆ ಸರ್ಕಾರ ಬದ್ಧವಾಗಿದೆ; ಪರಿಶಿಷ್ಟ ಜಾತಿ-ಪಂಗಡದವರಿಗೆ ೧೯೯೨ ರಿಂದ ಬಾಕಿ ಉಳಿದಿರುವ ಬ್ಯಾಕ್‌ಲಾಗ್ ಹುದ್ದೆಗಳನ್ನು ನೀಡುವ ಬಗೆಗೆ ಕ್ರಮಕೈಗೊಳ್ಳಲಾಗುವುದೆಂಬ ಆಶ್ವಾಸನೆಯೂ ದೊರೆಯಿತು. ಅದರಂತೆ ೧೯೯೯ ಏಪ್ರಿಲ್ ೧೨ ರಂದು ನಡೆದ ರಾಜ್ಯ ಸಚಿವ ಸಂಪುಟ ಸಭೆಯಲ್ಲಿ ಬಡ್ತಿ ಮೀಸಲಾತಿಗೆ ಸಂಬಂಧಿಸಿದಂತೆ ಹೆಚ್ಚುವರಿ ಹುದ್ದೆಗಳನ್ನು ಸೃಷ್ಟಿಸಲು ನಿರ್ಧಾರ ಕೈಗೊಳ್ಳಲಾಯಿತು.

೧೯೯೯ ಫೆಬ್ರವರಿ ೩ ರಂದು ಹೊರಡಿಸಲಾಗಿದ್ದ ಪರಿಷ್ಕೃತ ಆದೇಶದಲ್ಲಿ ಪರಿಶಿಷ್ಟ ಜಾತಿ-ವರ್ಗದವರಿಗೆ ಅನ್ಯಾಯವಾಗಿದೆಯೆಂಬ ಬಗೆಗೆ ದೂರುಗಳು ಕೇಳಿಬಂದ ಹಿನ್ನೆಲೆಯಲ್ಲಿ, ಸಂಪುಟ ಸಭೆಯಲ್ಲಿ ಏಪ್ರಿಲ್ ೧೨ ರಂದು ಕೈಗೊಂಡ ತೀರ್ಮಾನ ಅನುಸರಿಸಿ, ಕೆಲವು ಮಾರ್ಪಾಡುಗಳನ್ನು ಮಾಡಿ ಹೊರಡಿಸಿದ ಪರಿಷ್ಕೃತ ಸರ್ಕಾರಿ ಆಜ್ಞೆ ಏಪ್ರಿಲ್ ೧೩ರಂದು ಹೊರಬಿತ್ತು. ಪರಿಶಿಷ್ಟ ಜಾತಿ-ಪಂಗಡದವರಿಗೆ ಬಡ್ತಿ ನೀಡುವಾಗ ಅನುಕ್ರಮವಾಗಿ ಶೇ. ೧೫ ಮತ್ತು ೩ ರಷ್ಟು ಮೀಸಲಾತಿ ದೊರೆಯುವವರೆಗೆ ಹಾಲಿ ಜಾರಿಯಲ್ಲಿರುವ ರೋಸ್ಟರ್ ಪದ್ಧತಿಯನ್ನೇ ಅನುಸರಿಸಬೇಕು; ಪರಿಶಿಷ್ಟ ಜಾತಿ- ಪಂಗಡದವರಿಗೆ ಬಡ್ತಿ ನೀಡುವುದನ್ನು ಮುಂದುವರೆಸಬೇಕು ಹಾಗೂ ಈ ವಿಷಯಕ್ಕೆ ಸಂಬಂಧಿಸಿದಂತೆ ೧೯೯೭ ಜೂನ್ ೨೪ ರಂದು ಸರ್ಕಾರ ಹೊರಡಿಸಿದ್ದ ಆದೇಶವನ್ನು ಪಾಲಿಸಬೇಕು; ಬ್ಯಾಕ್‌ಲಾಗ್ ಹುದ್ದೆಗಳಿಗೆ ಪರಿಶಿಷ್ಟ ಜಾತಿ-ಪಂಗಡದವರಿಗೆ ಬಡ್ತಿ ನೀಡಿ ಬ್ಯಾಕ್‌ಲಾಗ್ ಹುದ್ದೆಗಳನ್ನು ಸಂಪೂರ್ಣವಾಗಿ ಭರ್ತಿಮಾಡುವವರೆಗೂ ಈ ವಿಚಾರದಲ್ಲಿ ೧೯೯೭ ಜೂನ್ ೨೪ ರಂದು ಹೊರಡಿಸಿರುವ ಸರ್ಕಾರಿ ಆದೇಶ ಜಾರಿಯಲ್ಲಿರುತ್ತದೆ; ಬ್ಯಾಕ್‌ಲಾಗ್ ಹುದ್ದೆಗಳನ್ನು ಸಂಪೂರ್ಣವಾಗಿ ಭರ್ತಿ ಮಾಡಿದ ನಂತರ ಪರಿಶಿಷ್ಟ ಜಾತಿ-ಪಂಗಡದವರಿಗೆ ಬಡ್ತಿಯಲ್ಲಿ ನೀಡುವ ಮೀಸಲಾತಿ ಪ್ರಮಾಣವನ್ನು ಶೇ. ೧೮ ಕ್ಕೆ ಮಿತಿಗೊಳಿಸಬೇಕೆಂಬ ಮಾರ್ಪಾಡುಗಳು ಏಪ್ರಿಲ್ ೧೨ರ ಆದೇಶದಲ್ಲಿ ಸೇರ್ಪಡೆಯಾಗಿದ್ದವು.

ಏಪ್ರಿಲ್ ೧೨ರ ಪರಿಷ್ಕೃತ ಸರ್ಕಾರಿ ಆದೇಶಕ್ಕೆ ನಿರೀಕ್ಷಿಸಿದಂತೆಯೇ ಟೀಕೆಗಳು ಕೇಳಿಬಂದವು. ಬಡ್ತಿ ಮೀಸಲಾತಿ ಬಗೆಗೆ ಸರ್ಕಾರ ಹೊರಡಿಸಿದ ನೂತನ ಆದೇಶದಿಂದ ಶೇ. ೮೨ ವರ್ಗದ ಸರ್ಕಾರಿ ನೌಕರರಿಗೆ ಅನ್ಯಾಯವಾಗುತ್ತದೆ; ಈ ನೂತನ ಆದೇಶವನ್ನು ಹಿಂತೆಗೆದುಕೊಂಡು ೧೯೯೯ ಫೆಬ್ರವರಿ ೩ ರಂದು ಹೊರಡಿಸಿದ ಆದೇಶವನ್ನೇ ಅನುಷ್ಠಾನಗೊಳಿಸಬೇಕೆಂದು 'ಅಹಿಂಸಾ' ಆಗ್ರಹಿಸಿತು. ಫೆಬ್ರವರಿ ೩ ರಂದು ಹೊರಡಿಸಿದ

ಆದೇಶದಲ್ಲಿ ಬ್ಯಾಕ್‌ಲಾಗ್ ಹುದ್ದೆಗಳನ್ನು ಶೇ. ೧೮ ರಷ್ಟು ತಲುಪುವ ತನಕ ತುಂಬುವ ಅವಕಾಶ ಮಾಡಿಕೊಡಲಾಗಿತ್ತು ಮತ್ತು ಆದೇಶದಿಂದ ಶೇ. ೧೮ ಮತ್ತು ಶೇ. ೮೨ ವರ್ಗದವರಿಗೆ ಸಂವಿಧಾನಬದ್ಧವಾಗಿ ಹಾಗೂ ನ್ಯಾಯಯುತವಾಗಿ ಲಭ್ಯವಾಗಬೇಕಾದ ಬಡ್ತಿ ಹುದ್ದೆಗಳನ್ನು ಪಡೆಯಲು ಅವಕಾಶ ಕಲ್ಪಿಸಲಾಗಿತ್ತು. ಆದರೆ ಏಪ್ರಿಲ್ ೧೨ರ ಮಾರ್ಪಾಡಿತ ಆದೇಶದಲ್ಲಿ ಪರಿಶಿಷ್ಟ ಜಾತಿ-ಪಂಗಡದ ಪ್ರಾತಿನಿಧ್ಯ ಶೇ. ೧೮ ಕ್ಕಿಂತ ಹೆಚ್ಚಿದ್ದರೂ ೧೯೭೮ ರಿಂದ ೧೯೯೯ರ ವರೆಗೆ ಸಿಗುವ ಎಲ್ಲಾ ಬ್ಯಾಕ್‌ಲಾಗ್ ಹುದ್ದೆಗಳನ್ನು ತುಂಬಲು ಅವಕಾಶ ನೀಡಿ ಒಮ್ಮೆಲೇ ಸಾವಿರಾರು ಹುದ್ದೆಗಳನ್ನು ಕಿರಿಯ ವಯಸ್ಸಿನ ಹಾಗೂ ಅನುಭವವಿಲ್ಲದ ಪರಿಶಿಷ್ಟ ಜಾತಿ-ಪಂಗಡದ ಅಧಿಕಾರಿಗಳಿಗೆ ನೀಡುವಂತಾಗಿದೆಯೆಂತಲೂ 'ಅಹಿಂಸಾ' ಟೀಕಿಸಿತು. ಫೆಬ್ರವರಿ ೩ರ ಆದೇಶ ಸುಪ್ರಿಂ ಕೋರ್ಟ್ ಆರ್. ಕೆ. ಸಬರವಾಲಾ ಮೊಕದ್ದಮೆ ಮತ್ತು ೧೯೯೨ ರಲ್ಲಿ ಇಂದ್ರ ಸಹಾನಿ ಮೊಕದ್ದಮೆಯಲ್ಲಿ ನೀಡಲಾದ ತೀರ್ಪುಗಳಿಗೆ ಅನುಗುಣವಾಗಿತ್ತು. ಆದರೆ ನೂತನ ಆದೇಶದಲ್ಲಿ ಈ ತೀರ್ಪುಗಳನ್ನು ಉಲ್ಲಂಘಿಸಲಾಗಿದೆಯೆಂತಲೂ ಹೇಳಿತು.

ಏಪ್ರಿಲ್ ೧೨ ರಂದು ಮೀಸಲಾತಿ ಬಗೆಗೆ ಹೊರಡಿಸಲಾದ ಚರಿತ್ರಾರ್ಹ ತೀರ್ಪು ರಾಜಕೀಯ ತೀರ್ಪಾಗಿರದೆ ಸಾಮಾಜಿಕ ಬದ್ಧತೆಯ ಕುರುಹಾಗಿದೆ. ದಲಿತರಿಗೆ ಸಲ್ಲಬೇಕಾದ ರಾಜ್ಯಾಂಗಬದ್ಧ ಹಕ್ಕಿಗಾಗಿ ಎಲ್ಲಾ ದಲಿತ ಸಚಿವರು, ಮುಖಂಡರು, ವಿರೋಧ ಪಕ್ಷದ ಸದಸ್ಯರು ನಡೆಸಿದ ಸಂಘಟಿತ ಹೋರಾಟಕ್ಕೆ ದೊರೆತ ಯಶಸ್ಸು ಎಂದು ರಾಜಕೀಯ ವಲಯ ಅಭಿವ್ಯಕ್ತಿಸಿದರೆ, ಈ ತೀರ್ಪು ಬಡ್ತಿಮೀಸಲು ಆದೇಶ ಸುಪ್ರಿಂ ಕೋರ್ಟ್‌ನ ಸ್ಪಷ್ಟ ಉಲ್ಲಂಘನೆಯೆಂದು ಕರ್ನಾಟಕ ರಾಜ್ಯ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಇಂಜಿನಿಯರ್‌ಗಳ ಕ್ಷೇಮಾಭಿವೃದ್ಧಿ ಸಂಘ ಪ್ರತಿಕ್ರಿಯಿಸಿತು. ಇದೊಂದು ಮೂಗಿಗೆ ತುಪ್ಪ ಸವರುವ ಕಾರ್ಯ. ಈಗಿನ ಪರಿಷ್ಕೃತ ಆದೇಶದಲ್ಲಿ ಪರಿಶಿಷ್ಟ ಜಾತಿ-ಪಂಗಡಗಳಿಗೆ ಬಡ್ತಿ ಮೀಸಲಾತಿಯನ್ನು ಮತ್ತೆ ಶೇ. ೧೮ಕ್ಕೇ ಮಿತಿಗೊಳಿಸಿದಂತಾಗಿದೆ. ಆರ್. ಕೆ. ಸಬರವಾಲಾ ತೀರ್ಪಿನ ಹಿನ್ನೆಲೆಯಲ್ಲಿ ಬಡ್ತಿ ಮೀಸಲಾತಿಯನ್ನು ಮಿತಿಗೊಳಿಸುವುದಾದಲ್ಲಿ ಜನಸಂಖ್ಯೆಗೆ ಅನುಗುಣವಾಗಿ ಪರಿಶಿಷ್ಟ ಜಾತಿ-ಪಂಗಡದವರಿಗೆ ಶೇ. ೨೩ ರಷ್ಟು ಮೀಸಲಾತಿ ಕಲ್ಪಿಸಬೇಕಿತ್ತು. ಬಡ್ತಿ ಮೀಸಲಾತಿಯನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹುದ್ದೆಗೆ (ಕ್ಲಾಸ್ ೧- ಜೂನಿಯರ್) ಸೀಮಿತಗೊಳಿಸಿರುವುದು ಸಂವಿಧಾನಕ್ಕೆ ಎಸಗಿದ ಅಪಚಾರ. ಸಂವಿಧಾನದ ೧೬(೪-ಎ) ಪ್ರಕಾರ, ಪರಿಶಿಷ್ಟ ಜಾತಿ-ಪಂಗಡಗಳವರಿಗೆ ಕ್ಲಾಸ್ ೧-ಸೀನಿಯರ್ ಹುದ್ದೆಗೆ ಬಡ್ತಿಯಲ್ಲಿ ಅವಕಾಶವಿದೆ. ಹಿಂದಿನ ಸರ್ಕಾರಗಳು ನೀಡುತ್ತಿದ್ದ ಈ ಸವಲತ್ತನ್ನು ಪ್ರಸಕ್ತ ಸರ್ಕಾರ ಕಿತ್ತುಕೊಂಡಿದೆಯೆಂದು ಖಂಡಿಸಿತು. ಏಪ್ರಿಲ್ ೧೨ರ ಬಡ್ತಿ ಮೀಸಲಾತಿ ಆದೇಶಕ್ಕೆ ದಲಿತ ಸಂಘಟನೆಗಳೂ ತಮ್ಮ ಆಕ್ರೋಶ ವ್ಯಕ್ತಪಡಿಸಿದವು. ಈ ಆದೇಶದಿಂದ ಪರಿಶಿಷ್ಟ ವರ್ಗಗಳಿಗೆ ಯಾವುದೇ ಲಾಭವಿಲ್ಲ. ಬ್ಯಾಕ್‌ಲಾಗ್ ಹುದ್ದೆಗಳನ್ನು ತುಂಬುವುದು ಸರ್ಕಾರದ ಜವಾಬ್ದಾರಿ. ಬಡ್ತಿ ಮೀಸಲಾತಿ ಬಗೆಗೆ ದೇವರಾಜ ಅರಸು ಸರ್ಕಾರ ೧೯೭೮ರಲ್ಲಿ ಹೊರಡಿಸಿದ ಆದೇಶವನ್ನೇ ಮುಂದುವರೆಸಬೇಕು. ಸಣ್ಣ ಪುಟ್ಟ ಮಾರ್ಪಾಡುಗಳನ್ನು ಮಾಡಿ ಸರ್ಕಾರ ದಲಿತರಿಗೆ ಭಿಕ್ಷೆ ಹಾಕಿದ ಹಾಗೆ ಮಾಡುತ್ತಿದೆಯೆಂದು ತೀವ್ರವಾಗಿ ಪ್ರತಿಭಟಿಸಿದವು.

'ಅಹಿಂದ' ಆಗ್ರಹ ಪಡಿಸುವಂತೆ, ಕಾರ್ಯಾಂಗದಲ್ಲಿ ಎಲ್ಲ ವರ್ಗಗಳಿಗೂ ಪ್ರಾತಿನಿಧ್ಯ ಸಿಗುವಂತಾಗಲು ಜಾತಿಯಾಧಾರಿತ ಮೀಸಲಾತಿ ವ್ಯವಸ್ಥೆ ಜಾರಿಗೊಳಿಸಬೇಕು. ಇತರ ಹಿಂದುಳಿದ ವರ್ಗ ಹಾಗೂ ಅಲ್ಪಸಂಖ್ಯಾತರಿಗೂ ಅವರ ಜನಸಂಖ್ಯೆಯ ಪ್ರಮಾಣಕ್ಕೆ ಅನುಸಾರವಾಗಿ ಮೀಸಲಾತಿ ನೀಡಬೇಕು. ಶೇ. ೮೨ ಮತ್ತು ಶೇ. ೧೮ ಎಂಬ ವರ್ಗ ಸಂಘರ್ಷದಿಂದಾಗಿ ಒಂದು ಉತ್ತಮ ಪರಿಣಾಮ ಆಗಲಿದೆ.

ಬಡ್ತಿ ಮೀಸಲಾತಿ ಸಂಬಂಧದಲ್ಲಿ ಆಗಿರುವ ಈಚಿನ ಬೆಳವಣಿಗೆಗಳನ್ನು ಕುರಿತು ಇಲ್ಲಿ ಪ್ರಸ್ತಾಪಿಸುವುದು ಅಗತ್ಯ. ಈಚೆಗೆ (ಸೆಪ್ಟಂಬರ್ ೧೯೯೯) ಸರ್ವೋಚ್ಚ ನ್ಯಾಯಲಯ ನೀಡಿರುವ ಆದೇಶವು ದಲಿತರ ಬಡ್ತಿ ಮೀಸಲಾತಿಯನ್ನು ತಡೆ ಹಿಡಿಯುವಂಥಾದ್ದಾಗಿದೆ ಯೆಂದು ದಲಿತ ಸಂಘಟನೆಗಳು ಭಾವಿಸುವುದರಲ್ಲಿ ಅರ್ಥವಿದೆ. ಈ ತೀರ್ಪಿನ ಪ್ರಕಾರ, ಎರಡನೇ ಹಂತದ ಬಡ್ತಿ ನೀಡುವಾಗ ಮೊದಲನೇ ಮೂಲಹುದ್ದೆ (ಫೀಡರ್ ಕೇಡರ್)ಯಲ್ಲಿ ಸೀನಿಯಾರಿಟಿ ಪಡೆದಿರುವ ದಲಿತೇತರ ನೌಕರನಿಗೆ ದಲಿತ ನೌಕರರನ್ನು ಕಡೆಗಣಿಸಿ ಮೊದಲನೇ ಆದ್ಯತೆ ನೀಡಿ ಮೊದಲು ಬಡ್ತಿ ನೀಡಬೇಕಾಗಿದೆ. ಬಡ್ತಿ ಮೀಸಲಾತಿ ನಿಯಮದಂತೆ ಮೊದಲ ಹಂತದ ಬಡ್ತಿ ಪಡೆದು ಅಲ್ಲಿ ಸೀನಿಯಾರಿಟಿ ಪಡೆದ ದಲಿತ ನೌಕರರು ಎರಡನೇ ಹಂತದ ಬಡ್ತಿ ಪಡೆಯುವಾಗ ಕಡೆಗಣಿಸಲ್ಪಡುತ್ತಾರೆ. ಆದರೆ ಇದನ್ನು ಒಪ್ಪದ ದಲಿತ ಸಂಘಟನೆಗಳು, ಇದು ಬಡ್ತಿ ಮೀಸಲಾತಿಯ ವಿರುದ್ಧ ಪಟ್ಟಭದ್ರರು ರೂಪಿಸಿರುವ ಸಂಚಾಗಿದೆಯೆಂದು ಭಾವಿಸುತ್ತವೆ. ಸರ್ವೋಚ್ಚ ನ್ಯಾಯಾಲಯ ನೀಡಿರುವ ತೀರ್ಪಿನಿಂದಾಗುವ ಅನಾಹುತವನ್ನು ಕೇಂದ್ರ ಸರ್ಕಾರ ಸರಿಪಡಿಸಬೇಕು; ಕೆಲವು ಮೇಲ್ವರ್ಗದವರು ಸಂವಿಧಾನದ ಅನುಚ್ಛೇದ ೧೬ (೪ಎ) ತಿದ್ದುಪಡಿ ವಜಾಗೊಳಿಸುವಂತೆ ಸರ್ವೋಚ್ಚ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿದ್ದು, ಸರ್ಕಾರ ಈ ಮೊಕದ್ದಮೆಯನ್ನು ಸಮರ್ಥವಾಗಿ ಎದುರಿಸಿ ದಲಿತರ ಹಿತ ಕಾಪಾಡಬೇಕೆಂದು ಒತ್ತಾಯಿಸುತ್ತವೆ.

ಬಡ್ತಿ ಮೀಸಲಾತಿ ಕುರಿತು ಸುಪ್ರಿಂ ಕೋರ್ಟ್ ನೀಡಿದ ತೀರ್ಪಿಗೆ ಪ್ರಧಾನ ಮಂತ್ರಿಗಳೂ ಪ್ರತಿಕ್ರಿಯಿಸಿರುವುದು ಗಮನಾರ್ಹ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಂಸತ್ ಸದಸ್ಯರ ಸಮ್ಮೇಳನದಲ್ಲಿ ಅವರು ನೀಡಿರುವ ಆಶ್ವಾಸನೆಯಂತೆ, ಸುಪ್ರಿಂ ಕೋರ್ಟ್ ನೀಡಿದ ತೀರ್ಪಿಗೆ ವಿರುದ್ಧವಾಗಿ ಸಂಸತ್ತಿನಲ್ಲಿ ಸಂವಿಧಾನ ತಿದ್ದುಪಡಿ ಮಾಡುವುದರ ಮೂಲಕ ಪರಿಶಿಷ್ಟ ಜಾತಿ- ಪಂಗಡಗಳಿಗೆ ಬಡ್ತಿಯಲ್ಲಿ ಮೀಸಲಾತಿ ನೀಡಲಾಗುವುದೆಂದು ಮತ್ತು ಕೇಂದ್ರ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಖಾಲಿ ಬಿದ್ದಿರುವ ಬ್ಯಾಕ್‌ಲಾಗ್ ಹುದ್ದೆಗಳನ್ನು ವಿಶೇಷ ನೇಮಕಾತಿ ಮೂಲಕ ತುಂಬಲಾಗುವುದೆಂದು ಅವರು ಆಶ್ವಾಸನೆ ಇತ್ತಿರುವುದು ದಲಿತ ಬಣಗಳಲ್ಲಿ ಆಶಾಭಾವನೆ ಮೂಡಲು ಕಾರಣವಾಗಿದೆ. ಈ ಬಡ್ತಿ ಮೀಸಲಾತಿ ಸಮಸ್ಯೆ ಮುಂದಿನ ದಿನಗಳಲ್ಲಿ ಹೇಗೆ ಪರಿಹಾರಗೊಳ್ಳುವುದೋ ನೋಡಬೇಕಿದೆ.

ವಿಚಾರವಂತರು ಅಭಿಪ್ರಾಯಪಡುವಂತೆ, ದಲಿತರಿಗೆ ಶಿಕ್ಷಣ ದೊರೆತಾಗ ಬಿ. ಆರ್. ಅಂಬೇಡ್ಕರ್ ಕನಸಿನಂತೆ ರಾಷ್ಟ್ರದಲ್ಲಿ ಸಮಾನತೆ ಬರುತ್ತದೆ. ಅವರೆಗೂ ಮೀಸಲಾತಿ ಮುಂದುವರೆಯುವುದು ಅವಶ್ಯ. ದಲಿತರು, ಶೋಷಿತರ ನೋವುಗಳಿಗೆ ಇತರ ವರ್ಗದವರು ಸ್ಪಂದಿಸುವ ವಾತಾವರಣ ನಿರ್ಮಾಣವಾಗಬೇಕಿದೆ. ಕಳೆದ ೫೩ ವರ್ಷಗಳಿಂದ ಮೀಸಲಾತಿ ವ್ಯವಸ್ಥೆ ಜಾರಿಯಲ್ಲಿದ್ದರೂ ದಲಿತರು ಗೌರವದಿಂದ ಬಾಳಲು ಸಾಧ್ಯವಾಗಿದೆಯೇ ಎಂಬುದರ

ಬಗೆಗೆ ಸಮಾಜದ ಪ್ರತಿಯೊಬ್ಬರೂ ಆತ್ಮವಿಮರ್ಶೆ ಮಾಡಿಕೊಳ್ಳಬೇಕಿದೆ. ಡಾ. ಆರ್. ಮಣಿಪಾಲರ ಅಭಿಪ್ರಾಯವನ್ನು ಗಮನಿಸುವುದಾದರೆ, ಮೀಸಲಾತಿ ತನ್ನಿಂದ ತಾನೇ ಒಂದು ಗುರಿಯಲ್ಲ. ಗುರಿಯೆಡೆಗೆ ಸಾಗುವ ದಾರಿಯೆಂದು, ಮೀಸಲಾತಿಗಾಗಿ (ದಲಿತರ) ಹೋರಾಟವು, (ವರ್ಗ) ಹೋರಾಟಕ್ಕಾಗಿ ಮೀಸಲಾತಿಯಾಗುವ ಗುರಿಯನ್ನು ಇಟ್ಟುಕೊಳ್ಳುವಂತಾಗಬೇಕು. ಈ ಅಂಶವನ್ನು ದಲಿತ ಹೋರಾಟಗಾರರು ಮನವರಿಕೆ ಮಾಡಿಕೊಂಡಾಗ, ಉಳಿದ ಸಮಾನತಾ ಹೋರಾಟಗಳೊಂದಿಗೆ ತಮ್ಮ ಹೋರಾಟವನ್ನು ಸಮನ್ವಯಿಸಿಕೊಳ್ಳುವಂತಾಗುತ್ತದೆ; ಅಲ್ಲಿಯವರೆಗೆ ಅವರ ಹೋರಾಟವಷ್ಟೆ ಅಲ್ಲ, ಉಳಿದ ಸಮಾನತಾ ಹೋರಾಟಗಳೂ ಅಪೂರ್ಣವಾಗಿ ಉಳಿಯುತ್ತವೆ (ಮಣಿಪಾಲ : ೧೯೯೭ : ೫೨).



# ಆಕರ ಸಾಹಿತ್ಯ

## ಕನ್ನಡ


ಬಿ. ಆರ್. ಅಂಬೇಡ್ಕರ್, ೧೯೭೩, **ಅಸ್ಪೃಶ್ಯರು** (ಅನು.: ಕುಮಾರ ವೆಂಕಣ್ಣ), ವಸಂತ ಪ್ರಕಾಶನ, ಬೆಂಗಳೂರು.

ದೇವೇಂದ್ರ ದೇಸಾಯಿ (ಸಂ.), ೧೯೭೯, **ಹಾವನೂರು ವರದಿ-ಸಮಗ್ರ ಅಧ್ಯಯನ**, ಚೈತ್ರಶಿಲ್ಪ ಪ್ರಕಾಶನ, ಮೈಸೂರು.

ಹಂಪ. ನಾಗರಾಜಯ್ಯ (ಪ್ರ. ಸಂ.), ೧೯೭೯, **ಧರ್ಮಸ್ಥಳ ಸಾಹಿತ್ಯ ಸಮ್ಮೇಳನ ೧೯೭೯**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಹಂಪ. ನಾಗರಾಜಯ್ಯ (ಪ್ರ.ಸಂ.), ೧೯೮೧, **ಚಿಕ್ಕಮಗಳೂರು ಸಾಹಿತ್ಯ ಸಮ್ಮೇಳನ ೧೯೮೧**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಎಸ್. ಗಣೇಶನ್, ೧೯೮೨, **ದಲಿತ ಸಾಹಿತ್ಯ ಚಳುವಳಿ**, ಪಂಚಮ ಪ್ರಕಾಶನ, ಬೆಂಗಳೂರು.

ಎಸ್. ಚಂದ್ರಶೇಖರ್, ೧೯೮೩, **ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ : ಕೆಲವು ಒಳನೋಟಗಳು (೧೮೮೧–೧೯೪೦)**, 'ಅಂಕಣ' ಪ್ರಕಾಶನ, ಬೆಂಗಳೂರು.

ಹಂಪ. ನಾಗರಾಜಯ್ಯ (ಪ್ರ. ಸಂ.), ೧೯೮೪, **ಶಿರಸಿ ಸಾಹಿತ್ಯ ಸಮ್ಮೇಳನ ೧೯೮೩**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ವಿ. ಆರ್. ಕೃಷ್ಣ ಅಯ್ಯರ್, ೧೯೮೪, **ದುರ್ಬಲವರ್ಗಗಳವರಿಗೆ ನುಡಿಯಲ್ಲಿ ನ್ಯಾಯ, ನಡೆಯಲ್ಲಿ ಅನ್ಯಾಯ** (ಅನು: ಶಂಸ ಐತಾಳ), ಅಕ್ಷರ ಪ್ರಕಾಶನ, ಸಾಗರ.

ಎಂ. ಚಿದಾನಂದಮೂರ್ತಿ, ೧೯೮೫, **ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಕೋಣಂದೂರು ವೆಂಕಪ್ಪಗೌಡ (ಸಂ.), ೧೯೮೫, **ಪರಿವರ್ತನೆಯ ಹರಿಕಾರ** (ಡಿ. ದೇವರಾಜ ಅರಸು ಸ್ಮಾರಕ ಗ್ರಂಥ), ಯಶಸ್ವೀ ಪ್ರಕಾಶನ, ಬೆಂಗಳೂರು.

ಬಿ. ಎಂ. ಎಂ. ಆರಾಧ್ಯ, ೧೯೮೫, **ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ**, ಅಪ್ಪು ಪ್ರಕಾಶನ, ಬೆಂಗಳೂರು.

ಸೂರ್ಯನಾಥ ಯು. ಕಾಮತ್ (ಮು. ಸಂ.), ೧೯೮೬, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್**, ಭಾಗ ೩, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು.

ರಾಮಮನೋಹರ ಲೋಹಿಯಾ, ೧೯೮೬, **ಜಾತಿಪದ್ಧತಿ** (ಅನು.: ಹಸದ್ ಸಯೀಂ ಸುರಕೋಡ), 'ಪತ್ರಿಕೆ' ಪ್ರಕಾಶನ, ಬೆಂಗಳೂರು.

ಬಿ. ವಿ. ವೈಕುಂಠರಾಜು, ೧೯೮೭, **ಸಂಪಾದಕರ ಡೈರಿ – ೧೯೮೫**, ಸನತ್ ಪ್ರಕಾಶನ, ಬೆಂಗಳೂರು.

ಬಿ. ವಿ. ವೈಕುಂಠರಾಜು, ೧೯೮೮, **ಸಂಪಾದಕರ ಡೈರಿ – ೧೯೮೬**, ಸನತ್ ಪ್ರಕಾಶನ, ಬೆಂಗಳೂರು.

ಬುದ್ದಣ್ಣ ಹಿಂಗಮಿರೆ (ಸಂ.), ೧೯೮೮, **ಸಾಹಿತ್ಯ ವಿಮರ್ಶೆ ೧೯೮೭**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಅರವಿಂದ ಮಾಲಗತ್ತಿ, ೧೯೮೯, **ದಲಿತ ಸಾಹಿತ್ಯ ಚಳವಳಿಯ ತಾತ್ವಿಕ ಚಿಂತನ**, ಹೊಸದಿಕ್ಕು ಪ್ರಕಾಶನ, ಬೆಂಗಳೂರು.

ತೇಜಸ್ವಿ ಕಟ್ಟೀಮನಿ, ೧೯೯೦, **ಮಂಡಲ ವರದಿ–ಒಂದು ಅಧ್ಯಯನ**, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

ಡಾ. ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂಪುಟ ೧, ೧೯೯೨, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ದೇವಯ್ಯ ಹರವೆ, ೧೯೯೧, ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

ಗಂಗಾರಾಂ ಚಂಡಾಳ, ೧೯೯೨, ಕರ್ನಾಟಕ ದಲಿತ ಚಳವಳಿ ಮತ್ತು ಡಾ|| ಬಿ. ಆರ್. ಅಂಬೇಡ್ಕರ್, ಚೈತ್ರ ಪ್ರಕಾಶನ, ಚಿಕ್ಕ ತಿರುಪತಿ (ಕೋಲಾರ ಜಿಲ್ಲೆ).

ಎಲ್. ಹನುಮಂತಯ್ಯ, ೧೯೯೨, ದಲಿತಲೋಕದ ಒಳಗೆ, ಕರ್ನಾಟಕ ದಲಿತ ಪ್ರಕಾಶನ, ಬೆಂಗಳೂರು.

ಬರಗೂರು ರಾಮಚಂದ್ರಪ್ಪ (ಪ್ರ. ಸಂ.), ೧೯೯೨, ಕೋಮು ಸಮಸ್ಯೆ ಮತ್ತು ಆಧುನಿಕ ಕನ್ನಡ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಬರಗೂರು ರಾಮಚಂದ್ರಪ್ಪ (ಪ್ರ. ಸಂ.), ೧೯೯೩, ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಬರಗೂರು ರಾಮಚಂದ್ರಪ್ಪ (ಪ್ರ. ಸಂ.), ೧೯೯೩, ಕನ್ನಡ ಸಾಹಿತ್ಯದಲ್ಲಿ ನೋವಿನ ನೆಲೆಗಳು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಬರಗೂರು ರಾಮಚಂದ್ರಪ್ಪ (ಪ್ರ. ಸಂ.), ೧೯೯೩, ವಚನಸಾಹಿತ್ಯದಲ್ಲಿ ಕೆಳವರ್ಗದ ಆಶಯ ಮತ್ತು ಅಭಿವ್ಯಕ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಪುರುಷೋತ್ತಮ ಬಿಳಿಮಲೆ (ಸಂ.), ೧೯೯೩, ವಿಚಾರ ಸಾಹಿತ್ಯ : ೧೯೯೨, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಚಂದ್ರಶೇಖರ ಕುಕ್ಕಿಕಟ್ಟೆ, ೧೯೯೩, ಬದನವಾಳು ಉಮತ್ತೂರಿನಲ್ಲಿ ನಡೆದಿದ್ದೇನು? (ವಸ್ತುನಿಷ್ಠ ಸಮೀಕ್ಷಾ ಲೇಖನಗಳು), ಸಂಕ್ರಾಂತಿ ಪ್ರಕಾಶನ, ಮೈಸೂರು.

ಶರದ್ ಪಾಟೀಲ್, ೧೯೯೪, ಭಾರತದ ಜಾತಿ ಹೋರಾಟಗಳು, ಭಾಗ ೧ : ವಸಾಹತುಪೂರ್ವ ಕಾಲ (ಅನು. : ಗಂಗಾಧರಮೂರ್ತಿ), ಕರ್ನಾಟಕ ದಲಿತ ಸಂಘರ್ಷ ಸಮಿತಿ, ಕೋಲಾರ ಜಿಲ್ಲೆ.

ಸಿ. ಕೆ. ಮಹೇಶ್, ೧೯೯೪, ಬಹುಜನ ಸಮಾಜ v/s ಬ್ರಾಹ್ಮಣ್ಯ, ವಿಮೋಚನಾ ಪ್ರಕಾಶನ, ಚಿತ್ರದುರ್ಗ.

ಮ. ನ. ಜವರಯ್ಯ, ೧೯೯೪, ಪರಂಪರೆ ಹಾಗೂ ದಲಿತಬಂಡಾಯ ಸಾಹಿತ್ಯ : ಸಮಗ್ರ ಅಧ್ಯಯನ, ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು.

ಶ್ರೀಧರ ಕಲಿವೀರ, ೧೯೯೪, ಬಹುಜನ ಸಮಾಜ ಪಕ್ಷದ ಸಿದ್ಧಾಂತ ಮತ್ತು ಕಾರ್ಯಕ್ರಮಗಳು, ಕರ್ನಾಟಕ ದಲಿತ ಸಂಘರ್ಷ ಸಮಿತಿ, ಬೆಂಗಳೂರು.

ಟಿ. ಯಲ್ಲಪ್ಪ ಬೂತಯ್ಯ, ೧೯೯೪, ಆದಿ ಕರ್ನಾಟಕರು (ಆದಿ ಜಾಂಬವರು) ಮತ್ತು ಮೀಸಲಾತಿ, ಆದಿ ಭಾರತ ಸಾಹಿತ್ಯ ಪ್ರಕಾಶನ, ಮೈಸೂರು.

ಡಿ. ಎಸ್. ಜಯಪ್ಪಗೌಡ, ೧೯೯೪, ದಿವಾನ್ ಸರ್ ಎಂ. ವಿಶ್ವೇಶ್ವರಯ್ಯನವರ ಕಾರ್ಯಸಾಧನೆಗಳು, ಶುಭೋದಯ ಪ್ರಕಾಶನ, ಮೈಸೂರು.

ಸೂರ್ಯನಾಥ ಕಾಮತ್, ದೇವರಕೊಂಡಾರೆಡ್ಡಿ (ಸಂ.), ೧೯೯೪, ಇತಿಹಾಸದರ್ಶನ, ಸಂಪುಟ ೯, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು.

ಕರ್ನಾಟಕ ರಾಜ್ಯಮಟ್ಟದ ಮಚಗಾರ ಸಮಾಜದ ಮಹಾ ಅಧಿವೇಶನ (ಸಂಸ್ಮರಣ ಸಂಚಿಕೆ), ೧೯೯೪, ಅಖಿಲ ಕರ್ನಾಟಕ ಮಚಿಗಾರ ಸಂಘ, ಹುಬ್ಬಳ್ಳಿ

ಎಂ. ಗೋಪಿನಾಥ್, ೧೯೯೫, ಸಾಮಾಜಿಕ ನ್ಯಾಯ v/s ಸಾಮಾಜಿಕ ದಕ್ಷತೆ, ದಲಿತ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಬಿ. ಆರ್. ಅಂಬೇಡ್ಕರ್, ೧೯೯೫, ಪೂನಾ ಒಡಂಬಡಿಕೆ (ಅನು. : ಎಂ. ಗೋಪಿನಾಥ್), ಅಬಿವಾದ ಅರಿವಿನ ಜಾತಾ ಸಮಿತಿ, ಬೆಂಗಳೂರು.

**ಡಾ. ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು**, ಸಂಪುಟ ೫, ೧೯೯೬, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ಕಾಳೇಗೌಡ ನಾಗವಾರ, ನಟರಾಜ್ ಹುಳಿಯಾರ್ (ಸಂ.), ೧೯೯೬, **ಸ್ವಾತಂತ್ರ್ಯದ ಅಂತರ್ಜಲ** (ಡಾ. ರಾಮಮನೋಹರ ಲೋಹಿಯಾ ಅವರ ಪ್ರಾತಿನಿಧಿಕ ಲೇಖನಗಳು), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ತುಳಜಾರಾಮ ಎನ್. ರಜಪೂತ, ೧೯೯೬, **ಬೆಳಗಾವಿ ಜಿಲ್ಲೆಯ ದಲಿತ ಚಳುವಳಿ : ಒಂದು ಅಧ್ಯಯನ** (ಎಂ. ಫಿಲ್. ಸಂಶೋಧನ ಪ್ರಬಂಧ - ಅಪ್ರಕಟಿತ), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಸರಜೂ ಕಾಟ್ಕರ್, ೧೯೯೬, **ಕನ್ನಡ-ಮರಾಠಿ ದಲಿತ ಸಾಹಿತ್ಯ** ವಿಮೋಚನಾ ಪ್ರಕಾಶನ, ಅಥಣಿ.

ಎಂ. ಬಿ. ಪಾಟೀಲ್ (ಮು. ಸಂ.), ೧೯೯೬, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್** (ದಶವಾರ್ಷಿಕ ಪುರವಣಿ : ೧೯೮೩ - ೧೯೯೩), ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು.

ಪಿ. ವಿ. ನಂಜರಾಜ ಅರಸು, ಎಸ್. ಆರ್. ಚಂದ್ರರಾಜ ಅರಸು (ಸಂ.), ೧೯೯೬, **ನಾಲ್ವಡಿ ಕೃಷ್ಣರಾಜ ಒಡೆಯರ್ : ಒಂದು ದರ್ಶನ**, ಅಖಿಲ ಕರ್ನಾಟಕ ಅರಸು ಪರಿಷತ್, ಮೈಸೂರು.

ಕೆ. ಬಾಬಾನಾಯಕ್, ೧೯೯೬, **ಬಂಜಾರ ಧರ್ಮದ ಸಾಮಾನ್ಯ ಜ್ಞಾನ**, ಶ್ಯಾಮಲಾ ಪ್ರಕಾಶನ, ಬೆಂಗಳೂರು.

ಸಿ. ಕೆ. ಮಹೇಶ್, ೧೯೯೭, **ಕಾನ್ಶಿರಾಮ್ : ಚಮಚಾಯುಗ**, ವಿಮೋಚನಾ ಪ್ರಕಾಶನ, ಚಿತ್ರದುರ್ಗ.

ಓ. ಶ್ರೀಧರನ್, ೧೯೯೭, **ಡಾ. ಅಂಬೇಡ್ಕರ್ ಚಿಂತನೆಯ ಬೆಳಕಿನಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಮತ್ತು ಬಹುಜನ ಸಮಾಜ ಪಕ್ಷ**, ಕರ್ನಾಟಕ ದಲಿತ ಸಂಘರ್ಷ ಸಮಿತಿ (ರಾಜ್ಯಸಮಿತಿ), ಬೆಂಗಳೂರು.

ಆರ್ಕೆ. ಮಣಿಪಾಲ, ೧೯೯೭, **ಸಾಮಾಜಿಕ ಚಳವಳಗಳು**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

ಸೆಬಾಸ್ಟಿಯನ್ ಜೋಸೆಫ್ (ಸಂ.), ೧೯೯೭, **ಕರ್ನಾಟಕ ಚರಿತ್ರೆ** (ಕ್ರಿ. ಶ. ೧೮೦೦-೧೯೦೦), ಸಂಪುಟ ೬, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಎಸ್. ಚಂದ್ರಶೇಖರ್ (ಸಂ.), ೧೯೯೭, **ಕರ್ನಾಟಕ ಚರಿತ್ರೆ** (ಕ್ರಿ. ಶ. ೧೯೦೦-೧೯೫೬), ಸಂಪುಟ ೭, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪರಶುರಾಮ ಕೊದ್ದಡ್ಡಿ (ಪ್ರ.), ೧೯೯೭, **ಪ್ರೊ. ಬಿ. ಕೃಷ್ಣಪ್ಪ ಸಂದೇಶ ಹಾಗೂ ಹೋರಾಟದ ಹಾಡುಗಳು**, ಕರ್ನಾಟಕ ದಲಿತ ಸಂಘರ್ಷ ಸಮಿತಿ, ಹುಬ್ಬಳ್ಳಿ.

ಬಿ. ಎಂ. ಪುಟ್ಟಯ್ಯ, ೧೯೯೭, **ಕನ್ನಡ ದಲಿತ ಸಾಹಿತ್ಯ ಮತ್ತು ಪ್ರತಿಸಂಸ್ಕೃತಿ** (ಡಾಕ್ಟರೇಟ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ - ಅಪ್ರಕಟಿತ).

ವಿ. ಮುನಿವೆಂಕಟಪ್ಪ, ೧೯೯೮, **ದಲಿತ ಚಳವಳಿ : ಒಂದು ಅವಲೋಕನ**, ವಿಚಾರವಾದಿ ಪ್ರಕಾಶನ, ಮೈಸೂರು.

ಬಿ. ವಿ. ವೀರಭದ್ರಪ್ಪ, ಬಿ. ಟಿ. ಜಾಹ್ನವಿ (ಸಂ.), ೧೯೯೮, **ಮುಟ್ಟಿಸಿಕೊಂಡವರು** (ದಲಿತ ಸಂಸ್ಕೃತಿ ಕೆಲನೋಟಗಳು - ಡಾ. ಬಿ. ಎಂ. ತಿಪ್ಪೇಸ್ವಾಮಿ ನೆನಪು), ಬುಟ್ಟಿ ಪ್ರಕಾಶನ, ದಾವಣಗೆರೆ.

**ಪ್ರೊಫೆಸರ್ 'ಬೀಕೆ' ಬಿಚ್ಚುನುಡಿ**, ೧೯೯೮, ಪ್ರೊ॥ 'ಬೀಕೆ' ವಿಚಾರ ವೇದಿಕೆ, ರಾಯಚೂರು.

ಬಿ. ಕೃಷ್ಣಪ್ಪ, ೧೯೯೯, **ಚಿಂತನೆಗಳು ಮತ್ತು ಬರಹಗಳು**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ಕೆ. ಆರ್. ಕಮಲೇಶ್, ಎಸ್. ಎ. ಜಗನ್ನಾಥ್ (ಸಂ.), ೧೯೯೯, **ಭಗೀರಥ ಸಂಕಲ್ಪ** (ಭಗೀರಥ ಜಯಂತಿ ನೆನಪಿನ ಸಂಪುಟ), ಕುಷ್ಟಗಿ.

ಕಾನ್ಶಿರಾಂ, **ಸ್ವತಂತ್ರ ಭಾರತದಲ್ಲಿ ಬಹುಜನ ಸಮಾಜ ಪರತಂತ್ರ ಏಕೆ?**, ಬಹುಜನ ಸಮಾಜ ಪಾರ್ಟಿ ಪ್ರಕಟಣೆ.

## ಇಂಗ್ಲಿಷ್

B Kuppuswamy, 1978, **Backward Class Movement in Karnataka**, Bangalore University, Bangalore.

Bjorne Hettne, 1978, **The Political Economy of Indirect Rule : Mysore, 1881-1947,** Ambika Publications, New Delhi.

K. L. Sharma, 1986, **Caste, Class and Social Movements,** Rawat Publications, Jaipur

**Report of the Second Backward Classes Commission,** Vols. 1, 2 & 3, 1986, Government of Karnataka, Bangalore.

V. T. Rajashekar, 1987, **Merit, My Foot (A Replay to Anti-Reservation Racists),** Dalit Sahitya Academy, Bangalore.

K. S. Padhy & Jayashree Mahapatra, 1988, **Reservation Policy in India**, Ashish Publishing House, New Delhi

Geo. W. Briggs, 1990, **The Chamars**, Low Price Publications, Delhi

**Report of the Karnataka Third Backward Classes Commission,** Vols. 1 & 2, 1990, Government of Karnataka, Bangalore.

Asghar Ali Engineer (Ed.), 1991, **Mandal Commission Controversy,** Ajanta Publications, Delhi.

Lata Murugkar, 1991, **Dalit Panther Movement in Maharashtra - A Sociological Appraisal,** Sangam Books, Bombay.

Arjun Dangle (Ed.), 1992, **Poisoned Bread** (Translations from Modern Marathi Dalit Literature), New Delhi.

Mulkraj Anand & Eleanor Zelliot (Eds.), 1992, **An Anthology of Dalit Literature** (Poems), New Delhi.

Andre Beteille, 1992, **The Backward Classes in Contemporary India**, Oxford University Press, New Delhi

Gail Omvedt, 1994, **Dalits and the Democratic Revolution : Dr. Ambedkar and the Dalit Movement in Colonial India,** Sage Publications, New Delhi.

Gail Omvedt, 1995, **Dalit Visions,** Orient Longman Limited, New Delhi.

James Massey, 1995, **Dalits in India** (Religion as a source of Bondage or Liberation with special reference to Christians), Manohar, New Delhi.

Yeshwant Khillare (Ed.), 1997, **Present Status of Backward Classes in India**, Dr. Babasaheb Ambedkar Marathwada University, Aurangabad

Anand Teltumbde, 1997, **'Ambedkar' in and for the Post-Ambedkar Dalit Movement**, Sugawa Prakashana, Pune

**National Commission for Scheduled Castes and Scheduled Tribes - A Hand Book,** 1997, Government of India, New Delhi.

D. D. Khanna, L. L. Mehrotra & Gert W. Kueck (Eds.), 1998, **Democracy, Diversity, Stability** (50 Years of Indian Independence), Macmillan India Limited, New Delhi.

Oruvingal Sreedharan, 1998, **The Demise of Reservation in Promotion and its Rebirth,** Babasaheb Dr. B. R. Ambedkar Adhyayana Kendra, Bangalore

**Perspectives of Dalit Question & the Future of Dalit Politics,** Vikalp (Quarterly Journal of Vikas Adhyayana Kendra), Vol. VI, No. 2, 1998, Mumbai

P. Venugopal, 1998, **Social Justice and Reservation,** Emerald Publishers, Chennai

S. A. Bari & Ashok Shettar (Eds)., 1998, **Studies in Karnataka History and Culture,** Vol. 4 (Proceedings of Karnataka History Congress), Dharwad

Sanjeeb K. Behera (Compiler), 1999, **Data Base on Scheduled Castes Literacy in India** (Based on Census Data 1991), Indian Social Institute, New Delhi

## ಪತ್ರಿಕೆಗಳು

೧. **ದಿನಪತ್ರಿಕೆ** : ಪ್ರಜಾವಾಣಿ, ಡೆಕ್ಕನ್ ಹೆರಾಲ್ಡ್, ಸಂಯುಕ್ತ ಕರ್ನಾಟಕ, ಕನ್ನಡಪ್ರಭ.

೨. **ವಾರಪತ್ರಿಕೆ** : ಲಂಕೇಶ್ ಪತ್ರಿಕೆ, ಅಗ್ನಿ, ವಾರಪತ್ರಿಕೆ, ಸುಧಾ.

೩. **ಮಾಸಪತ್ರಿಕೆ** : ಸಂಕ್ರಮಣ, ವಾಲ್ಮೀಕಿ ಸಂದೇಶ, ವಾಲ್ಮೀಕಿ ಬಂಧು, ಸ್ಫೂರ್ತಿ, ಶರಣ ಹರಳಯ್ಯ.

೪. **ದ್ವೈಮಾಸಿಕ** : ಸ್ವತಂತ್ರ ಕರ್ನಾಟಕ, ಇತ್ಯಾದಿ.

೫. **ನಿಯತಕಾಲಿಕೆ** : ಅರಿವುಬರಹ, ೧೯೯೫-೧೯೯೭.



ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ. ಆದಿಕವಿ ಪಂಪ, ಸಾಹಿತ್ಯಕ್ಕೆ ಅನ್ವಯಿಸಿ ಹೇಳಿರುವ 'ದೇಸಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು' ಎಂಬ ಮಾತು ಪರ್ಯಾಯವಾಗಿ ಇದನ್ನೇ ಧ್ವನಿಸುತ್ತದೆ.

ಸಂಸ್ಕೃತಿ ಎನ್ನುವುದು ಸಮೂಹಸಮ್ಮತ ಜೀವನಪದ್ಧತಿಯಾಗಿದೆ. ಕನ್ನಡಿಗರ ಇಂಥಹ ಜೀವನಪದ್ಧತಿಗೆ ಸಾವಿರ ಸಾವಿರ ವರ್ಷಗಳ ಇತಿಹಾಸವಿದೆ. ತನ್ನ ಆಯುರ್ಮಾನದಲ್ಲಿ ಆರ್ಯ-ಆಂಗ್ಲ ಸಂಸ್ಕೃತಿಗಳನ್ನು ಜೀರ್ಣಿಸಿಕೊಳ್ಳುತ್ತ ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕು ಮಾಡಿದೆ. ಹಿಂದಿನದು ಕನ್ನಡ ಸಂಸ್ಕೃತ ದ್ವಿಭಾಷಾ ಸಂದರ್ಭ. ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿ ಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇ ದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿ ಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶಿ ಚಳುವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ ಕನ್ನಡ ವಿಶ್ವವಿದ್ಯಾಲಯ ಮೊದಲು ಮಾಡಬೇಕಾದ ಕೆಲಸವೆಂದರೆ ವಿಸ್ಮೃತಿಯ ಸಾಗರದಲ್ಲಿ ಮುಳುಗಿಹೋಗಿರುವ ನಮ್ಮ ಪಾರಂಪರಿಕ ಕ್ರಿಯೆ, ಪ್ರಕ್ರಿಯೆ ರೂಪದ 'ಸ್ವದೇಶಿಸತ್ಯ'ಗಳನ್ನು ಶೋಧಿಸುವುದು.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, ಅದನ್ನು ತನ್ನ ಪ್ರಸಾರಾಂಗದ ಮೂಲಕ ಪ್ರಧಾನವಾಗಿ ಪೂರೈಸುತ್ತಲಿದೆ. ಈ ನಿಟ್ಟಿನಲ್ಲಿ ಪ್ರಕಟವಾದ ಇತ್ತೀಚಿನ ಪುಸ್ತಕ, 'ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು'.

ಅನ್ಯಾಯವನ್ನು ಸಹಿಸಿಕೊಂಡು ಹೋಗುತ್ತಲಿರುವ ಸ್ವಭಾವದ ಭಾರತೀಯರು ಇತ್ತೀಚೆ ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುವ ಮನೋಧರ್ಮವನ್ನು ರೂಢಿಸಿಕೊಂಡಿರುವ ಫಲ 'ಚಳವಳಿ'. ಏಕೀಕರಣೋತ್ತರ ಕರ್ನಾಟಕದಲ್ಲಿ ತಲೆದೋರಿದ ಇಂಥ ಆರು ಮುಖ್ಯ ಚಳವಳಿಗಳನ್ನು ಕುರಿತು ಇತಿಹಾಸ ವಿಭಾಗ ಯೋಜನೆ ಯೊಂದನ್ನು ಕೈಗೆತ್ತಿಗೊಂಡಿದೆ. ಇದರ ಅಂಗವಾಗಿ ಪ್ರಕಟವಾಗು ತ್ತಲಿರುವ ಆರು ಕೃತಿಗಳಲ್ಲಿ 'ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು' ಒಂದು. ಇದನ್ನು ರಚಿಸಿದ ಪ್ರೊ. ಲಕ್ಷ್ಮಣ್ ತೆಲಗಾವಿ ಅವರಿಗೆ ನಮ್ಮ ಧನ್ಯವಾದಗಳು ಸಲ್ಲುತ್ತವೆ.

ಎಂ. ಎಂ. ಕಲಬುರ್ಗಿ
ಕುಲಪತಿಗಳು